



ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕನ್ನಡ ಎಂ.ಫಿಲ್ ಪದವಿಯ ಭಾಗವಾಗಿ ಸಾದರಪಡಿಸಿದ ನಿಬಂಧ

# "ಶ್ರೀರಾಮಾಯಣದರ್ಶನಂ ಮಹಾಕಾವ್ಯದ ಪ್ರಮುಖ ಸ್ತ್ರೀ ಪಾತ್ರಗಳು"

ನಿಬಂಧಕಾರರು
ಶಶಿರೇಖಾ ಎಸ್.
ಕನ್ನಡ ಎಂ.ಫಿಲ್
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು

ಮಾರ್ಗದರ್ಶಕರು
ಡಾ|| ಪ್ರಧಾನ ಗುರುದತ್ತ
ನಿವೃತ್ತ ಪ್ರಾಧ್ಯಾಪಕರು
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ, ಮೈಸೂರು.



ಕನ್ನಡ ವಿಶ್ವವಿದ್ಯಾಲಯ, ಹಂಪಿ.




ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕನ್ನಡ ಎಂ.ಫಿಲ್ ಪದವಿಯ ಭಾಗವಾಗಿ ಸಾದರಪಡಿಸಿದ ನಿಬಂಧ

# "ಶ್ರೀರಾಮಾಯಣದರ್ಶನಂ ಮಹಾಕಾವ್ಯದ ಪ್ರಮುಖ ಸ್ತ್ರೀ ಪಾತ್ರಗಳು"




**<u>ನಿಬಂಧಕಾರರು</u>**

**ಶಶಿರೇಖಾ ಎಸ್.**

ಕನ್ನಡ ಎಂ.ಫಿಲ್

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು



**<u>ಮಾರ್ಗದರ್ಶಕರು</u>**

**ಡಾ|| ಪ್ರಧಾನ್ ಗುರುದತ್ತ**

ನಿವೃತ್ತ ಪ್ರಾಧ್ಯಾಪಕರು

ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ

ಮಾನಸ ಗಂಗೋತ್ರಿ, ಮೈಸೂರು.


ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಮಾರ್ಗದರ್ಶಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಕನ್ನಡ ಎಂ.ಫಿಲ್ ಪದವಿಯ ವಿದ್ಯಾರ್ಥಿನಿಯಾದ **ಶಶಿರೇಖಾ ಎಸ್**. ಅವರು ನನ್ನ ಮಾರ್ಗದರ್ಶನದಲ್ಲಿ **"ಶ್ರೀರಾಮಾಯಣ ದರ್ಶನಂ ಮಹಾಕಾವ್ಯದ ಪ್ರಮುಖ ಸ್ತ್ರೀ ಪಾತ್ರಗಳು"** ಎಂಬ ಶೀರ್ಷಿಕೆಯ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾನಿಲಯಕ್ಕೆ, ಅಥವಾ ಬೇರೆ ಯಾವುದೇ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೋಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: 05/08/07

ಸ್ಥಳ : ಮೈಸೂರು

ಪ್ರಧಾನ್ ಗುರುದತ್ತ

**ಮಾರ್ಗದರ್ಶಕರು**

ನಿವೃತ್ತ ಪ್ರಾಧ್ಯಾಪಕರು

ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ

ಮಾನಸಗಂಗೋತ್ರಿ, ಮೈಸೂರು.

# ಅಭ್ಯರ್ಥಿಯ ಘೋಷಣಾ ಪತ್ರ

**ಡಾ॥ ಪ್ರಧಾನ್‌ಗುರುದತ್ತ** - ನಿವೃತ್ತ ಪ್ರಾಧ್ಯಾಪಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು. ಇವರ ಮಾರ್ಗದರ್ಶನದಲ್ಲಿ **"ಶ್ರೀರಾಮಾಯಣದರ್ಶನಂ ಮಹಾಕಾವ್ಯದ ಪ್ರಮುಖ ಸ್ತ್ರೀ ಪಾತ್ರಗಳು"** ಎಂಬ ವಿಷಯದ ಬಗ್ಗೆ ನಡೆಸಿದ ಅಧ್ಯಯನದ ಫಲವೇ ಈ ನಿಬಂಧ.

ಈ ನಿಬಂಧವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾನಿಲಯಕ್ಕೆ ಅಥವಾ ಬೇರೆ ಯಾವುದೇ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೋಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: 04/08/07

ಸ್ಥಳ : ಮೈಸೂರು

ಶಶಿರೇಖಾ.ಎಸ್.

**ನಿಬಂಧಕಾರರು**

ಕನ್ನಡ ಎಂ.ಫಿಲ್

ಕನ್ನಡ ವಿಶ್ವವಿದ್ಯಾನಿಲಯ, ಹಂಪಿ

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮಿಪುರಂ, ಮೈಸೂರು.

# 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದ ಪ್ರಮುಖ ಸ್ತ್ರೀ ಪಾತ್ರಗಳು.

**ಪರಿವಿಡಿ:**

# ೧. ಶ್ರೀ ಕುವೆಂಪು

ಕನ್ನಡ ಸಾಹಿತ್ಯದ ಇತಿಹಾದಲ್ಲಿ ಇಪ್ಪತ್ತನೆಯ ಶತಮಾನ ‘ಕುವೆಂಪುಯುಗ’ ಎಂದೇ ಕರೆಸಿಕೊಂಡಿದೆ. ಆಧುನಿಕ ಸಾಹಿತ್ಯದ ನವೋದಯ ಕಾಲಘಟ್ಟದಲ್ಲಿ ರಸರುಷಿ ಕುವೆಂಪು ಮಹೋನ್ನತವಾದ  ಸ್ಥಾನವನ್ನು ಅಲಂಕರಿಸಿದ್ದಾರೆ. ಕುವೆಂಪು ಅವರು ಕನ್ನಡ ಸಾಹಿತಿಗಳ ಮೇಲೆ ಬೀರಿರುವ, ಬೀರುತ್ತಿರುವ ಪ್ರಭಾವ ಅಗಾಧವಾದದ್ದು. ಅಂದಿನಿಂದ ಇಂದಿನವರೆಗೆ ಮಾತ್ರವಲ್ಲದೆ ಮುಂದೆಯೂ ಕನ್ನಡ ಸಾಹಿತ್ಯದಲ್ಲಿ ಕುವೆಂಪು ಅವರೇ ಎಲ್ಲರ ಆದರ್ಶದ ರಸರುಷಿ. ಕುವೆಂಪು ಅವರು ಎಲ್ಲ ಪ್ರಕಾರಗಳಲ್ಲೂ ಹೊಸ ಪ್ರಯೋಗಮಾಡಿ ಉತ್ತಮ ಕೃತಿಗಳನ್ನು ನೀಡಿದ್ದಾರೆ. ಕಾವ್ಯ, ನಾಟಕ, ಸಣ್ಣಕತೆ, ಕಾದಂಬರಿ, ಕಥನ, ಕವನ, ಮಹಾಕಾವ್ಯ, ಕಾವ್ಯಮೀಮಾಂಸೆ, ಸಾಹಿತ್ಯವಿಮರ್ಶೆ ಎಲ್ಲ ಕ್ಷೇತ್ರಕ್ಕೂ ಶ್ರೇಷ್ಠ ಕೊಡುಗೆಯನ್ನು ನೀಡಿದ್ದಾರೆ.೧ "ಆಧುನಿಕ ಕನ್ನಡಸಾಹಿತ್ಯದ ಯಾವುದೇ ಪ್ರಕಾರವನ್ನು ಕರಿತು ಅಧ್ಯಯನ ನಡೆಸುವಾಗಲೂ ಕುವೆಂಪು ಅವರ ಕೃತಿಗಳನ್ನು ಹೊರೆತುಪಡಿಸಿದರೆ ಆ ಅಧ್ಯಯನ ಅಸಂಪೂರ್ಣ ಎನ್ನುವಷ್ಟರ ಮಟ್ಟಿಗೆ ಪ್ರತಿಯೊಂದು ವಿಭಾಗದಲ್ಲಿ ಗಟ್ಟಿಕೃತಿಗಳನ್ನು ಅವರು ರಚಿಸಿದ್ದಾರೆ". ಆಧುನಿಕ ಕನ್ನಡ ಸಾಹಿತ್ಯದ ಬಹುತೇಕ ಎಲ್ಲ ಪ್ರಕಾರಗಳಲ್ಲಿಯೂ ಅಪಾರ ಕೃಷಿಮಾಡಿ ಸಿದ್ಧಿ ಪಡೆದಿರುವ ಹಿರಿಮೆ ಅವರದು.‘ಅವರ ಸಾಹಿತ್ಯದಲ್ಲಿ ಸಮೃದ್ಧಿ ಸಿದ್ಧಿ ಎರಡೂ ಇದೆ’.[೨]

‘ಕುವೆಂಪು’ ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದ ಕವಿಯ ಪೂರ್ಣಹೆಸರು‘ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ’. ಇವರ ತಂದೆಯ ಮನೆ ತೀರ್ಥಹಳ್ಳಿ ತಾಲ್ಲೂಕಿನ ಕುಪ್ಪಳ್ಳಿ.ಇವರು ಹುಟ್ಟಿದ್ದು ೧೯೦೪ ಡಿಸೆಂಬರ್ ೨೯ ರಂದು ತಾಯಿಯ ತವರು ಮನೆಯಾದ ಚಿಕ್ಕಮಂಗಳೂರು ಜಿಲ್ಲೆ ಕೊಪ್ಪ ತಾಲ್ಲೋಕಿನ ಹಿರಿಕೊಡಿಗೆಯಲ್ಲಿ.ಮಲೆನಾಡ ನಿಸರ್ಗದ ನಡುವಿನ ಶಿಶು ಕುವೆಂಪು.ಕಾನನದ ಪ್ರತಿಯೊಂದು ಕ್ರಿಯೆ ಪ್ರತಿಕ್ರಿಯೆಗಳನ್ನು ಸೂಕ್ಷ್ಮವಾಗಿ ಗಮನಿಸಿರುವ ಇವರು ಕಾವ್ಯದಲ್ಲಿ ಕಾದಂಬರಿಯಲ್ಲಿ, ಮಹಾಕಾವ್ಯದಲ್ಲಿ ಸಹೃದಯರಿಗೆ ಕಾನನದ ವರ್ಣನೆಯನ್ನು ಉಣಬಡಿಸಿದ್ದಾರೆ. ರಾಮಕೃಷ್ಣಾಶ್ರಮದ ಪ್ರಭಾವದಿಂದ ಮೈಗೂಡಿಸಿಕೊಂಡ ಅಧ್ಯಾತ್ಮ ಹಾಗೂ ಸಹಜವಾಗಿ ಮೈಗೂಡಿಸಿಕೊಂಡ ಪ್ರಕೃತಿ ಸೌಂದರ್ಯದ ಹದವಾದ ಮಿಶ್ರಣ ಇವರ ಬರಹದಲ್ಲಿದೆ.

ಕುವೆಂಪು ಅವರಿಗೆ ಚಿಕ್ಕಂದಿನಿಂದಲೇ ಸಾಹಿತ್ಯದ ಸಂಸ್ಕಾರ ದೊರೆಯಿತು. ಮನೆಯೇ ಮೊದಲ ಶಾಲೆಯಾಯಿತು. ಇವರ ತಂದೆ ಮತ್ತು ಚಿಕ್ಕಪ್ಪ ಸಾಹಿತ್ಯಾಸಕ್ತರು. ಮನೆಯಲ್ಲಿ ಸದಾ ನಡೆಯುತ್ತಿದ್ದ ‘ಜೈಮಿನಿಭಾರತ’, ‘ತೊರವೆ ರಾಮಾಯಣ’ದ ವಾಚನವನ್ನು ಆಸಕ್ತಿಯಿಂದ ಆಲಿಸುತ್ತಿದ್ದರು. ಐಗಳು ಮೊದಲು ವಿದ್ಯಾಭ್ಯಾಸ ಮಾಡಿಸಿದರು. ಅನಂತರ ತೀರ್ಥಹಳ್ಳಿ ಶಾಲೆ. ಅನಂತರ ಮೈಸೂರಿನ ಹಾರ್ಡವಿಕ್ ಹೈಸ್ಕೂಲಿನಲ್ಲಿ ವಿದ್ಯಾಭ್ಯಾಸ ಮಾಡಿದರು.ಇವರು ಷೆಲ್ಲಿ, ಕೀಟ್ಸ್, ವರ್ಡವರ್ತ ಆಂಗ್ಲಕವಿಯ ಕವನಗಳನ್ನು, ಟಾಲಸ್ಟಾಯ್ ಕಾದಂಬರಿಗಳನ್ನು ಓದುತ್ತಿದ್ದರು. "ಪೌರ್ವಾತ್ಯ, ಪಾಶ್ಚಾತ್ಯ ತತ್ವಜ್ಞರ ಚಿಂತನಾಶೀಲ ಬರೆವಣಿಗೆಗಳು; ಅವರ ಭಾವ, ಬುದ್ಧಿಗಳಿಗೆ ಪುಷ್ಟಿ ನೀಡಿದವು. ಶ್ರೀರಾಮಕೃಷ್ಣಾಶ್ರಮದ ಮೈಸೂರು ಶಾಖೆಯ ಅಧ್ಯಕ್ಷರಾದ ಶ್ರೀ ಸ್ವಾಮಿ ಸಿದ್ಧೇಶ್ವರಾ-ನಂದರು ಬಾಲಕನಿಗೆ ತುಂಬ ಪ್ರಿಯರಾಗಿ ಅವನ ಸಕಲ ಯೋಗಕ್ಷೇಮಗಳನ್ನು ವಹಿಸಿಕೊಂಡರು.

----------

೧. ಪ್ರಭುಶಂಕರ, ‘ಕುವೆಂಪು’, ಸಾಲುದೀಪಗಳು, ಸಂ.ಜಿ.ಎಸ್. ಸಿದ್ಧಲಿಂಗಯ್ಯ, ಎಂ.ಎಚ್. ಕೃಷ್ಣಯ್ಯ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಮೂರನೆಯ ಮುದ್ರಣ ೨೦೦೫. ಪು.೨೨೮.

೨. ಪ್ರೋ.ಕೆ.ಭೈರವ ಮೂರ್ತಿ, ‘ಕುವೆಂಪು’ :ಚಿರಂತನ – ಚಿರನೂತನ, ಕುವೆಂಪು ಸಾಹಿತ್ಯಾವಲೋಕನ, ಸಂ. ಎಸ್. ಚೆನ್ನಪ್ಪ, ಕುವೆಂಪು ವಿಚಾರ ವೇದಿಕೆ, ಮೈಸೂರು, ಮೊದಲಮುದ್ರಣ ೨೦೦೪, ಪು.೯.

ಸರ್ವಧರ್ಮ ಸಮನ್ವಯಾಚಾರ್ಯರಾದ ಶ್ರೀರಾಮಕೃಷ್ಣರೂ ಅವರ ಶಿಷ್ಯರಾದ ಸ್ವಾಮಿ ವಿವೇಕಾನಂದರೂ ಪುಟ್ಟಪ್ಪನವರಿಗೆ ಆದರ್ಶ ವ್ಯಕ್ತಿಗಳಾದರು. ಅವರ ಚೇತನ ಸಮಸ್ತವನ್ನು ಆಕ್ರಮಿಸಿಕೊಂಡರು".[೩]

"ಇಂಗ್ಲೀಷ್ ಕವಿಗಳ ಕವನಗಳ ಸಮ್ಮೋಹನ, ಇಂಗ್ಲೀಷ್ ಭಾಷೆ, ಛಂದಸ್ಸುಗಳ ಮೇಲಣ ಪ್ರಭುತ್ವ ಇವು ಬಾಲಕನಲ್ಲಿ ಹೊಸ ಆಸೆ ಆಕಾಂಕ್ಷೆಗಳನ್ನು ಅರಳಿಸಿದವು. ಹದಿನೆಂಟರ ಹರೆಯದ ಪುಟ್ಟಪ್ಪ ೧೯೨೨ರಲ್ಲಿ ತಮ್ಮ ಇಂಗ್ಲೀಷ್ ಕವನಗಳ ಪುಟ್ಟ ಸಂಕಲನವೊಂದನ್ನು 'ಬಿಗಿನರ್ಸ ಮೂಸ್' ಎಂಬ ಹೆಸರಿನಲ್ಲಿ ಪ್ರಕಟಿಸಿದರು. ಆಗಿನ್ನೂ ಅವರು ಹೈಸ್ಕೂಲು ಮೂರನೆಯ ತರಗತಿಯ ವಿದ್ಯಾರ್ಥಿ. ಕವನಗಳನ್ನು ಓದಿದ ಮಿತ್ರರೂ, ಹಿರಿಯರೂ ಕವನಗಳ ಭಾಷೆಗೆ, ಉಪಮೆ, ರೂಪಕಗಳಿಗೆ, ವಸ್ತುವೈವಿಧ್ಯಕ್ಕೆ, ಕಲ್ಪನಾಚಾತುರ್ಯಕ್ಕೆ ಮಾರುಹೋದರು. ಆಕಸ್ಮಿಕ ಎಂಬಂತೆ ಮೈಸೂರಿಗೆ ಬಂದಿದ್ದ ಐರಿಷ್ ಕವಿ ಜೇಮ್ಸ್ ಕಸಿನ್ಸ್ ಅವರಿಗೆ ಪುಟ್ಟಪ್ಪನವರು ತಮ್ಮ ಕವನಗಳನ್ನು ತೋರಿಸಿದರು. ಕವನಗಳನ್ನು ಓದಿದ ಜೇಮ್ಸ್ ಕಸಿನ್ಸ್ ಮೆಚ್ಚಿ ಪ್ರೋತ್ಸಾಹಿಸುವ ಬದಲು 'ರವೀಂದ್ರರು ತಮ್ಮ ತಾಯಿ ನುಡಿಯಾದ ಬಂಗಾಳಿಯಲ್ಲಿ ಬರೆದಂತೆ ನೀನು ನಿನ್ನ ತಾಯಿನುಡಿಯಾದ ಕನ್ನಡದಲ್ಲಿ ಬರೆ, ಉತ್ತಮ ಕವಿಯಾಗುತ್ತೀಯೆ ಎಂದರು. ಆ ಕ್ಷಣಕ್ಕೆ ಅದನ್ನು ಒಪ್ಪದ ಪುಟ್ಟಪ್ಪನವರು ಪ್ರಯೋಗಮಾಡಿದರೆ ತಪ್ಪೇನು ಎಂದು ತಮ್ಮದೇ 'ಏಪ್ರಿಲ್' ಎಂಬ ಆಂಗ್ಲಕವನವನ್ನು 'ಚೈತ್ರ–ವೈಶಾಖ'ಎಂದು ಅನುವಾದಿಸಿ ಪ್ರಕಟಿಸಿದರು. ಕವಿಯ ಜೀವನವಾಹಿನಿ ಇಂಗ್ಲೀಷ್‌ನಿಂದ ಕನ್ನಡದ ಕಡೆಗೆ ತಿರುಗಿ ಹರಿಯತೊಡಗಿತು."[೪]

ಪುಟ್ಟಪ್ಪನವರ ಕನ್ನಡ ಕವನಗಳು ಪ್ರಸಿದ್ಧವಾಗಿ ಗುರುಗಳ, ವಿದ್ಯಾರ್ಥಿಮಿತ್ರರ ಮೆಚ್ಚುಗೆ ಪಡೆದವು. ಪೂಜ್ಯರಾದ ಸಿದ್ಧೇಶ್ವರಾನಂದ ಸ್ವಾಮಿಗಳ, ಪ್ರಾಧ್ಯಾಪಕರುಗಳಾದ ಪ್ರೊ.ಟಿ.ಎಸ್. ವೆಂಕಣ್ಣಯ್ಯ, ಪ್ರೊ.ಎ.ಆರ್.ಕೃಷ್ಣಶಾಸ್ತ್ರೀ, ಪ್ರೊ.ಬಿ.ಎಂ.ಶ್ರೀಕಂಠಯ್ಯ ಅವರ ಪ್ರಭಾವ, ಪ್ರೋತ್ಸಾಹಗಳಿಂದ ಪುಟ್ಟಪ್ಪ ಅವರ ಸಾಹಿತ್ಯಸೇವೆ ಹೆಚ್ಚಿನ ಮಹತ್ವ ಪಡೆದು ಬೆಳೆಯಿತು.

೧೯೨೭ ರಲ್ಲಿ ಮೈಸೂರು ಮಹಾರಾಜ ಕಾಲೇಜಿನಲ್ಲಿ ಬಿ.ಎ. ಪದವಿ, ೧೯೨೯ರಲ್ಲಿ ಕನ್ನಡ ಎಂ.ಎ. ಪದವಿ ಪಡೆದ ಕುವೆಂಪು ಯುವರಾಜ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ಸೇವೆ ಆರಂಭಿಸಿ ಮುಂದೆ ಉಪಪ್ರಾಧ್ಯಾಪಕರಾಗಿ,ಪ್ರಾಧ್ಯಾಪಕರಾಗಿ,ಮಹಾರಾಜ ಕಾಲೇಜಿನ ಪ್ರಾಂಶುಪಾಲರಾಗಿ ಸೇವೆಸಲ್ಲಿಸಿ, ಮೈಸೂರು ವಿಶ್ವ ವಿದ್ಯಾನಿಲಯದ ಕುಲಪತಿಗಳಾಗಿಯೂ ಸೇವೆ ಸಲ್ಲಿಸಿದ್ದಾರೆ. "ಮೈಸೂರು ವಿಶ್ವವಿದ್ಯಾನಿಲಯದ ಸರ್ವಾಂಗೀಣ ಪ್ರಗತಿಗಾಗಿ ಅತ್ಯಂತ ಮಹತ್ವದ ಯೋಜನೆಗಳನ್ನು ರೂಪಿಸಿದರು. ಕನ್ನಡ ಭಾಗ್ಯವೆಂಬಂತೆ ಕುವೆಂಪು ಅವರ ಕನಸು ಮೂರ್ತರೂಪವಾಗಿ ಮಾನಸಗಂಗೋತ್ರಿ ರೂಪುಗೊಂಡಿತು. ಸಂಶೋಧನಾಂಗ, ಪ್ರಸಾರಾಂಗ, ಬೋಧನಾಂಗಗಳ ನಿರ್ಮಾಣ ಅವರ ಅಭೂತಪೂರ್ವ ಸಾಧನೆಯ ಮೈಲಿಗಲ್ಲುಗಳು. ಕನ್ನಡ ಮಾಧ್ಯಮ ತರಗತಿಗಳ ಆರಂಭ,ಕನ್ನಡದಲ್ಲಿ ವೈಜ್ಞಾನಿಕ ಕೃತಿಗಳ ಪ್ರಕಟಣೆ ಇವೇ ಮೊದಲಾದವು ಅವರು ಕೈಗೊಂಡ ಪ್ರಗತಿಪರ ಯೋಜನೆಗಳು".[೫] "ಕುವೆಂಪು ತಮಗೆ ದೊರೆತ ಅಧಿಕಾರವನ್ನು .........ದೇಶಪೇಮ,

-----------

೩. ಪ್ರಭುಶಂಕರ, 'ಕುವೆಂಪು', ಸಾಲುದೀಪಗಳು, ಸಂ.ಜಿ.ಎಸ್. ಸಿದ್ಧಲಿಂಗಯ್ಯ, ಎಂ.ಎಚ್. ಕೃಷ್ಣಯ್ಯ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಮೂರನೆಯ ಮುದ್ರಣ ೨೦೦೫. ಪು.೨೨೮.

೪. ಅದೇ.

೫. ಪ್ರೊ.ಕೆ.ಭೈರವ ಮೂರ್ತಿ, 'ಕುವೆಂಪು' ಚಿರಂತನ – ಚಿರನೂತನ, ಕುವೆಂಪು ಸಾಹಿತ್ಯಾವಲೋಕನ, ಸಂ. ಎಸ್. ಚೆನ್ನಪ್ಪ, ಕುವೆಂಪು ವಿಚಾರ ವೇದಿಕೆ, ಮೈಸೂರು, ಮೊದಲಮುದ್ರಣ ೨೦೦೪, ಪು.೧೦

ಲೋಕಕಲ್ಯಾಣಗಳನ್ನು ಸದಾ ಗಮನದಲ್ಲಿಟ್ಟುಕೊಂಡು ಕರ್ತವ್ಯಪ್ರಜ್ಞೆಯಿಂದ ಸಮರ್ಪಣ ಮನೋಭಾವದಿಂದ ಕರ್ಮಯೋಗಿಯಂತೆ ನಿರ್ವಂಚನೆಯಿಂದ ನಿರ್ವಹಿಸಿದರು".[೬]

ಕುವೆಂಪು ಅವರ ಕನ್ನಡ ಸಾಹಿತ್ಯಸೇವೆ ಆಧುನಿಕ ಕನ್ನಡ ಸಾಹಿತ್ಯ ಲೋಕವನ್ನು ಸಂಪದ್ಯುಕ್ತಗೊಳಿಸಿದೆ. ಅವರ ಮೊದಲ ಕವನ ಸಂಕಲನ 'ಕೊಳಲು' ೧೯೩೦ ರಲ್ಲಿ ಪ್ರಕಟವಾಯಿತು. ಇದಕ್ಕೆ ಬಿ.ಎಂ. ಶ್ರೀಕಂಠಯ್ಯನವರು ಮುನ್ನುಡಿ ಬರೆದು ಆಶೀರ್ವಾದ ಮಾಡಿದ್ದಾರೆ. ಅವರು ಮುನ್ನುಡಿಯಲ್ಲಿ ಬರೆದಿರುವ ನುಡಿಗಳು ಕುವೆಂಪು ಅವರ ಪ್ರತಿಭೆಯನ್ನು ಎತ್ತಿತೋರಿಸುತ್ತವೆ:

"ಜೀವಾನಂದ, ಬ್ರಹ್ಮಾನಂದ, ಕಾವ್ಯಾನಂದಗಳನ್ನು ತಮ್ಮ ಶಕ್ತಿಗನುಗುಣವಾಗಿ ಅಂತಃಕರಣದಲ್ಲಿ ತುಂಬಿಕೊಳ್ಳುತ್ತಾ ಹಕ್ಕಿ ಹಾಡಿದಂತೆ ಸುಖವಾಗಿ ಹಾಡುವವರು ಪುಟ್ಟಪ್ಪನವರು. ಇವರ ತಿರುಳುಗನ್ನಡ ನುಡಿಗಳು, ಇಂಪಾದ ಹೊಸ ಹೊಸ ಮುದ್ದು ಪದ್ಯಗಳು, ಸರಳಶೈಲಿ, ಭಾವೋದ್ರೇಕ, ಗೀತಪ್ರವಾಹ, ಇವುಗಳ ಹೊಡೆತದಲ್ಲಿ ಏನಾದರೂ ತಪ್ಪುಗಳು ಒಮದು ವೇಳೆ ಬಿದ್ದಿದ್ದರೂ ಅವು ಕಾಣದಂತೆ ಮುಚ್ಚಿಹೋಗುವವು. ನೂರು ದೋಷಗಳಿದ್ದರೂ ಜೀವವಿದ್ದರೆ ಕಾವ್ಯ ಕಾವ್ಯವೇ, ಒಂದು ತಪ್ಪಿಲ್ಲದಿದ್ದರೂ ಜೀವವಿಲ್ಲದ ಕಾವ್ಯ ಕಾವ್ಯವೇ ಅಲ್ಲ. ಪುಟ್ಟಪ್ಪ ನವರ ಉತ್ತಮ ಕವನಗಳಲ್ಲಿ ಈ ಜೀವವಿದೆ; ಆತ್ಮವಿದೆ; ಇರುವುದರಿಂದ ಅಮೃತತ್ವದ ಸಾರವಿದೆ" ಎಂದಿದ್ದಾರೆ.

'ಕೊಳಲು', 'ನವಿಲು', 'ಪಕ್ಷಿಕಾಶಿ', 'ಅಗ್ನಿಹಂಸ', 'ಕೋಗಿಲೆ ಮತ್ತು ಸೋವಿಯತ್ ರಷ್ಯಾ', 'ಪ್ರೇಮಕಾಶ್ಮೀರ', 'ಚಂದ್ರಮಂಚಕೆ ಬಾ ಚಕೋರಿ', 'ಇಕ್ಷುಗಂಗೋತ್ರಿ', 'ಕಲಾಸುಂದರಿ', 'ಪಾಂಚಜನ್ಯ', 'ಕೃತ್ತಿಕೆ', 'ಅನಿಕೇತನ', 'ಜೇನಾಗುವಾ', 'ಷೋಡಷಿ', 'ಅನುತ್ತರಾ', 'ಮಂತ್ರಾಕ್ಷತೆ',-ಇವೇ ಮೊದಲಾದ ಕವನ ಸಂಕಲನಗಳನ್ನು ನೀಡಿದ್ದಾರೆ. 'ಬೊಮ್ಮನಹಳ್ಳಿಯ ಕಿಂದರಿಜೋಗಿ', 'ನನ್ನಮನೆ ಮರಿವಿಜ್ಞಾನಿ', 'ಮೇಘಪುರ', ಮೊದಲಾದ ಶಿಶುಗೀತೆಗಳನ್ನು ಬರೆದಿದ್ದಾರೆ. ಇವರ ಕಥನಕವನಗಳು ಸಹೃದಯರ ಮೆಚ್ಚುಗೆಗಳಿಸಿವೆ. " ಕುವೆಂಪು ಅವರ ಭಾವಗೀತೆಗಳು ಅದೇ ಒಂದು ವೈವಿಧ್ಯಪೂರ್ಣವಾದ ಜಗತ್ತು. ಅವರ ಭಾವಗೀತೆಗಳಲ್ಲಿ ಪ್ರಕೃತಿ, ಪ್ರಣಯಪ್ರಪಂಚ, ಸಂಸಾರಜೀವನ, ಸಾಮಾಜಿಕ, ರಾಜಕೀಯ, ನಾಡು-ನುಡಿ-ರಾಷ್ಟ್ರ, ದೇವರು-ಧರ್ಮ, ತತ್ವ ಕಲಾತತ್ವ, ಜೀವನದೃಷ್ಟಿ, ಹಾಸ್ಯವಿಡಂಬನೆ, ಬಹುಮುಖವಾದ ಅನುಭವ ಪ್ರಪಂಚವೇ ಇದೆ. ಇಲ್ಲಿ ಜೀವನ ಸಂಗ್ರಾಮದ ಒಳನೋಟವಿದೆ. ಕವಿಯಲ್ಲಿ ಪ್ರಕೃತಿಪರವಾದ ಅನನ್ಯ ತಲ್ಲೀನತೆಯಿದೆ. ಇಲ್ಲಿ ಪ್ರಕೃತಿಗೀತೆಗಳು ನಿಸರ್ಗದ ಎಲ್ಲ ಮುಖಗಳ ವಾಪಾರವನ್ನು ತೆರೆದುತೋರುತ್ತದೆ. 'ಪ್ರಕೃತಿ ಆರಾಧನೆ ಪರಮನಾರಾಧನೆ'ಎಂಬುದು ಕವಿ ಪ್ರಕೃತಿಯಿಂದ ಪಡೆದ ಆತ್ಮಾನುಭೂತಿಯಾಗಿದೆ. 'ಪ್ರೇಮಗೀತೆಗಳಲ್ಲಿ ಆಧ್ಯಾತ್ಮದ ಪ್ರಭಾವಳಿಯಿದೆ! ಕವಿಯ ಸಾಮಾಜಿಕ ಕವನಗಳಲ್ಲಿ ಯುಗವಾಣಿಯ ಆವಿಷ್ಕಾರವಿದೆ'. ಕವಿ ಸೂರ್ಯೋದಯ, ಸ್ವಾತಂತ್ರ್ಯ, ಸಮಾನತೆ, ಕ್ರಾಂತಿ, ಇಂದಿನ ಬೆಲೆಗಳನ್ನು ಜ್ವಲಂತವಾಗಿ ಪ್ರತಿಪಾದಿಸಿದ್ದಾರೆ. ಕವಿ 'ಕನ್ನಡಡಿಂಡಿಮ'ದ ಮೂಲಕ ಕನ್ನಡಿಗರಲ್ಲಿ ಜಾಗೃತಪ್ರಜ್ಞೆ ಮೂಡಿಸಿದ್ದಾರೆ".[೭]

ಆಧುನಿಕ ಕನ್ನಡ ನಾಟಕ ಪ್ರಕಾರಕ್ಕೆ ಕುವೆಂಪು ಅವರ ಕೊಡುಗೆ ಅಪಾರವಾದದ್ದು. 'ಬೆರಳ್‌ಗೆ ಕೊರಳ್', 'ಶ್ಮಶಾನ ಕುರುಕ್ಷೇತ್ರ', 'ಶೂದ್ರತಪಸ್ವಿ', 'ಚಂದ್ರಹಾಸ', 'ಯಮನಸೋಲು', 'ವಾಲ್ಮೀಕಿಯಭಾಗ್ಯ', ಎಂಬ ಪೌರಾಣಿಕ ನಾಟಕಗಳನ್ನು; 'ಮಹಾರಾತ್ರಿ', 'ರಕ್ತಾಕ್ಷಿ', 'ಬಿರುಗಾಳಿ', ಎಂಬ ಐತಿಹಾಸಿಕ ನಾಟಕಗಳನ್ನು; 'ಜಲಗಾರ', 'ಬಲಿದಾನ', ಎಂಬ ಸಾಮಾಜಿಕ ನಾಟಕಗಳನ್ನು; 'ನನ್ನಗೋಪಾಲ', 'ಮೊಡ್ಡಣ್ಣನ ತಮ್ಮ', ಎಂಬ ಮಕ್ಕಳ ನಾಟಕಗಳನ್ನು ರಚಿಸಿದ್ದಾರೆ.

----------

೬. ಪ್ರೋ.ಕೆ.ಭೈರವ ಮೂರ್ತಿ, 'ಕುವೆಂಪು' ಚಿರಂತನ - ಚಿರನೂತನ, ಕುವೆಂಪು ಸಾಹಿತ್ಯಾವಲೋಕನ, ಸಂ. ಎಸ್. ಚೆನ್ನಪ್ಪ, ಕುವೆಂಪು ವಿಚಾರ ವೇದಿಕೆ, ಮೈಸೂರು, ಮೊದಲಮುದ್ರಣ ೨೦೦೪, ಪು.೧೦

೭. ಅದೇ,ಪು.೧೩

'ಸನ್ಯಾಸಿ ಮತ್ತು ಇತರ ಕಥೆಗಳು', 'ನನ್ನ ದೇವರು ಮತ್ತು ಇತರ ಕಥೆಗಳು', ಕುವೆಂಪು ಅವರ ಉತ್ತಮ ಕಥಾಸಂಕಲಗಳು. 'ಕಾನೂರು ಹೆಗ್ಗಡತಿ', 'ಮಲೆಗಳಲ್ಲಿ ಮದುಮಗಳು', ಕುವೆಂಪು ಅವರ ಮಹತ್ವದ ಕಾದಂಬರಿಗಳು. "ಮಲೆಗಳಲ್ಲಿ ಮದುಮಗಳು ಈ ಶತಮಾನದ ಮಹಾಕಾದಂಬರಿಗಳಲ್ಲೊಂದಾಗಿದೆ. ಮಲೆನಾಡಿನ ಜನಜೀವನವನ್ನು ಅತ್ಯಂತ ಪರಿಣಾಮಕಾರಿಯಾಗಿ ಪ್ರಾದೇಶಕ ಬನಿಯೊಡನೆ ಸಾಂದ್ರವಾಗಿ ಚಿತ್ರಿಸುವ ಈ ಕಾದಂಬರಿಯು ಕವಿಯ 'ಪೂರ್ಣದೃಷ್ಟಿ'ಯನ್ನು ಬಿಂಬಿಸುತ್ತದೆ".[೮]

'ಚಿತ್ರಾಂಗದ' ಎಂಬ ಖಂಡಕಾವ್ಯದಲ್ಲಿ ಕುವೆಂಪು ಮುಂದಿನ ಮಹಾಕಾವ್ಯದ 'ಛಂದಸ್ಸ'ನ್ನು ಕಂಡುಕೊಂಡಿದ್ದಾರೆ. 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯ ರಚಿಸಿ ವಾಲ್ಮೀಕಿಯ ಕಥೆಗೆ ಹೊಸ ಚೈತನ್ಯ ಮತ್ತು ಶಕ್ತಿಯನ್ನು ಕೊಟ್ಟು ಪಾತ್ರಗಳನ್ನು ಊರ್ಧ್ವಗಾಮಿಯಾಗಿ ಮಾಡಿ ಕನ್ನಡ ಸಾಹಿತ್ಯ ಲೋಕಕ್ಕೆ ಕಳಸವೆಂಬಂತೆ ಮಹಾಕಾವ್ಯವನ್ನು ರಚಿಸಿದ್ದಾರೆ. "'ಶ್ರೀ ಕುವೆಂಪುವ ಸೃಜಿಸಿದ ಮಹಾಛಂದಸ್ಸಿನ ಮೇರುಕೃತಿ ಜಗದ್ಭವ್ಯ ರಾಮಾಯಣಂ'– ಈ ಮಹಾಕಾವ್ಯದಲ್ಲಿ ಕನ್ನಡ ಸಾಹಿತ್ಯ ಸೂರ್ಯನ ತೇಜೋದರ್ಶನವಾಗುತ್ತದೆ. 'ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ,' ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯದ ಮೂರು ಕಣ್ಣುಗಳಾಗಿವೆ. ಮಹಾಛಂದಸ್ಸಿನಲ್ಲಿ ರಚಿತವಾಗಿರುವ ಈ ಮಹಾಕೃತಿ ಆಧುನಿಕ ಕನ್ನಡ ಕಾವ್ಯದ ಪರಮಸಿದ್ಧಿಯಾಗಿದೆ".[೯]

'ಮಲೆನಾಡಿನ ಚಿತ್ರಗಳು' ಎಂಬ ವೈಚಾರಿಕ ಪ್ರಬಂಧಗಳ ಸಂಕಲನವನ್ನು; 'ಶ್ರೀ ರಾಮಕೃಷ್ಣಪರಮಹಂಸ', 'ಸಾಮಿ ವಿವೇಕಾನಂದ', ಎಂಬ ಜೀವನ ಚರಿತ್ರೆಗಳನ್ನು; 'ನೆನಪಿನ ದೋಣಿಯಲ್ಲಿ' ಆತ್ಮಕಥೆಯನ್ನು ಬರೆದಿದ್ದಾರೆ. 'ತಪೋನಂದನ', 'ದ್ರೌಪದಿಯ ಶ್ರೀಮುಡಿ', 'ರಸೋವೈಸಃ' –ಕೃತಿಗಳನ್ನು ಕಾವ್ಯಮೀಮಾಂಸೆ ಮತ್ತು ವಿಮರ್ಶಾಕ್ಷೇತ್ರಕ್ಕೆ ಕಾಣಿಕೆ ನೀಡಿದ್ದಾರೆ.

"ವಿಶ್ವಮಾನವ ಸಂದೇಶ ನನ್ನ ಜೀವನದಲ್ಲಿ ಶಿಖರಪ್ರಜ್ಞೆಯಾಗಿ ಮೂಡಿಬಂದಿದೆ. ಇದು ಯಾವುದಕ್ಕೂ ವಿರೋಧವಲ್ಲ; ಎಲ್ಲದಕ್ಕೂ ಪೂರಕವಾದದ್ದು".[೧೦] ಎಂದು ವಿಶ್ವಮಾನವ ಸಂದೇಶ ನೀಡಿರುವ ಕುವೆಂಪು ಅದರಲ್ಲಿ ಮನುಜಮತ, ವಿಶ್ವಪಥ, ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿಗಳೆಂಬ ಪಂಚತಂತ್ರಗಳನ್ನು, ಸಪ್ತಸೂತ್ರಗಳನ್ನು ಹಾಗೂ 'ಅನಿಕೇತನ' ಎಂಬ ಗೀತೆಯನ್ನು ಒಳಗೊಂಡಂತೆ ಪ್ರಸಾರಮಾಡಿ ವಿಶ್ವಕವಿಯಾಗಿ ಮನ್ನಣೆ ಗೌರವ ಪಡೆದು ಅಮರರಾಗಿದ್ದಾರೆ.

ಕನ್ನಡದ ಉಸಿರಾದ 'ಕುವೆಂಪು' ಅವರಿಗೆ ಕನ್ನಡ ಜನತೆ, ಸರ್ಕಾರ, ವಿಶ್ವವಿದ್ಯಾನಿಲಯಗಳು, ಕೇಂದ್ರಸರ್ಕಾರ , ರಾಜ್ಯ ಮತ್ತು ಕೇಂದ್ರ ಅಕಾಡೆಮಿಗಳು ಎಲ್ಲ ಬಗೆಯ ಪ್ರಶಸ್ತಿ ಪುರಸ್ಕಾರ ನೀಡಿ ಗೌರವಿಸಿವೆ. 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯಕ್ಕೆ 'ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ', 'ಜ್ಞಾನಪೀಠ ಪ್ರಶಸ್ತಿ', 'ಪಂಪ ಪ್ರಶಸ್ತಿ', ಮೊಟ್ಟಮೊದಲ ಪ್ರಶಸ್ತಿಗಳಾಗಿ ಬಂದಿವೆ. ಪದ್ಮಭೂಷಣ, ರಾಷ್ಟ್ರಕವಿ, ಕರ್ನಾಟಕ ರತ್ನ, ಪ್ರಶಸ್ತಿಗಳು ಹಾಗೂ ಕೇಂದ್ರಸಾಹಿತ್ಯ ಅಕಾಡೆಮಿ ಫೆಲೋಷಿಪ್, ಮುಂತಾದ ಅಸಂಖ್ಯಾತ ಪ್ರಶಸ್ತಿ ಪುರಸ್ಕಾರಗಳು ಕುವೆಂಪು ಅವರನ್ನು ಅರಸಿಕೊಂಡು ಬಂದಿವೆ. ಮೈಸೂರು, ಬೆಂಗಳೂರು, ಕರ್ನಾಟಕ, ಗುಲ್ಬರ್ಗಾ, ಕಾನ್ಪುರ ವಿಶ್ವವಿದ್ಯಾನಿಲಯಗಳು ಹಾಗೂ ಅಮೇರಿಕಾದ ವರ್ಲ್ಡ್ ಅಕಾಡೆಮಿ ಆಫ್ ಆರ್ಟ್ಸ್ ಅಂಡ್ ಕಲ್ಚರ್ ಸಂಸ್ಥೆ ಕುವೆಂಪು ಅವರಿಗೆ ಗೌರವ ಡಾಕ್ಟರೇಟ್ ಪದವಿಗಳನ್ನು ನೀಡಿ ಗೌರವಿಸಿದೆ. ಶಿಷ್ಯರು, ಮಿತ್ರರು, ಅಭಿಮಾನಿಗಳಿಂದ ಮಹಾಕವಿಗೆ

----------

೮. ಅದೇ.

೯. ಅದೇ.೧೦. ಉದ್ಧೃತ– ಅದೇ, ಪು.೧೪

೧೦. ಉದ್ಧೃತ– ಅದೇ, ಪು.೧೪

‘ಗಂಗೋತ್ರಿ’ ಎಂಬ ಬೃಹತ್ ಅಭಿನಂದನ ಗ್ರಂಥ ಗೌರವವು ಸಮರ್ಪಿತವಾಗಿವೆ. ಇಂಥದೇ ಇನ್ನೊಂದು ಅಭಿನಂದನ ಗ್ರಂಥ ‘ಸಹ್ಯಾದ್ರಿ’ ಅವರಿಗೆ ಸಮರ್ಪಿತವಾಗಿದೆ. ಇಂಥ ಗ್ರಂಥಗಳು ಅನೇಕವಾಗಿದ್ದು, ಇದೂ ಒಂದು ವಿಕ್ರಮವೇ ಆಗಿದೆ.

## ೨. ಮಹಾಕಾವ್ಯ ಪರಂಪರೆಯಲ್ಲಿ 'ಶ್ರೀರಾಮಾಯಣದರ್ಶನಂ' ವೈಶಿಷ್ಟ್ಯ

'ಮಹಾಕಾವ್ಯ' ಒಂದು ಜನಾಂಗದ ಸಾಂಸ್ಕೃತಿಕ ಇತಿಹಾಸದ ದಾಖಲೆ. ಒಂದು ದೇಶದ ಒಂದುಜನಾಂಗದ ನಂಬಿಕೆಗಳು, ರೀತಿ ನೀತಿಗಳು, ಆಚಾರ ವಿಚಾರಗಳು, ಆಸೆ ಆಕಾಂಕ್ಷೆಗಳು, ಕನಸು-ಕಲ್ಪನೆಗಳು, ಅಭಿರುಚಿ-ಅಭಿಪ್ರಾಯಗಳು ಸುಖದುಃಖಗಳು, ಸಾಹಸ-ಸಾಧನೆಗಳು, ಬದುಕಿ ಸ್ಥಿತ್ಯಂತರಗಳನ್ನು ಸೂಚ್ಯವಾಗಿ ಅಥವಾ ಸಂಕೇತಾತ್ಮಕವಾಗಿ ಅಭಿವ್ಯಕ್ತಿ ಪಡಿಸುತ್ತದೆ. ಆದ್ದರಿಂದ ಇದು ಒಬ್ಬ ವ್ಯಕ್ತಿಯ ವಾಣಿಯಾಗಿರದೆ ಸಮಗ್ರ ರಾಷ್ಟ್ರದ ಮತ್ತು ಜನಾಂಗದ ಸಾಮೂಹಿಕ ವಾಣಿಯಾಗಿರುತ್ತದೆ. ಪಾಶ್ಚಾತ್ಯ ಲಾಕ್ಷಣಿಕರು ಮತ್ತು ಭಾರತೀಯ ಲಾಕ್ಷಣಿಕರು ತಮ್ಮದೇ ಆದ ಮಹಾಕಾವ್ಯ ಲಕ್ಷಣವನ್ನು ನಿರೂಪಿಸಿದ್ದಾರೆ. ಕುವೆಂಪು ಅವರು ಎಲ್ಲವನ್ನು ಗ್ರಹಿಸಿದ್ದರೂ; 'ಶ್ರೀರಾಮಾಯಣ ದರ್ಶನಂ' ರಚನೆಯಲ್ಲಿ ಯಾವುದಕ್ಕೂ ಕಟ್ಟುಬೀಳದೇ ಸ್ವಾತಂತ್ರ್ಯವನ್ನು ಸಾಕಾರಗೊಳಿಸಿಕೊಂಡಿದ್ದಾರೆ. ಕೆಲವು ನಿಯಮಗಳನ್ನು ಪಾಲಿಸಿದ್ದಾರೆ; ಮತ್ತೆ ಕೆಲವನ್ನು ತಿರಸ್ಕರಿಸಿದ್ದಾರೆ; ಇನ್ನು ಕೆಲವು ವೈಚಾರಿಕಯುಗದ ನಿಲುವುಗಳನ್ನು ಅಳವಡಿಸಿಕೊಂಡಿದ್ದಾರೆ.

ಮಹಾಕಾವ್ಯದ ಹಳೆಯ ಲಕ್ಷಣಗಳಲ್ಲಿ ಕಾಲಾನುಗುಣವಲ್ಲದ ಅಂಶಗಳನ್ನು ಬಿಟ್ಟು ಹೊಸಕಾಲದ, ಸಮಾನತೆ, ಸರ್ವೋದಯ, ಪೂರ್ಣದೃಷ್ಟಿ, ವೈಜ್ಞಾನಿಕ ವಿಚಾರಗಳನ್ನು ಅಳವಡಿಸಿಕೊಂಡು 'ಶ್ರೀರಾಮಾಯಣದರ್ಶನಂ' ಮಹಾಕಾವ್ಯ ರಚಿಸಿರುವ ಮಹಾಕವಿ ಕುವೆಂಪು ಮಹಾವಸ್ತು, ಮಹಾಶೈಲಿ, ಮಹಾಛಂದಸ್ಸು, ಮಹಾಚಿಂತನೆ, ಮಹಾಕಲ್ಪನೆ, ಮಹಾಪ್ರತಿಭೆ ಮತ್ತು ಮಹಾಸಂಸ್ಕೃತಿಗಳ ಮಹೋನ್ನತವಾದ ರಸಪಾಕವನ್ನು ಸಹೃದಯರಿಗೆ ನೀಡಿದ್ದಾರೆ.

ಮಹಾಕಾವ್ಯವನ್ನು 'ವಿಕಾಸಶೀಲ ಮಹಾಕಾವ್ಯ'ಮತ್ತು 'ಕಲಾತ್ಮಕ ಮಹಾಕಾವ್ಯ'ಎಂದು ಎರಡು ವರ್ಗಗಳ ಪರಿಚಿಯಿಸುವ ಡಾ.ಸಿ.ಪಿ.ಕೃಷ್ಣಕುಮಾರ್ ಅವರು ವಾಲ್ಮೀಕಿರಾಮಾಯಣವನ್ನು ಮೊದಲವರ್ಗಕ್ಕೂ; 'ಶ್ರೀರಾಮಾಯಣದರ್ಶನಂ' ಮಹಾಕಾವ್ಯವನ್ನು ಎರಡನೇ ವರ್ಗಕ್ಕೂ; 'ಶ್ರೀರಾಮಾಯಣದರ್ಶನಂ' ಯುಗಧರ್ಮ ಮತ್ತು ಸಮಷ್ಟಿ ಪ್ರಜ್ಞೆಯ ಅಭಿವ್ಯಕ್ತಿಯಾಗಿದ್ದು; 'ಕನ್ನಡ ಸಿದ್ಧಿ ಶಿಖರಗಳಲ್ಲೊಂದು'[೧] ಎಂದಿದ್ದಾರೆ. ಮಹಾಕಾವ್ಯದ ಬಗೆಗೆ ಅವರು ಹೊಸ ಪರಿಭಾಷೆಯನ್ನೇ ನೀಡಿದ್ದು-'ಯುಗಯುಗದಿಸಂಭವಿಪೆನೆಂಬ....ಸೂತ್ತತೆಗೆ' (ಪು.೮೮೪) ಆ ಪರಿಭಾಷೆಗೆ ಅವರ ಮಹಾಕಾವ್ಯವೇ ನಿದರ್ಶನವೂ ಆಗಿದೆ.

"ವಾಲ್ಮೀಕಿಯ ಕತೆಯನ್ನು ಅವರು ಬದಲಿಸಿಲ್ಲ, ವಿಕೃತಿಗೊಳಿಸಿಲ್ಲ. ಅವರ ವಿಶಿಷ್ಟತೆಯಿರುವುದು ಕತೆಯಲ್ಲಲ್ಲ, ಕಲೆಯಲ್ಲಿ ಮತ್ತು ದರ್ಶನದಲ್ಲಿ; ಕತೆಯೇನಿದ್ದರೂ ನಿಮಿತ್ತ ಮತ್ತು ಮಾಧ್ಯಮ. ವಾಲ್ಮೀಕಿಯಲಿಲ್ಲದ ಏನೋ ಒಂದು ದರ್ಶನ ಕುವೆಂಪು ಅವರ ಕಾವ್ಯದಲ್ಲಿದೆ,ಅದೇ ಇದರ ಜೀವಾಳ ಎಂಬುದನ್ನು ಶ್ರೀರಾಮಾಯಣದರ್ಶನಂ,ಎಂಬ ಶೀರ್ಷಿಕೆಯ ಸೂಚಿಸುತ್ತದೆ. ರಾಮಾಯಣದ ಕತೆ ಕುವೆಂಪು ಅವರಲ್ಲಿ ಹೊಸದಾಗಿ ಭಾಸವಾಗುವುದು ಈ ದರ್ಶನದಿಂದಲೇ".[೨]

----------

೧. ಡಾ. ಸಿ.ಪಿ. ಕೃಷ್ಣಕುಮಾರ್, ಶ್ರೀರಾಮಾಯಣದರ್ಶನಂ, ಪ್ರಚಾರ ಪುಸ್ತಕಮಾಲೆ, ಪೀಠಿಕೆ, ಪ್ರಸಾರಾಂಗ, ಮೈಸೂರು ವಿಶ್ವ ವಿದ್ಯಾನಿಲಯ, ಮೈಸೂರು.

೨. ಅದೇ.

ಕುವೆಂಪು ಅವರು 'ಶ್ರೀರಾಮಾಯಣದರ್ಶನಂ'ಮಹಾಕಾವ್ಯವನ್ನು ಪೂಜ್ಯ ಗುರುಗಳಾದ 'ಶ್ರೀವೆಂಕಣ್ಣಯ್ಯ'ನವರಿಗೆ ಅರ್ಪಿಸಿದ್ದಾರೆ.ಗುರುಗಳಿಗೆ ಅರ್ಪಿಸುವಾಗ ತಮ್ಮ ಕೃತಿರಚನಾಕಲೆಗೆ ತಾವೇ ಹೆಮ್ಮೆ ಪಟ್ಟುಕೊಂಡು ವಿನಯದಿಂದಲೇ ಸಮರ್ಪಿಸುವ ನುಡಿಗಳು ಕಾವ್ಯದ ಮಹತ್ತ್ವವನ್ನು ಎತ್ತಿ ಹಿಡಿಯುತ್ತವೆ:

ಪಿಂತೆ
ವಾಲ್ಮೀಕಿಯುಲಿದ ಕಥೆಯಾದೊಡಂ,ಕನ್ನಡದಿ
ಬೇರೆ ಕಥೆಯೆಂಬಂತೆ,ಬೇರೆ ಮೈಯಾಂತಂತೆ
ಮರುಹುಟ್ಟುವಡೆದಂತೆ ಮೂಡಿದೀಕಾವ್ಯಮಂ
ವಿಶ್ವವಾಣಿಗೆ ಮುಡಿಯ ಮಣಿ ಮಾಡಿಹೆನ್ ನಿಮ್ಮ
ಕೃಪೆಯಿಂದೆ.

(ಶ್ರೀರಾಮಾಯಣದರ್ಶನಂ ಪು-೮)

ವಾಲ್ಮೀಕಿಯ ಕಥೆಗೆ ಹೊಸ ಮೈನೀಡಿ ಮರುಹುಟ್ಟು ಕೊಟ್ಟು:ವಿಶ್ವವಾಣಿಯ ಮುಡಿಗೆ ಮಣಿ ಮಾಡಿದ್ದೇನೆ ಎಂದು ವಿನಯವಾಗಿಯೇ ಸಮರ್ಪಿಸಿರುವುದು ಅವರ ಹಿರಿತನದ ಸಾಕ್ಷಿ ಮುಂದುವರೆದು ಕೃತಿಯ ಬಗೆಗೆ ಅವರಾಡುವ ಮಾತುಗಳು ಮಹಾಕಾವ್ಯ ಮಹತ್ತ್ವವನ್ನು ಸಾರುತ್ತವೆ:

"ಬಹಿರ್ಘಟನೆಯಂ ಪ್ರತಿಕೃತಿಸುವಾ ಲೌಕಿಕ
ಚರಿತ್ರೆಯಲ್ತಿದು,ಅಲೌಕಿಕ ನಿತ್ಯಸತ್ಯಂಗಳಂ
ಪ್ರತಿಮಿಸುವ ಸತ್ಯಸ್ಯ ಸತ್ಯ ಕಥನಂ ಕಣಾ,
ಶ್ರೀ ಕುವೆಂಪುವ ಸೃಜಿಸಿದೀ ಮಹಾಛಂದಸಿನ
ಮೇರುಕೃತಿ,ಮೇಣ್ ಜಗದ್ಭವ್ಯ ರಾಮಾಯಣಂ!"

(ಶ್ರೀರಾಮಾಯಣದರ್ಶನಂ ಪು-೮)

"ಕುವೆಂಪು ಅವರ ಈ ಮಹಾಕಾವ್ಯಕ್ಕೆ ಸಮಗ್ರ ಭಾರತೀಯ ಪರಂಪರೆಯ ಹಿನ್ನಲೆಯಿದೆ. ಮಹಾಕವಿ ಚೇತನ ಒಂದು ಕಡೆ ವೇದೋಪಷತ್ತು, ಭಗವದ್ಗೀತೆ, ಷಡ್ದರ್ಶನ, ಯೋಗವಿಜ್ಞಾನ, ರಾಮಾಯಣ, ಮಹಾಭಾರತ, ಪುರಾಣ ಇತ್ಯಾದಿಗಳಿಂದ, ಇನ್ನೊಂದು ಕಡೆ ಪ್ರಾಚೀನ ಕನ್ನಡ ಸಾಹಿತ್ಯದಿಂದ ಮಗುದೊಂದು ಕಡೆ ಈ ಯುಗದ ಶ್ರೀರಾಮಾಕೃಷ್ಣ ಪರಮಸಿಂಹ, ಸ್ವಾಮಿ ವಿವೇಕಾನಂದ, ಶ್ರೀಅರವಿಂದ, ರಮಣಮಹರ್ಷಿ, ಗಾಂಧೀಜಿ ಮುತಾಂದವರ ವಿಚಾರಧಾರೆಯಿಂದ ಪರಿಪುಷ್ಟವಾದದ್ದು. ಅಂತೆಯೇ ಅದು ಪಾಶ್ಚಾತ್ಯ ಮಹಾಕಾವ್ಯ ಪರಂಪರೆಯನ್ನು ಹೀರಿಕೊಂಡಿದೆ, ಮತ್ತು ಪಶ್ಚಿಮಪ್ರಣೀತವಾದ ವೈಜ್ಞಾನಿಕ, ವೈಚಾರಿಕ ಮನೋಧರ್ಮವನ್ನು ಅಳವಡಿಸಿಕೊಂಡಿದೆ"[೩] ಆದ್ದರಿಂದಲೇ ಕುವೆಂಪು ಅವರು ತಮ್ಮನ್ನು ಪ್ರತ್ಯಕ್ಷ್ಯವಾಗಿ ಪರೋಕ್ಷವಾಗಿ ಪ್ರಭಾವಿಸಿದ ಎಲ್ಲರನ್ನು ಮಹಾಕಾವ್ಯ ರಚನೆಯ ಮೊದಲಲ್ಲಿ ಸ್ಮರಿಸಿದ್ದಾರೆ.

----------

೩. ಡಾ. ಸಿ.ಪಿ. ಕೃಷ್ಣಕುಮಾರ್, ಶ್ರೀರಾಮಾಯಣದರ್ಶನಂ, ಪ್ರಚಾರ ಪುಸ್ತಕಮಾಲೆ, ಪೀಠಿಕೆ, ಪ್ರಸಾರಾಂಗ, ಮೈಸೂರು ವಿಶ್ವ ವಿದ್ಯಾನಿಲಯ, ಮೈಸೂರು. ಪು.೪

ಹೋಮರಗೆ ವರ್ಜಿಲಗೆ ಡಾಂಟೆ ಮೇಣ್ ಮಿಲ್ಟನಗೆ
ನಾರಾಣಪ್ಪಂಗೆ ಮೇಣ್ ಪಂಪನಿಗೆ,ಋಷಿವ್ಯಾಸ
ಭಾಸ ಭವಭೂತಿ ಮೇಣ್ ಕಾಳಿದಾಸಾದ್ಯರಿಗೆ
ನರಹರಿ ತುಲಸಿದಾಸ ಮೇಣ್ ಕೃತಿವಾಸಾದಿ
ನನ್ನಯ್ಯ ಫಿರ್ದೂಸಿ ಕಂಬಾರವಿಂದರಿಗೆ,
ಹಳಬರಿಗೆ ಹೊಸಬರಿಗೆ ಹಿರಿಯರಿಗೆ ಕಿರಿಯರಿಗೆ
ಕಾಲದೇಶದ ನುಡಿಯ ಜಾತಿಯ ವಿಭೇದಮಂ
ಲೆಕ್ಕಿಸದೆ ಜಗತೀ ಕಲಾಚಾರ್ಯರೆಲ್ಲರ್ಗೆ,
ಜ್ಯೋತಿಯಿರ್ಪೆಡೆಯಲ್ಲಿ ಭಗವದ್ ವಿಭೂತಿಯಂ
ದರ್ಶಿಸುತೆ,ಮುಡಿಬಾಗಿ ಮಣಿದು ಕೈಜೋಡಿಸುವನಾಂ.

(ಶ್ರೀರಾಮಾಯಣದರ್ಶನಂ ಪು-೮)

ಭಾರತೀಯ-ಪಾಶ್ಚಾತ್ಯ ಎಂಬ ಯಾವ ವಿಭೇದವಿಲ್ಲದೆ ತನಗೆ ಸ್ಫೂರ್ತಿ ನೀಡಿದ ಮಹಾಮಹಿಮರನ್ನು ಕುವೆಂಪು ಸ್ಮರಿಸುತ್ತಾರೆ. ಅವರಿಗೆ ಮುಡಿಬಾಗಿ ಮಣಿದು ಕೈಜೋಡಿಸುತ್ತಾರೆ. ಹಲವಾರು ಮಹಾಮಹಿಮರ ಪ್ರಭಾವ ಮುದ್ರೆಗೆ ಒಳಗಾಗಿದ್ದರೂ ಕುವೆಂಪು ತನ್ನತನವನ್ನು ಸಾಧಿಸಿಕೊಂಡು ರಾಮಾಯಣದ'ದರ್ಶನ' ಭಾಗ್ಯವನ್ನು ಎಲ್ಲರಿಗೂ ಕಲ್ಪಿಸಿಕೊಡುತ್ತಾರೆ, 'ಮಹಾಕಾವ್ಯ' ಮತ್ತೆ ಮತ್ತೆ ಓದಿಸಿಕೊಳ್ಳುವ, ಹೊಸಹೊಸ ಚಿಂತನೆಗೆ ದೂಡುವ ಸಾಮರ್ಥ್ಯವನ್ನು ಪಡೆದಿರುತ್ತದೆ. ಶ್ರೀರಾಮಾಯಣದರ್ಶನಂ' ಅಂಥ ಮಹಾಕೃತಿ ಎಂಬುದನ್ನು ಡಿ.ಎಲ್.ಎನ್ ಅವರೇ ಸ್ಪಷ್ಟಪಡಿಸುತ್ತಾರೆ.

"ಪುಟ್ಟಪ್ಪನವರಂತೆ ಕಾವ್ಯವನ್ನು ಯಾರು ಬರೆಯಬಲ್ಲರು? ಅವರ ಕಾವ್ಯದಲ್ಲಿ ಕಾಣುವ ಮೃದುಮಧುರ ಪದಬಂಧ, ಬಗೆಯ ಭಾವದ ಐಸಿರಿ, ಭಾವದ ರಸಪ್ರವಾಹ, ಕಾವ್ಯಾಲಂಕಾರ, ಉಕ್ತಿ ಚಮತ್ಕಾರಗಳ ವೈಭವವು ಸಹೃದಯರನ್ನು ರೋಮಾಂಚನಗೊಳಿಸಿ ಸಂತೋಷದ ಕಣ್ಣೀರನ್ನು ಕೋಡಿವರಿಸುತ್ತದೆ"[೪] ಎಂಬ ಡಿ.ಎಲ್.ನರಸಿಂಹಾಚಾರ್ ಅವರ ಮಾತುಗಳು ಪುಟ್ಟಪ್ಪನವರ ಕಾವ್ಯರಚನಾ ವೈಶಿಷ್ಟ್ಯವನ್ನು ಎತ್ತಿಹಿಡಿಯುತ್ತವೆ. ಈ ಮಹಾಕಾವ್ಯವು ಅನೇಕ ಮಹಾನ್ ವಿದ್ವಾಂಸರುಗಳ ಮೆಚ್ಚುಗೆಗೆ ಪಾತ್ರವಾಗಿದ್ದು; ಇದು ಮುಂದಿನ ಕವಿಗಳಿಗೆ ಸ್ಫೂರ್ತಿಯಾಗಿದ್ದು; ಸದಾ ಒಂದಲ್ಲಾ ಒಂದು ಕಾರಣದಿಂದ ಈ ಮಹಾಕಾವ್ಯ ತನ್ನ ಕಾವ್ಯ ಮೌಲ್ಯದಿಂದ ಸಹೃದಯರ ಸ್ಮೃತಿಪಠಲದಲ್ಲಿ ಒಂದು ವಿಶಿಷ್ಟವಾದ ಅರ್ಥೈಕೆಯನ್ನು ಪಡೆಯುತ್ತಲೇ ಇರುತ್ತದೆ.

"ಕವಿ ಕಾವ್ಯದ ಮೊದಮೊದಲಲ್ಲಿ ಈ ಕಾವ್ಯವನ್ನು ಬರೆಯುತ್ತಿರುವುದು ಚೆನ್ನಾಗಿ ಕಾಣುತ್ತದೆ.ಹೀಗೆಯೇ ಬರೆಯಬೇಕೆಂದು ನಕ್ಷೆಯಿಟ್ಟುಕೊಂಡಿರಬೇಕೆಂದೂ ಭಾಸವಾದೀತು.ಆದರೆ ಮುಂದೆ ಸಾಗಿದಂತೆ ಕವಿ ತನ್ನ ಕೃತಿಯ ಕೈವಶವಾಗುತ್ತಾರೆ. ದಡದ ಕಟ್ಟಿನಲ್ಲಿದ್ದ ತೊರೆ ಇದ್ದಂಡೆಯನ್ನು ತನ್ನ ಮೆಟ್ಟಿಲನ್ನಾಗಿ ಮಾಡಿಕೊಳ್ಳುವ ಮಹಾನದಿಯಾಗುತ್ತದೆ. ಪ್ರಾರಂಭದ ಪಂಕ್ತಿಗಳ ತಕ್ಕಷ್ಟು ಎಡೆಯಲ್ಲಿ ಕವಿ ಪ್ರಜ್ಞಾಪೂರ್ವಕವಾಗಿ ಸಾರಿ ತಿದ್ದುತ್ತಾರೆ. ಕಡೆಕಡೆಗೆ ಮಾತುಗಾರಿಕೆ ಮಂತ್ರಗಾರಿಕೆಯಾಗುತ್ತದೆ".[೫] ಎಂದು ಸುಜನಾ ಅವರು ಅಭಿಪ್ರಾಯಪಡುತ್ತಾರೆ. ಈ ಮಾತು

----------

೪. ಡಿ.ಎಲ್.ನರಸಿಂಹಾಚಾರ್, 'ಭಾರತೀಯ ಜ್ಞಾನಗಂಗೆ', ಕುವೆಂಪು ಕೃತಿ ವಿಮರ್ಶೆ, ಪ್ರ.ಸಂ. ಪ್ರೊ.ಅರವಿಂದ ಮಾಲಗತ್ತಿ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈ.ವಿ.ವಿ., ಮೊದಲಮುದ್ರಣ ೨೦೦೬, ಪು.೩೪೧.

೫. ಸುಜನಾ, 'ಶ್ರೀರಾಮಾಯಣದರ್ಶನಂ', ಕನ್ನಡ ವಿಮರ್ಶೆಯ ಮಾರ್ಗ, ಪ್ರ.ಸಂ. ಪ್ರೊ.ಅರವಿಂದ ಮಾಲಗತ್ತಿ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈ.ವಿ.ವಿ., ಮೊದಲಮುದ್ರಣ ೨೦೦೪, ಪು.೨೦೨.

ಸತ್ಯವಾದದ್ದು. ಶ್ರೀರಾಮಾಯಣದರ್ಶನಂ ಕಾವ್ಯವು ಸಹೃದಯರ ಮೇಲೆ ಅಗಾಧ ಪರಿಣಾಮ ಬೀರುತ್ತದೆ, ಓದುತ್ತಾ ಓದುತ್ತಾ ಸಹೃದಯರು ಮೈಮರೆಯುವಂತೆ; ಮಂತ್ರಗಾರಿಕೆಯ ಮಾತುಗಳ ಮೋಡಿಯಲ್ಲಿ ಸೆರೆಯಾಗುತ್ತಾರೆ.

ವಾಲ್ಮೀಕಿ ದಾರಿಯಲ್ಲಿಯೇ ನಡೆದು ಬರುವ ಮಹಾಕವಿ ಮುಂದೆ ತೊರೆ ಹೇಗೆ ನದಿಯಾಗಿ ಮಾರ್ಪಡುತ್ತದೋ ಹಾಗೆಯೇ ತಮ್ಮ ಕಣ್ ಅಳತೆಯ ದರ್ಶನವನ್ನು ಹಿಗ್ಗಿಸುತ್ತಾರೆ. ಮೂಲದಲ್ಲಿಯೇ ಭವ್ಯವಾಗಿ ನಿರ್ಮಿತವಾಗಿರುವ ರಾಮ ಸೀತಾದಿ ಪಾತ್ರಗಳನ್ನು ಊರ್ಧ್ವಮುಖಿಯಾಗಿ ಮಾಡಿ ಸಹೃದಯರ ಮನ್ನಣೆ ದೊರಕಿಸಿಕೊಟ್ಟಿದ್ದಾರೆ. ಊರ್ಮಿಳೆ ಪಾತ್ರಕ್ಕೆ ಭೂಮಿಕೆಯನ್ನು ನಿರ್ಮಾಣಮಾಡಿ ಪ್ರಕಾಶಿಸುವಂತೆ ಮಾಡಿದ್ದಾರೆ. ಯಾವ ಪಾತ್ರವನ್ನು ಬಲವಂತವಾಗಿ ಅರಳಿಸಲು ಪ್ರಯತ್ನಿಸದೇ ಸಹಜ ವಿಕಾಸವನ್ನು ಹೊಂದುವಂತೆ ಮಾಡಿದ್ದಾರೆ.

"ರಾಮಾಯಣದರ್ಶನಂ ಕಾವ್ಯ ಎಲ್ಲ ಜೀವನ ವಿಕಾಸ ಪ್ರತಿಮೆ ಈ ವಿಕಾಸಕ್ಕೆ ಯಾವೊಂದು ಪಾತ್ರವೂ ತನ್ನ ಸ್ವಭಾವ ವೈಲಕ್ಷಣವನ್ನೂ ಬಿಟ್ಟು ಕೊಡುವುದಿಲ್ಲ.ತಮ್ಮ ಸ್ವಭಾವದಲ್ಲಿ ಸ್ವಧರ್ಮದಲ್ಲಿ ಆಳವಾಗಿ ಬೇರುಬಿಟ್ಟುಕೊಂಡಿದ್ದೇ ಹೇಗೆ ಸಮಷ್ಟಿ ಪ್ರಜ್ಞೆಗೆ ಏರಬಲ್ಲದೆಂಬ ಅಪೂರ್ವ ದರ್ಶನವನ್ನಿಲ್ಲಿ ಕವಿ ಕಾಣಿಸಿದ್ದಾರೆ.ಅಂದರೆ ಯಾವ ಪಾತ್ರವನ್ನೂ ಸರಳಗೊಳಿಸದೆ, ಯಾವ ಕ್ರಿಯೆ–ಘಟನೆಯನ್ನೂ ಸುಲಭಗೊಳಿಸದೆ, ಸಂಕೀರ್ಣವಾಗಿಯೇ ಕಂಡು ಐಕ್ಯಸಿದ್ಧಿಯನ್ನು ತೋರುವುದು ಇಲ್ಲಿನ ಸಾಧನೆ, ದ್ವಂದ್ವವನ್ನೆಲ್ಲಾ ಬದುಕಿ ನಿರ್ದ್ವಂದ್ವವನ್ನು ಸಾಧಿಸುವ ಅದ್ವೈತ, ವಿಶಿಷ್ಟಾದ್ವೈತ ಕಲೆ ಇದು, ಆದ್ದರಿಂದಲೇ ಇಲ್ಲಿ ಬರುವ ಪಾತ್ರಗಳು ರಾಗದೀಪ್ತರು;ಜೀವಂತ ವರ್ಣರಂಜಿತರು".[೬] ಆದ್ದರಿಂದ ಈ ಕಾವ್ಯವನ್ನು ಆಸ್ವಾದಿಸುತ್ತಾ ಸಾಗುವ ಸಹೃದಯರಿಗೆ ನಿರಂತರ ವರ್ತಮಾನದ ಅನುಭವವಾಗುತ್ತದೆ.

"ಭಗವದ್ ದೃಷ್ಟಿಗೆ ಹಿರಿಯ ಕಿರಿಯ ಭೇದಭಾವನೆಯೇ ಇಲ್ಲ. ಸೈನ್ಯದಲ್ಲಿ ಮಹಾಯೋಧನ ಪಾತ್ರ ಎಷ್ಟು ಮುಖ್ಯವೊ ಸಾಮಾನ್ಯ ಯೋಧನ ಪಾತ್ರವೂ ಅಷ್ಟೆ ಮುಖ್ಯ. ಭಗವತ್ಸಂಕಲ್ಪ ಸಿದ್ಧಿಗೆ ಅಸಾಮಾನ್ಯನ ಜೀವನ ಹೇಗೆ ನಿಮಿತ್ತ ಸಾಧನವಾಗುತ್ತದೆಯೋ ಹಾಗೆಯೇ ಸಾಮಾನ್ಯ ಜೀವನವೂ ನಿಮಿತ್ತ ಸಾಧನವಾಗುತ್ತದೆ. ಭಗವಂತನಿಗೆ ಅಸಮಾನ್ಯತೆಗಿಂತ ಸಾಮಾನ್ಯತೆಯಲ್ಲಿಯೇ ಹೆಚ್ಚು ಒಲವು.... ಈ ತತ್ತ್ವ ಶ್ರೀರಾಮಾಯಣದರ್ಶನಂ ನಲ್ಲಿ ಮೊದಲಿನಿಂದ ಕೊನೆಯ ತನಕ ಪ್ರತಿಪಾದಿತವಾಗಿದೆ"[೭] ಎಂದು ಪ್ರಧಾನಗುರುದತ್ತ ಅವರು ಅಭಿಪ್ರಾಯಿಸಿದ್ದಾರೆ. ಕುವೆಂಪು ಅವರು ಚಿತ್ರಿಸಿರುವ ಎಲ್ಲ ಪಾತ್ರಗಳೂ ಅವುಗಳ ಶ್ರೇಷ್ಠತೆಯನ್ನು ಸಹೃದಯರಿಗೆ ತಿಳಿಸುತ್ತವೆ. ಸಾಮಾನ್ಯ ಪಾತ್ರಗಳ ಬಾಯಿಂದ ಬರುವ ರಹಸ್ಯ ವಿಚಾರಗಳ ಅನಾವರಣ ಹಾಗೂ ಸಾಮಾನ್ಯತೆಯಲ್ಲಿ ಅವುಗಳ ಮಹತ್ತ್ವದ ಅನಾವರಣ ಮುಖ್ಯವಾಗಿ ಕಂಡುಬರುತ್ತದೆ. ಆಶ್ಚರ್ಯವೆಂದರೆ ಸಾಮಾನ್ಯ ಪಾತ್ರಗಳು ಮುಖ್ಯ ಪಾತ್ರಗಳಿಗೆ ಸದಾ ಪೂರಕವಾಗಿಯೇ ಹೊಂದಿಕೊಂಡು ಬರುವಂತೆ ನಿರ್ಮಿಸಿರುವ ಕಥಾಸೂತ್ರ, ಮುಖ್ಯಪಾತ್ರಕ್ಕೆ ಹೆಚ್ಚಿನ ಲಕ್ಷ್ಯವನ್ನು ನೀಡಿದ್ದರೂ; ಸಾಮಾನ್ಯ ಪಾತ್ರಕ್ಕೆ ನಿರ್ಲಕ್ಷ್ಯವನ್ನು ತೋರಿಲ್ಲ.

----------

೬. ಸುಜನಾ, 'ಶ್ರೀರಾಮಾಯಣದರ್ಶನಂ', ಕನ್ನಡ ವಿಮರ್ಶೆಯ ಮಾರ್ಗ, ಪ್ರ.ಸಂ. ಪ್ರೊ.ಅರವಿಂದ ಮಾಲಗತ್ತಿ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈ.ವಿ.ವಿ., ಮೊದಲಮುದ್ರಣ ೨೦೦೪, ಪು.೨೦೨.

೭. ಡಾ.ಪ್ರಧಾನಗುರುದತ್ತ, ಕುವೆಂಪು, ನವಕರ್ನಾಟಕ ಪ್ರಕಾಶನ, ಮೂರನೆಯ ಮುದ್ರಣ ೨೦೦೬, ಪು.೧೦೪.

"ಕಥೆಯ ಸೂತ್ರದ ಮೂಲಕ ಘಟನಾವಳಿಗಳ ಬೆಳವಣಿಗೆಯ ಮೂಲಕ ಹಾಗೂ ಪಾತ್ರಗಳ ಆತ್ಮ-ವಿಕಸನದ ಮೂಲಕ ಕವಿ ತಮ್ಮ ವಿನೂತನ ದರ್ಶನವನ್ನು ಮುಂದಿರಿಸಲು ಪ್ರಯತ್ನಿಸಿದ್ದಾರೆ; ಅದರಲ್ಲಿ ಅಭೂತಪೂರ್ವವಾದ ಯಶಸ್ಸನ್ನು ಗಳಿಸಿದ್ದಾರೆ. ಈ ಯುಗದಲ್ಲಿ ಮರೆಲಾಗದ ರೂಪದಲ್ಲಿ ನೆಲೆಗೊಂಡ ಹಲವಾರು ಮೌಲ್ಯಗಳನ್ನು ಉದಾಹರಣೆಗೆ, ಅಹಿಂಸಾತತ್ತ್ವ, ಸಂಸ್ಕೃತಿ ಸಂವರ್ಧನೆ, ಸರ್ವಸಮಾನತೆ, ಸಾಮಾನ್ಯತಾ ಪ್ರೀತಿ, ಇವೇ ಮೊದಲಾದ ಜೀವನ ಮೌಲ್ಯಗಳನ್ನು ಎತ್ತಿ ಹಿಡಿದಿದ್ದಾರೆ. ಇದಕ್ಕಾಗಿ ಕಥೆಯ ಹಂದರವನ್ನೇ ಬದಲಾಯಿಸಲೂ ಕುವೆಂಪು ಅವರು ಹಿಂದೆಗಿದಿಲ್ಲ; ಘಟನೆಗಳನ್ನು ಅನಾಮತ್ತಾಗಿ ಕೈಬಿಡಲೂ ಅಂಜಿಲ್ಲ; ಅವುಗಳಿಗೆ ಹೊಸ ರೂಪವನ್ನು ಕೊಡಲೂ ಮುಂದಾಗಿದ್ದಾರೆ"[೮] ಎಂದು ವಿಮರ್ಶಿಸಿರುವ ಡಾ.ಪ್ರಧಾನ ಗುರುದತ್ತ ಅವರು ಇದನ್ನು ಸಮರ್ಥಿಸುವ ನಿದರ್ಶನಗಳನ್ನು ವಿವರಿಸಿದ್ದಾರೆ. ಅಹಿಂಸಾತತ್ತ್ವಕ್ಕೆ ನಿದರ್ಶನವಾಗಿ-ಪುತ್ರಕಾಮೇಷ್ಟಿ ಯಾಗದ ಸಮಯದಲ್ಲಿ ಅಶ್ವಮೇಧವನ್ನು, ಸಂಸ್ಕೃತಿ ಸಂವರ್ಧನೆಗೆ ನಿದರ್ಶನವಾಗಿ ಲಂಕಾದಹನ ಪ್ರಸಂಗವನ್ನು ಕೈಬಿಟ್ಟಿರುವುದನ್ನು, ಸರ್ವಸಮಾನತೆಗೆ ಸೀತೆಯ ಅಗ್ನಿಪ್ರವೇಶ ಮಾಡಿ ಪುನೀತರಾಗಿ ಇಬ್ಬರೂ ಜೊತೆಯಲ್ಲಿ ಹೊರಬರುವುದನ್ನು ನಿದರ್ಶನವಾಗಿ ನೀಡಿದ್ದಾರೆ.[೯]

ವಾಲ್ಮೀಕಿ ರಾಮಾಯಣದ ಕಥೆಯೇ ಆದರೂ;ಭಿನ್ನವಾದ ಸಂದರ್ಭಗಳ ಸೃಷ್ಟಿ,ಭಿನ್ನವಾದ ಅಭಿವ್ಯಕ್ತಿ ಹಾಗೂ ಭಿನ್ನವಾದ ದರ್ಶನ ಕಲೆಯಿಂದಾಗಿ 'ಶ್ರೀರಾಮಾಯಣದರ್ಶನಂ' ಎಲ್ಲರ ಮೆಚ್ಚುಗೆಗೆ ಗೌರವಾದರಗಳಿಗೆ ಪಾತ್ರವಾಗಿ ಇಡೀ ಸಾಹಿತ್ಯಲೋಕವನ್ನು ಸಂಪದ್ಯುಕ್ತವನ್ನಾಗಿಸಿದೆ. ಇಪ್ಪತ್ತನೇ ಶತಮಾನದ ಮೇರು ಕೃತಿಯಾಗಿ ಈ ಮಹಾಕಾವ್ಯ 'ಜ್ಞಾನಪೀಠ ಪ್ರಶಸ್ತಿ' ಯಿಂದ ಮೊದಲುಗೊಂಡು ಅನೇಕ ಪ್ರಥಮಪ್ರಶಸ್ತಿಗಳನ್ನು ಮುಡಿಗೇರಿಸಿಕೊಂಡು; ಕನ್ನಡ ಮಾತೆಯ ಮುಡಿಯ ಕೀರ್ತಿ ಕಳಶವಾಗಿ ಸದಾ ಕಂಗೊಳಿಸುತ್ತಿರುವುದರಲ್ಲಿ ಆಶ್ಚರ್ಯವಿಲ್ಲ.

----------

೮. ಡಾ.ಪ್ರಧಾನಗುರುದತ್ತ, ಕುವೆಂಪು, ನವಕರ್ನಾಟಕ ಪ್ರಕಾಶನ, ಮೂರನೆಯ ಮುದ್ರಣ ೨೦೦೬, ಪು.೧೦೪.
೯. ಅದೇ, ಪು.೧೦೫-೧೦೬.

## ೩. ಮಹರ್ಷಿ ವಾಲ್ಮೀಕಿ ರಾಮಾಯಣದ ಸ್ತ್ರೀ ಪಾತ್ರಗಳು

ವಾಲ್ಮೀಕಿ ಮಹರ್ಷಿ ವ್ರತನಿಯಮ ಉಪವಾಸಾದಿ ಸತ್ಕರ್ಮಗಳಿಂದ ಮತ್ತು ಬ್ರಹ್ಮಜ್ಞಾನದಿಂದ ಶ್ರೇಷ್ಠತ್ವ ಪಡೆದಿದ್ದ ನಾರದ ಮಹರ್ಷಿಗಳಿಂದ ರಾಮಾಯಣ ಕಥೆಯನ್ನು ಕೇಳಿ ತಿಳಿದು ರಾಮಕಥಾ ಆವರಣದಲ್ಲಿಯೇ ಚಿಂತಾಮಗ್ನರಾಗಿದ್ದಾಗ ಲೋಕದ ಘಟನೆಗಳು ಅವರ ಆಲೋಚನೆಗೆ ಹೊಸಮಾರ್ಗವನ್ನು ತೋರುತ್ತವೆ. ವಾಲ್ಮೀಕಿ ಮಹರ್ಷಿ ಶಿಷ್ಯ ಭಾರದ್ವಾಜನೊಡನೆ ಗಂಗಾ ಸಮೀಪದಲ್ಲಿದ್ದ ತಮಸಾ ತೀರದಲ್ಲಿ ಸ್ನಾನಾದಿಗಳನ್ನು ಮುಗಿಸಿಕೊಂಡು ಆಶ್ರಮದ ಕಡೆಗೆ ತೆರಳುವಾಗ ಕೌಂಚಪಕ್ಷಿಗಳ ಜೋಡಿಯೊಂದನ್ನು ಕಾಣುತ್ತಾರೆ. ಕೌಂಚಪಕ್ಷಿಗಳ ಸರಸ ಸಲ್ಲಾಪದ ಇನಿಧ್ವನಿಯಿಂದ ಸಂತಸಗೊಳ್ಳುತ್ತಾರೆ. ಅಷ್ಟರಲ್ಲಿ ಬೇಡನೊಬ್ಬ ಗಂಡು ಪಕ್ಷಿಯನ್ನು ಕೊಲ್ಲುತ್ತಾನೆ. ಗಂಡು ಪಕ್ಷಿಯು ನೆಲದಲ್ಲಿ ಬಿದ್ದು ರಕ್ತದಿಂದ ತೊಯ್ದು ಹೊರಳಾಡುವುದನ್ನು ಕಂಡು ಹೆಣ್ಣುಪಕ್ಷಿ ದುಃಖದಿಂದ ಆಕ್ರಂದನ ಮಾಡುವುದನ್ನು ನೋಡಿ ಅಧರ್ಮ ಖಂಡಿಸಲು ನುಡಿದ ನುಡಿಗಳು ಶ್ಲೋಕವಾಗಿವೆ.

ಮಾ ನಿಷಾದ ಪ್ರತೀಷ್ಠಾಂತ್ವಮಗಮಶ್ಶಾಶ್ವತೀಸ್ಸಮಾಃ
ಯತ್ಕ್ರೌಂಚಮಿಥುನಾದೇಕಮವಧೀಃ ಕಾಮಮೋಹಿತಂ[೧]

ವಾಲ್ಮೀಕಿಯು ಮನಸ್ಸಿನಲ್ಲಿ ಉದ್ದೇಶಿಸಿದ ಅರ್ಥ "ಎಲೈ ಬೇಡನೆ ಅನ್ಯೋನತೆಯಿಂದ ಕಲೆತಿದ್ದ ಈ ಗಂಡು ಹೆಣ್ಣು ಪಕ್ಷಿಗಳ ಪೈಕಿ ಕಾಮಪರವಶವಾಗಿದ್ದ ಒಂದನ್ನು ನಿನು ಕೊಂದೆಯಾದ್ದರಿಂದ ನೀನು ಬಹಳ ವರ್ಷಗಳಕಾಲ ಬದುಕಬೇಡ"[೨] ಎಂಬುದಾಗಿತ್ತು. ಆದರೆ ಬ್ರಹ್ಮ ಆ ಶ್ಲೋಕದಲ್ಲಿ ಇಡೀ ರಾಮಾಯಣದ ಕಥಾಭಾಗವೇ ಅಡಕಗೊಳ್ಳುವಂತೆ ಆರ್ಶೀವದಿಸಿದ್ದನೆಂದು ವಾಲ್ಮೀಕಿಗೆ ಎಲ್ಲ ರಹಸ್ಯಗಳೂ ವೇದ್ಯವಾಗಿ ಮುಂದೆ ರಾಮಾಯಣ ರಚನೆಗೆ ನಾಂದಿಯಾಯಿತೆಂದು ತಿಳಿದು ಬರುತ್ತದೆ.

"ಲಕ್ಷ್ಮೀನಿವಾಸಸ್ಥಾನನಾದ ಶ್ರೀಮನ್ನಾರಾಯಣನೇ, ಕ್ರುಂಚಳ ಮಗನಾದ ರಾವಣ, ಆತನ ಪತ್ನಿ ಮಂದೋಡರಿ. ಈ ದಂಪತಿಗಳ ಪೈಕಿ ಪರಸ್ತ್ರೀಯರಲ್ಲಿ ಕಾಮದಿಂದ ಮೋಹಿತನಾಗಿದ್ದ ರಾವಣನನ್ನು ನಿನು ರಾಮಾವತಾರವೆತ್ತಿ ಕೊಂದೆಯಾದ್ದರಿಂದ, ನೀನು ಸದಾಕಾಲವೂ ಇದ್ದುಕೊಂಡಿರು,ಅಥವಾ ನಿನ್ನ ಮಹಾತ್ಮ್ಯವು ಸದಾಕಾಲದಲ್ಲಿಯೂ ನೆಲೆಗೊಂಡಿರಲಿ. ಹೀಗೆ ಈ ಶ್ಲೋಕವು ರಾಮಾಯಣದ ಕಥೆಗೆ ಸಂಕ್ಷೇಪವಾದ ಸೂಚನೋಪಾದಿಯಲ್ಲಿಯೂ ಗ್ರಂಥಕ್ಕೆ ಮಂಗಳಚರಣರೂಪದಲ್ಲಿ ದೇವವಾಗಿಯೂ ಇದೆ".[೩] ನಾರದ ಮಹರ್ಷಿಗಳು ಹೇಳಿದ ರೀತಿಯಲ್ಲಿಯೇ ವಾಲ್ಮೀಕಿಯು ರಾಮಾಯಣವನ್ನು ರಚನೆಮಾಡಿದ್ದಾರೆ. ಬಾಲಕಾಂಡ, ಅಯೋಧ್ಯಕಾಂಡ, ಅರಣ್ಯಕಾಂಡ, ಕಿಷ್ಕಿಂಧಾಕಾಂಡ, ಸುಂದರಕಾಂಡ, ಯುದ್ಧಕಾಂಡ ಎಂಬ ಆರು ಕಾಂಡಗಳಲ್ಲಿ ವಾಲ್ಮೀಕಿ ರಾಮಾಯಣ ರಚನೆಗೊಡಿದೆ.

----------

೧. ಉದ್ಧೃತ: ಡಾ. ಸಿ.ಎನ್. ಶ್ರೀನಿವಾಸ ಅಯಂಗಾರ್, 'ಕನ್ನಡ ವಾಲ್ಮೀಕಿ ರಾಮಾಯಾಣ', ಪು.೧೩.

೨. ಅದೇ.

೩. ಅದೇ, ಪು.೧೬ ರ ಅಡಿಟಿಪ್ಪಣಿಯ ವಿಶ್ಲೇಷಣಾ ಭಾಗದಿಂದ.

ವಾಲ್ಮೀಕಿ ಮಹರ್ಷಿಯು ಒಟ್ಟು ಇಪ್ಪತ್ತನಾಲ್ಕು ಸಾವಿರ ಶ್ಲೋಕಗಳನ್ನೂ ಮೊದಲನೆಯ ಆರು ಕಾಂಡಗಳಲ್ಲಿ ಸುಮಾರು ಐನೂರು ಸರ್ಗಗಳನ್ನೂ ಆನಂತರ ಉತ್ತರಕಾಂಡವನ್ನು ರಚಿಸಿದ್ದಾರೆ. ವಾಲ್ಮೀಕಿ ಮಹರ್ಷಿಯು ಮಹಾಕಾವ್ಯ ರಚನೆಯನ್ನು ಮಾಡುವಾಗ ರಾಮ-ಸೀತೆ ಪಾತ್ರಗಳಿಗೇ ಹೆಚ್ಚಿನ ಒತ್ತು ನೀಡಿರುವುದರಿಂದ ಇತರ ಪಾತ್ರಗಳು ಈ ಪಾತ್ರಗಳಗೇ ಹೆಚ್ಚಿನ ಒತ್ತು ನೀಡಿರುವುದರಿಂದ ಇತರ ಪಾತ್ರಗಳು ಈ ಪಾತ್ರಗಳ ಹಿಂದೆಯೇ ಮಿಂಚಿಮರೆಯಾಗುತ್ತವೆ. ವಾಲ್ಮೀಕಿಯಲ್ಲಿ ಅನೇಕ ಪಾತ್ರಗಳು ಅನಾದರಗೊಂಡಿವೆ ಹಾಗೂ ತಿರಸ್ಕೃತವಾಗಿವೆ. ಇದಕ್ಕೆ ನಿದರ್ಶನವೆಂದರೆ ಊರ್ಮಿಳೆ ಮತ್ತು ಮಂಥರೆಯ ಪಾತ್ರಗಳು.[೪]

ವಾಲ್ಮೀಕಿಯು ಅನೇಕ ಸ್ತ್ರೀಪಾತ್ರಗಳ ಚಿತ್ರಣವನ್ನು ನೀಡಿದ್ದಾರೆ. ಸೀತೆಗೆ ಕೊಟ್ಟಿರುವ ಮಹತ್ತ್ವ ಸೀತೆಯಷ್ಟೆ ಪತಿವ್ರತೆಯಾದ ಊರ್ಮಿಳೆಗೆ ನೀಡಿಲ್ಲ. ಕೈಕೆಗೆ ಕೆಟ್ಟತಾಯಿ ಎಂಬ ಪಟ್ಟವೇ ಬಂದುಬಿಟ್ಟಿದೆ ರಾಮ ಕ್ಷಮಿಸಿದರೂ; ರಾಮಾಯಣವನ್ನು ಪಾರಾಯಣ ಮಾಡುವ ಜನ ಕ್ಷಮಿಸಲಾರದಷ್ಟು ತೀರಸ್ಕೃತ ಪಾತ್ರವಾಗಿ ಚಿತ್ರಿಸಿದ್ದಾರೆ. ಮಂಥರೆಯ ಪಾತ್ರವಂತೂ ಜಗತ್ತಿನ ವಿಕಾರ, ಕೆಟ್ಟದೆಲ್ಲ ಮೈವೆತ್ತಂತೆ ಚಿತ್ರಿಸಿದ್ದಾರೆ. ಅಲ್ಲಲ್ಲಿ ಮಿಂಚಿ ಮರೆಯಾಗುವ ಮುಖ್ಯಪಾತ್ರಗಳ ಸಖಿಯರು ತೆರೆಮರೆಯಲ್ಲಿ ಉಳಿದುಬಿಡುತ್ತಾರೆ. ರಾಮಾಯಣದ ಕಥೆಯ ತಿರುವುಗಳಿಗೆ ಕಾರಣವಾಗುವ ಸ್ತ್ರೀಪಾತ್ರಗಳನ್ನೂ ಅಮುಖ್ಯವೆಂಬತೆಯೇ ವಾಲ್ಮೀಕಿ ಮಹರ್ಷಿಗಳು ಚಿತ್ರಿಸಿದ್ದಾರೆ.

ವಾಲ್ಮೀಕಿ ಮಹರ್ಷಿಯು ಮಹಾಕಾವ್ಯವನ್ನು ಪೂರ್ಣಗೊಳಿಸಿ ಅದಕ್ಕೆ ಹೆಸರಿಡುವಾಗ ಯೋಚಿಸಿರುವ ವಿಧಾನ ಸೂಕ್ತವೆನಿಸುತ್ತದೆ. ರಾಮನಿಗೆ ನೀಡುವಷ್ಟೇ ಪ್ರಾಮುಖ್ಯತೆ ಕವಿ ಮನಸ್ಸು ಸೀತೆಗೂ ಮತ್ತು ರಾವಣನಿಗೂ ನೀಡುರುವುದು ಮುಖ್ಯವೆನಿಸುತ್ತದೆ.

"ಕಾವ್ಯಂ ರಾಮಾಯಣ ಕೃತ್ಸ್ನಂ ಸೀತಾಯಾಶ್ಚರಿತಂ ಮಹತ್
ಪೌಲಸ್ತ್ಯವಧಮಿತ್ಯೇವ ಚಕಾರ ಚರಿತವ್ರತಃ"[೫]

"ರಾಮಾಯಣ ಎಂಬುದು ಸಾಮಾನ್ಯವಾಗಿ ಬಳಕೆಯಲ್ಲಿದೆ. 'ರಾಮಸ್ಯ ಅಯನಂ' ಎಂದರೆ ರಾಮನ ಚರಿತ್ರೆ ಎಂದರ್ಥ. ರಾಮನಲ್ಲಿರುವ ಗುಣಾತಿಶಯಗಳಿಗಿಂತ ಸೀತಾದೇವಿಯಲ್ಲಿದ್ದ ಪಾತಿವ್ರತ್ಯವೇ ಮೊದಲಾದ ಗುಣಾತಿಶಯಗಳು, ಲಂಕೆಯಲ್ಲಿದ್ದಾಗ ಅವಳು ತೋರಿದ ಪತಿಪ್ರೇಮ, ಧೈರ್ಯ ಮುಂತಾದ ಸದ್ಗುಣಗಳು ಹೆಚ್ಚು ಆಶ್ಚರ್ಯ ಜನಕವದವು, ರಮನ ಚರಿತ್ರೆಗಿಂತ ಸೀತೆಯ ಚರಿತ್ರೆಯೇ ಮಹತ್ತಾದುದು. ಆದ್ದರಿಂದಲೇ 'ಸೀತಾಯಾಶ್ಚರಿತಂಮಹತ್' ಎಂದು ಕರೆಯುವುದು ಹೆಚ್ಚಾಗಿ ಒಪ್ಪುತ್ತದೆ ಎಂದು ಕೆಲವರ ಮತ".[೬]

-----------

೪. ಊರ್ಮಿಳೆ ಪಾತ್ರವನ್ನಾಧರಿಸಿ ರವೀಂದ್ರನಾಥ ಠಾಗೂರ್ ಅವರು 'ಕಾವ್ಯದ ಅನಾದರ' ಎಂಬ ಪ್ರಬಂಧವನ್ನು ಬರೆದಿದ್ದಾರೆ.

೫. ಉದ್ಧೃತ: ಡಾ. ಸಿ.ಎಸ್. ಶ್ರೀನಿವಾಸ ಅಯಂಗಾರ್, 'ಕನ್ನಡ ವಾಲ್ಮೀಕಿ ರಾಮಾಯಾಣ'.

೬. ಅದೇ, ಪು.೨೦.

ವಾಲ್ಮೀಕಿ ಮಹರ್ಷಿಯು ರಾಮಾಯಣದ ತುಂಬಾ ಅನೇಕ ಸ್ತ್ರೀ ಪಾತ್ರಗಳನ್ನು ಚಿತ್ರಿಸಿಕೊಟ್ಟಿದ್ದಾರೆ. ಕೌಸಲ್ಯೆ. ಕೈಕೆ, ಸುಮಿತ್ರೆ, ಸೀತೆ, ಊರ್ಮಿಳೆ, ಮಂಥರೆ, ಮಂಡೋದರಿ, ಶೂರ್ಪನಖಿ ಮೊದಲಾದವರು ಮುಖ್ಯಪಾತ್ರಗಳಲ್ಲಿ ಕಂಡು ಬರುತ್ತಾರೆ. ಅಮುಖ್ಯ ಪಾತ್ರಗಳಲ್ಲಿ ಋಷಿಪತ್ನಿಯರಾದ ಅಹಲ್ಯೆ, ಅನಸೂಯೆ, ವಾಲಿ-ಸುಗ್ರೀವ ಪತ್ನಿಯರಾದ ತಾರೆ ಮತ್ತು ರುಮೆ, ತಪಸ್ವಿನಿ ಶಬರಿ, ಹಾಗೂ ಸುರಮೆ, ತ್ರಿಜಟೆ ಎಂಬ ಲಂಕಾನಗರದ ದಾಸಿಯರು ಚಿತ್ರಿತವಾಗಿದ್ದಾರೆ. ವಾಲ್ಮೀಕಿಯು ಸೀತೆಯ ಪಾತ್ರವೊಂದಕ್ಕೆ ಮಾತ್ರ ಹೆಚ್ಚಿನ ಮಹತ್ವ ನೀಡಿದ್ದು ಉಳಿದ ಪಾತ್ರಗಳು ರಾಮಾಯಣದ ಕಥೆಯ ಮುಂದುವರಿಕೆಯಲ್ಲಿ ಪೂರಕವಾಗಿಯೂ, ಪೋಷಕವಾಗಿಯೂ ಬಳಸಿಕೊಂಡಿದ್ದಾರೆ.

ಜನಕರಾಜನು ಯಜ್ಞಮಾಡುವ ಸಲುವಾಗಿ ಯಾಗಭೂಮಿಯನ್ನು ನೇಗಿಲಿನಿಂದ ಉಳುತ್ತ ಭೂಮಿಯನ್ನು ಶೋಧಿಸುವಾಗ ಭೂಮಿಯಲ್ಲಿ ಕನ್ಯೆಯೊಬ್ಬಳು ದೊರೆತಳು. ಅವಳಿಗೆ ಸೀತೆ ಎಂದು ಹೆಸರಿಟ್ಟು ಮಗಳಂತೆ ಜನಕ ಬೆಳೆಸಿದನು. ಸೀತೆಯು ಅಯೋನಿಜೆ, ಈಕೆಯನ್ನು ವರಿಸಲು ಬಂದವರಿಗೆ ಶಿವಧನಸ್ಸು ಮುರಿಯುವ ಪಣವಿಟ್ಟಿರುತ್ತಾರೆ. ರಾಮನು ಧನಸ್ಸನ್ನು ಮುರಿದು ಸೀತೆಯನ್ನು ವರಿಸಿತ್ತಾನೆ. ಅಂದಿನಿಂದ ಸೀತೆ ರಾಮನಿಗೆ ಅನುರೂಪ ಸತಿಯಾಗಿ ಇರುತ್ತಾಳೆ. ವನವಾಸ ಪ್ರಾಪ್ತಿಯಾದಾಗ ರಾಮನ ನೆರಳಿನಂತೆ ಸೀತೆ ರಾಮನನ್ನು ಅನುಸರಿಸುತ್ತಾಳೆ. ವನವಾಸ ಸಮಯದಲ್ಲಿ ರಾಮನೊಂದಿಗೆ ಕಾಡುಮೇಡು ಅಲೆದು ರಾಮನ ಸೇವೆಯಲ್ಲಿ ಸಂತೃಪ್ತಿಯಾಗಿರುತ್ತಾಳೆ. ಋಷಿ ಪತ್ನಿಯರಿಂದ ಪಾತಿವ್ರತ್ಯದ ಬಗ್ಗೆ ತಿಳಿದು ಎಳಸುತನ ಅಳಿಸಿ ಪ್ರಬುದ್ದತೆ ಮೈತೋರುತ್ತದೆ. ರಾವಣನಿಂದ ಅಪಹರಿಸಲ್ಪಟ್ಟರೂ ತನ್ನ ಪಾತಿವ್ರತ್ಯದ ಬಲದಿಂದ ಪರಿಶುದ್ಧಳಾಗಿ ಪೂಜೆ, ಧ್ಯಾನ, ತಪಸ್ಸಿನಲ್ಲಿ ತೊಡಗಿ ತನ್ನ ಮಹಿಮೆಯಿಂದ ಪರಿಚಾರಕರಲ್ಲಿ ಸಾತ್ವಿಕತೆ ಬೆಳೆಸಿ ವ್ರತನಿಷ್ಠೆಯಿಂದ ರಾಮನನ್ನು ಹೃದಯದಲ್ಲಿ ಅಲಂಕರಿಸಿಕೊಂಡು ತಪಸ್ಸಿನಲ್ಲಿ ನಿರತಳಾಗಿ ರಾಮನನ್ನು ಪಡೆಯುತ್ತಾಳೆ.

"ಭಾರತೀಯ ನಾರಿಯರ ಸರ್ವಕಾಲದ ಆದರ್ಶ, ಭಾರತೀಯ ಸಂಸ್ಕೃತಿಯ ಅನನ್ಯ ಪ್ರತೀಕ ಸೀತಾದೇವಿ. ಮಹರ್ಷಿ ವಾಲ್ಮೀಕಿ ತನ್ನ ಅಮರ ಕೃತಿಯಲ್ಲಿ ಆಕೆಯನ್ನು ಸ್ತ್ರೀಲೋಕದ ಅನರ್ಘ್ಯ ಅನುಪಮ ಸರ್ವಶ್ರೇಷ್ಠ ಪ್ರತಿಮೆಯನ್ನಾಗಿ ಕಂಡರಿಸಿದಂದಿನಿಂದ ಆಕೆ ಅನುದಿನವೂ ಒಮ್ಮೆಯಲ್ಲ ಒಮ್ಮೆ ನಮ್ಮ ಸ್ತ್ರೀಯರ ಮನೋಭೂಮಿಕೆಯಲ್ಲಿ ಅತ್ಯುಚ್ಛ ಮಾರ್ಗದರ್ಶಕಿಯಾಗಿ ಕಾನಿಸಿಕೊಳ್ಳುತ್ತ ಅವರ ನಡೆನುಡಿಗಳನ್ನು ನೇರ್ಪಡಿಸುತ್ತ, ಮಾರ್ಪಡಿಸುತ್ತ ಅವರ ಜೀವನದ ಜೀವಂತ ಚಿರನೂತನ ಸಹಚರಿಯಾಗಿದ್ದಾಳೆ".[೧]

ಸೀತೆಯನ್ನು ವಾಲ್ಮೀಕಿ ಮಹರ್ಷಿಗಳು ಪತಿವ್ರತೆ ಎಂದು ರಾಮನ ಅನುರೂಪಿ ಎಂದು ಚಿತ್ರಿಸಿದ್ದರೂ ಸೀತೆಗೆ ಅಪವಾದ ತಪ್ಪಲಿಲ್ಲ ರಾಮನು ಸೀತೆಯನ್ನು ಪರಿತ್ಯಜಿಸುವುದು ತಪ್ಪಲಿಲ್ಲ. ಸೀತೆ ಪಡೆದ ಅವಳಿ ಮಕ್ಕಳಾದ ಲವ-ಕುಶರಿಂದಲೇ ವಾಲ್ಮೀಕಿ ಮಹರ್ಷಿಗಳು ರಾಮಾಯಣದ ಗಾನವನ್ನು ಮಾಡಿಸಿದರೆಂದು ತಿಳಿದು ಬರುತ್ತದೆ.

ದಶರಥ ಮಹಾರಾಜನ ಮೂವರು ಪತ್ನಿಯರಲ್ಲಿ ಮೊದಲನೆಯವಳು ಕೌಸಲ್ಯೆ. ಈಕೆ ರಾಮನನ್ನು ಗರ್ಭದಲ್ಲಿ ಧರಿಸಿ ಧರೆಗಿಳಿಸಿದವಳು. ವಾಲ್ಮೀಕಿಯು ಸಾಧಾರಣ ತಾಯಿಯಂತೆ

-----------

೧. ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೧. ಪು.೩೩೧.

ಚಿತ್ರಿಸುತ್ತಾರೆ. ಕೌಸಲ್ಯೆಯು ಬಹಳ ಕಾಲದಿಂದ ರಾಮಪಟ್ಟಾಭಿಷೇಕವನ್ನು ಬಯಸಿದ್ದು ಆ ಆಸೆ ಕೈಗೂಡುವ ವಾರ್ತೆ ತಿಳಿದು ಸಂತೋಷಪಡುತ್ತಾಳೆ. ಪುತ್ರವಾತ್ಸಲ್ಯದಿಂದ ರಾಮನನ್ನು ಮುದ್ದು ಮಾಡುತ್ತಾಳೆ. ರಾಮನಿಗಾಗಿ ಅನೇಕ ವ್ರತ ಪೂಜೆಗಳನ್ನು ಕೈಗೊಳ್ಳುತ್ತಾಳೆ. ರಾಮನಿಗೆ ವನವಾಸ ಪ್ರಾಪ್ತವಾಗಿರುವ ವಿಷಯ ತಿಳಿದು ರಾಮನಿಗೆ 'ಅಪ್ಪಾ ಮಗನೇ, ರಾಘವ, ನೀನು ಈ ದುಃಖಕ್ಕಾಗಿ ಹುಟ್ಟದೆಯೇ ಇದ್ದಿದ್ದರೆ ಮಕ್ಕಳಿಲ್ಲದ ನಾನು ಹೆಚ್ಚು ದುಃಖಪಡುತಿರಲಿಲ್ಲ. ಬಂಜೆಯಾದವಳಿಗೆ ತನಗೆ ಮಕ್ಕಳಿಲ್ಲವೆಂಬ ಒಂದೇ ಕೊರಗು ಮನಸ್ಸಿನಲ್ಲಿ ದುಃಖವನ್ನುಂಟು ಮಾಡುವುದು, ಬೇರೆ ಸಂಕಟವಿರುವುದಿಲ್ಲ"[೮] ಎಂದು ಗೋಳಾಡುತ್ತಾಳೆ. ವಾಲ್ಮೀಕಿಯು ಕೌಸಲ್ಯೆಯ ಮಾತುಗಳಲ್ಲಿ ಅಯೋಧ್ಯೆಯ ಅರಮನೆ ರಾಣಿಯರ ಸ್ಥಿತಿಗತಿಯನ್ನೇ ಬಿಂಬಿಸಿದ್ದಾರೆ. ಅರಮನೆಯಲ್ಲಿ ರಾಜನಿಗೆ ಅನೇಕ ರಾಣಿಯರಿದ್ದಾಗ ಕೆಲವರು ರಾಜನ ಪ್ರೀತಿಗೆ ಮತ್ತೆ ಕೆಲವರು ಅನಾದರಕ್ಕೆ ಒಳಗಾಗುತ್ತಾರೆ. ಕೌಸಲ್ಯೆಯ ಮಾತುಗಳು ಪತಿಯಿಂದ ತಾನು ನಿರಾಕರಿಸ್ಪಟ್ಟು ಮಗನ ಸುಖವನ್ನು ಶ್ರೇಯಸ್ಸನ್ನು ಬಯಸಿ ಬದುಕುವ ಪರಿಯನ್ನು ಎತ್ತಿ ತೋರಿಸುತ್ತದೆ. ಮಗನ ವನವಾಸ ತಾಯಿಗೆ ಮಗನ ವನವಾಸ ಸಿಡಿಲು ಬಡಿದಂತೆ ಆಗುವುದು ಸಹಜ. ಕೌಸಲ್ಯೆ ವನವಾಸದಿಂದ ಮರಳಿ ಬಂದ ರಾಮಸಿತೆಯನ್ನು ಆದರದಿಂದಲೇ ಸ್ವಾಗತಿಸಿ ಸತ್ಕರಿಸುತ್ತಾಳೆ. ವಾಲ್ಮೀಕಿಯು ಸಾಮಾನ್ಯ ಸ್ತ್ರೀಯಂತೆ ರಾಜಮಾತೆ ಕೌಸಲ್ಯೆಯನ್ನು ಚಿತ್ರಿಸಿದ್ದಾರೆ.

ಸುಮಿತ್ರೆಯು ರಾಮನ ಜೊತೆಗೆ ಸದಾ ರಕ್ಷಣೆಯಂತಿರುವ ಲಕ್ಷ್ಮಣನನ್ನು ಹೆತ್ತತಾಯಿ. ರಾಮನ ಜೊತೆ ಲಕ್ಷ್ಮಣನಿರುವಂತೆ, ಭರತನ ಜೊತೆ ಸುಮಿತ್ರೆಯ ಮತ್ತೊಬ್ಬ ಮಗ ಶತ್ರುಜ್ಞನಿರುತ್ತಾನೆ. ಸುಮಿತ್ರೆ ಕೌಸಲ್ಯೆಯನ್ನು ಅನುಸರಿಸುತ್ತಾಳೆ. ರಾಮ ವನವಾಸಕ್ಕೆ ತೆರಳಿದಾಗ ಕೌಸಲ್ಯೆಯನ್ನು ಸಂತೈಸುತ್ತಾಳೆ. ರಾಮನ ದರ್ಶನಕ್ಕೆ ಬಯಸಿ ಕಾತರಿಸುತ್ತಾಳೆ. ದ್ವೇಷ,ಅಸೂಯೆಗಳಿಂದ ಹೊರಾತಾದ ಪ್ರೀತಿ ಮಮಕಾರಗಳ ಶಾಂತಮೂರ್ತಿಯೆಂದರೆ ಸುಮಿತ್ರೆಯೇ. ತನ್ನೆರಡೂ ಮಕ್ಕಳೂ ರಾಮನಿಗೆ; ಭರತನಿಗೆ ಅನುವರ್ತಿಗಳೆಂದು ತಿಳಿದೂ, ಅನ್ಯಯೋಚನೆಯ ಸಳಿಗೆ ಸಿಲುಕದೇ ಸುಖಿಸುವ ಮಾತೆ. ಎಲ್ಲರಿಗೂ ಒಳ್ಳೆಯದಾಗಲೆಂದು ಅರಸುವ ಕಲ್ಮಶ ರಹಿತ ಹೃದಯ ಸುಮಿತ್ರೆಯದು. ಆದ್ದರಿಂದಲೇ ವಾಲ್ಮೀಕಿ ಮಹರ್ಷಿಗಳು ಈಕೆಯ ಬಗ್ಗೆ ಹೆಚ್ಚಿನ ಪ್ರಸ್ತಾಪವನ್ನೇ ಮಾಡುವುದಿಲ್ಲ. ಅರಮನೆಯ ಹೆಂಗಸರ ಗುಂಪಿನಲ್ಲಿ ಸುಮಿತ್ರೆಯನ್ನು ಮರೆಸಿಬಿಟ್ಟಿದ್ದಾರೆ.

ರಾಮನ ಪಟ್ಟಾಭಿಷೇಕ ಮಹೋತ್ಸವಕ್ಕೆ ಅಣಿಯಾಗಿದ್ದ ಅಯೋಧ್ಯೆಯು ಸ್ಮಶಾನ ಸದೃಶವಾಗಲು ಕಾರಣವಾದ ದುರ್ಬೋಧನೆಯನ್ನು ಮಾಡಿದವಳು ಕೈಕೆಗೆ ಮಂಥರೆ ಎಂಬ ದಾಸಿ. ವಾಲ್ಮೀಕಿ ಮಂಥರೆಯ ಹುಟ್ಟು ಬೆಳವಣಿಗೆಯ ಬಗ್ಗೆ ತಿಳಿಸುವುದಿಲ್ಲ. ಕೈಕೆಯೊಂದಿಗೆ ಅಯೋಧ್ಯೆಗೆ ಬಂದವಳೆಂದು ಮಾತ್ರ ತಿಳಿಸುತ್ತಾರೆ. ರಾಮನ ಯೌವರಾಜ್ಯಪಟ್ಟಾಭಿಷೇಕ ವಾರ್ತೆ ತಿಳಿದ ಮಂಥರೆಯು ಕೈಕೆಗೆ "ಎಲೈ ಮೂಢೇ! ಏಕೆ ಮಲಗಿರುವೆ, ಏಳು! ನಿನಗೆ ಆಪತ್ತು ಬಂದೊದಗಿದೆ. ದುಃಖಪರಂಪರೆ ನಿನ್ನನ್ನು ಸುತ್ತವರಿದಿರುವುದನ್ನು ನೀನು ತಿಳಿಯಾಲಾರೆಯಾ! ನಿನ್ನ ಪತಿಗೆ ಇಷ್ಟಳಾಗದ ಮಂಗಳಾಂಗಿಯೇ ನಿನ್ನ ಸೌಭಾಗ್ಯವನ್ನು ಏಕೆ ಕೊಚ್ಚಿಕೊಳ್ಳುತ್ತೀಯೆ? ಬೇಸಿಗೆಯಲ್ಲಿ ನದಿಯ ಪ್ರವಾಹದಂತೆ ನಿನ್ನ ಸೌಭಾಗ್ಯ ಅಸ್ಥಿರವಾದುದು",[೯] ಎಂದು ಮಂಥರೆ ಕೈಕೆಗೆ ಪಟ್ಟಕಟ್ಟುತ್ತಿರುವ ವಿಚಾರ ತಿಳಿಸಿ ಕೈಕೆಯಲ್ಲಿಲ್ಲದ ಭೇಧಭಾವವನ್ನು ಹುಟ್ಟಿಸಲು ಪ್ರಯತ್ನಿಸುತ್ತಾಳೆ.

----------

೮. ಡಾ. ಸಿ.ಎನ್.ಶ್ರೀನಿವಾಸ ಅಯಂಗಾರ್, ಕನ್ನಡ ವಾಲ್ಮೀಕಿ ರಾಮಾಯಣ, ಪು. ೨೫೪.

೯. ಅದೇ,ಪು.೨೦೬.

ಭರತ-ರಾಮನಲ್ಲಿ ಭೇದವೆಣಿಸದ ಕೈಕೆ ಸಂತೋಷಗೊಂಡು ಮಂಥರೆಗೆ ಮೆಚ್ಚುಗೆಯಿಂದ ಆಭರಣವನ್ನು ನೀಡುತ್ತಾಳೆ. ಆದರೆ ಮಂಥರೆ ಕೈಕೆಯಲ್ಲಿ ಅಸೂಯೆ ದ್ವೇಷಗಳನ್ನು ಬಿತ್ತಿ ಬೆಳೆಸುತ್ತಾಳೆ. ಸವತಿ ಮತ್ಸರ ಕೆರಳಿಸುತ್ತಾಳೆ. 'ಭರತನು ರಾಮನ ಸೇವಕನಾಗುತ್ತಾನೆ, ನೀನು ಕೌಸಲ್ಯೆಯ ಸೇವೆಮಾಡುವೆಯಂತೆ' ಎಂದು ಬೆಂಕಿಗೆ ತುಪ್ಪಸುರಿಯುತ್ತಾಳೆ. ಹದಗೆಟ್ಟ ಕೈಕೆಯ ಮನಸ್ಸು ಮಂಥರೆಯ ಆಟಕ್ಕೆ ದಾಳವಾಗುತ್ತದೆ. ಹಿಂದೆ ದೇವಾಸುರರ ಯುದ್ಧಕಾಲದಲ್ಲಿ ದಶರಥನಿಂದ ಪಡೆದಿದ್ದ ವರಗಳನ್ನು ಇಂದು ಬಳಸಿಕೊಳ್ಳುವಂತೆ ಮಂಥರೆಯು ಕೈಕೆಯನ್ನು ಪ್ರೋತ್ಸಾಹಿಸುತ್ತಾಳೆ. ಮಂಥರೆಯು ಹೇಳಿಕೊಟ್ಟಂತೆ ಕೈಕೆಯು ಎಲ್ಲವನ್ನು ತೊರೆದು ಕೋಪಾಗಾರ ಪ್ರವೇಶಿಸುತ್ತಾಳೆ. ಸಂತೈಸಲು ಬಂದ ದೊರೆ ದಶರಥನಿಂದ ಪಡೆದಿದ್ದ ವರಗಳನ್ನು ಸಲ್ಲಿಸುವ ವಚನವನ್ನು ತೆಗೆದುಕೊಂಡು-ಭರತನಿಗೆ ಪಟ್ಟಾಭಿಷೇಕ, ರಾಮನಿಗೆ ದಂಡಕಾರ್ಯದಲ್ಲಿ ವನವಾಸವೆಂದು ವರಗಳನ್ನು ಕೇಳುತ್ತಾಳೆ. ದಶರಥನ ಗೋಳಿಗೆ, ಅಯೋಧ್ಯಾ ಜನರ ದುಃಖಕ್ಕೆ ಕಾರಣಳಾಗುತ್ತಾಳೆ. ರಾಮನನ್ನು ಕರೆಸಿ ವನವಾಸಕ್ಕೆ ಕಳುಹಿಸಲು ಮೊಂದಾದ ಕೈಕೆಯ ಕೌರ್ಯದ ಪರಾಮಾವಧಿಯನ್ನು ವಾಲ್ಮಿಕಿಯು ವಿವರವಾಗಿಯೇ ಚಿತ್ರಿಸಿದ್ದಾರೆ. ಈ ಮಹಾಪಾಪ ಕಾರ್ಯವನ್ನು ಮಾಡಿದ ಕಾರಣದಿಂದಾಗಿ ಅಯೋಧ್ಯೆಯ ಸಮಸ್ತ ಜನರಿಂದಲೂ ಕೈಕೆ ಮಂಥರೆಯರು ದೂಷಿಸಲ್ಪಡುತ್ತಾರೆ. ಎಲ್ಲರ ನಿಂದನೆ ತಿರಸ್ಕಾರಕ್ಕೆ ಗುರಿಯಾಗುತ್ತಾರೆ. ಪ್ರೀತಿಯ ಪುತ್ರನಾದ ಭರತನೂ ಇವರಿಬ್ಬರನ್ನು ತಿರಸ್ಕರಿಸಿಬಿಡುತ್ತಾನೆ. ಎಲ್ಲರ ನಿಂದನೆಯನ್ನು ತಡೆದುಕೊಂಡ ಇವರಿಗೆ ಭರತನ ತಿರಸ್ಕಾರವು ತೀವ್ರವಾದ ದುಃಖವನ್ನು ಉಂಟುಮಾಡುತ್ತದೆ. ಮಂಥರೆಯ ಬಗ್ಗೆ ಕವಿಯು ಮುಣದೆ ತಿಳಿಸುವುದಿಲ್ಲ. ಆದರೆ ಕೈಕೆಯು ಮುಂದೆ ತನ್ನ ದುರ್ಬುದ್ದಿಯಿಂದಾಗಿ ಪರಿಣಾಮ ಅರಿಯುತ್ತಾಳೆ. ರಾಮನ ಯಶಸ್ಸಿಗೆ ಕಾರಣಳಾದನೆಂದು ಹಿಗ್ಗುತ್ತಾಳೆ.

ಈ ಸಂದರ್ಭದಲ್ಲಿ ನೆನೆದುಕೊಳ್ಳಬೇಕಾದ ಸ್ತ್ರೀಪಾತ್ರವೆಂದರೆ ಊರ್ಮಿಳೆಯದು.ಸೀತೆಯು ಪತಿಯೊಡನಿದ್ದು ವನವಾಸ ಅನುಭವಿಸಿದರೆ, ಊರ್ಮಿಳೆಯು ಪತಿಯಿಂದ ದೂರವಾಗಿ ಹದಿನಾಲ್ಕು ವರ್ಷ ತಪಸ್ವಿನಿಯಂತೆ ವನವಾಸ ಅನುಭವಿಸುತ್ತಾಳೆ. ವನವಾಸಕ್ಕೆ ತೆರಳಿಚ್ಚಿಸಿದ ಲಕ್ಷ್ಮಣನಿಗೆ ತನ್ನ ಪ್ರಿಯಸತಿಯಾದ ಊರ್ಮಿಳೆಯ ನೆನಪೇ ಆಗುವುದಿಲ್ಲ ಎಂಬುದು ಸೋಜಿಗದ ಸಂಗತಿ. ವಾಲ್ಮೀಕಿ ಮಹರ್ಷಿಯ ಕಣ್ಣಿಗೆ ಅಗೋಚರವಾಗಿಯೇ ಉಳಿದಳೆಂದು ಹೇಳಬಹುದು. ಈ ಪಾತ್ರದ ಅನಾದರವನ್ನು ಮೊದಲು ಗುರುತಿಸಿದವರು ರವೀಂದ್ರನಾಥಠಾಗೂರ್ ಅವರು. ಅದರ ಸ್ಫೂರ್ತಿಯಿಂದ ಕುವೆಂಪು ಅವರು ಊರ್ಮಿಳೆಯ ಪಾತ್ರವನ್ನು ಉದ್ದರಿಸಿ ಸೀತೆಯ ಪಾತಿವ್ರತ್ಯಕ್ಕಿಂತ ಊರ್ಮಿಳೆಯ ಪಾತಿವ್ರತ್ಯ, ತಪಸ್ಸು ಎಂದು ಚಿತ್ರಿಸಿದ್ದಾರೆ.

ರಾಮ ಸೀತೆ ಲಕ್ಷ್ಮಣರು ವನವಾಸ ಕಾಲದಲ್ಲಿ ಅನೇಕ ಋಷಿಗಳ ಆಶ್ರಮಗಳನ್ನು ದರ್ಶನಮಾಡುತ್ತಾರೆ. ಅದರಲ್ಲಿ ಮುಖ್ಯವಾದುದ್ದು ಅತ್ರಿಗಳ ಆಶ್ರಮ. ಅಲ್ಲಿ ಸೀತೆಯು ಅನಸೂಯೆಯಿಂದ ಪಾತಿವ್ರತ್ಯದ ಬಗ್ಗೆ ಉಪದೇಶಿಸಲ್ಪಡುತ್ತಾಳೆ. ಋಷಿಪತ್ನಿಯರು ಋಷಿಗಳ ತಪಸ್ಸಿಗೆ ಸಹಕರಿಸುವಂತೆ ಸೀತೆಯು ರಾಮನ ಕಾರ್ಯಗಳಲ್ಲಿ ಸಹಕರಿಸುತ್ತಾಳೆ. ಸೀತೆಯು ಅವರಿಂದ ಪಡೆದ ಸದ್ಗುಣ, ತಪಸ್ಸು, ವ್ರತಾಚರಣೆಗಳ ಫಲವಾಗಿ ಆದರ್ಶ ಸ್ತ್ರೀ ಎನಿಸುತ್ತಾಳೆ. ರಾಮನಿಂದ ದೂರವಿದ್ದು ರಾವಣನ ಲಂಕೆಯಲ್ಲಿ ಬಂಧಿತಳಾಗಿದಾಗಲೂ ತನ್ನ ಧೃಡತೆ ಛಲ, ದೈವಭಕ್ತಿ ಉಳಿಸಿಕೊಂಡು ತಪೋನಿರತಳಾಗಿ ನಂತರ ರಾಮನ ಸಾನಿಧ್ಯ ಪಡೆಯುತ್ತಾಳೆ.

ರಾಮಾಯಣದ ಕಥೆಯಲ್ಲಿ ಹೆಸರಿಸಲೇ ಬೇಕಾದ ಲಂಕಾನಗರಿಯ ಸ್ತ್ರೀ ಎಂದರೆ ಶೂರ್ಪನಖಿ. ಈಕೆ ರಾವಣ ಪ್ರೀತಿಯ ಸಹೋದರಿ. ರಾವಣನು ಸೀತೆಯನ್ನು ಅಪರಿಸಲು

ಪ್ರೇರೆಪಿಸುವ ಪ್ರಮುಖ ವ್ಯಕ್ತಿ ಶೂರ್ಪನಖಿ, ಕಾಮಮೋಹಿತಳಾಗಿ ಬಂದ ಶೂರ್ಪನಖಿಯನ್ನು ತಿರಸ್ಕರಿದ ರಾಮನು ಲಕ್ಷ್ಮಣನನ್ನು ತೋರಿಸಿತ್ತಾನೆ. ಲಕ್ಷ್ಮಣನು ಶೂರ್ಪನಖಿಯನ್ನು ಹಾಸ್ಯಮಾಡಿ ಆಕೆಯ ಕಿವಿಮೂಗುಗಳನ್ನು ತುಂಡರಿಸಿ ವಿಕಾರಗೊಳಿಸುತ್ತಾನೆ. ಶೂರ್ಪನಖಿಯು ಖರನಲ್ಲಿ ಬಂದು ತನಗಾದ ಅವಮಾನಕ್ಕೆ ಸೇಡು ತೀರಿಸಿಕೊಳ್ಳಲು ಪ್ರೇರಿಪಿಸುತ್ತಾಳೆ. ಖರನು ಹಾಗೂ ಅನೇಕ ಮಂದಿ ರಾಕ್ಷಸರು ರಾಮಲಕ್ಷ್ಮಣರಿಂದ ಹತರಾಗುತ್ತಾರೆ. ರಾವಣನಲ್ಲಿ ಶೂರ್ಪನಖಿಯು ರಾಮಲಕ್ಷ್ಮಣರು ಯುದ್ಧದಲ್ಲಿ ಖರ ದೂಷಣ ತ್ರಿಶರರನ್ನು ಕೊಂದುದನ್ನು ಹಾಗೂ ರಾಮಲಕ್ಷ್ಮಣರೂ ಮನ್ಮಥರಂತಿದ್ದು ಪರಾಕ್ರಮಿಗಳಾಗಿದ್ದಾರೆಂದು; ಅವರ ಜೊತೆಯಲ್ಲಿರುವ ಸೀತೆಯ ಸೌಂದರ್ಯವನ್ನೂ ವರ್ಣಿಸುತ್ತಾಳೆ. ಸೀತೆಯನ್ನು ಅಪಹರಿಸಿದರೆ ರಾಮಲಕ್ಷ್ಮಣರನ್ನು ಯುದ್ಧದಲ್ಲಿ ಕೊಲ್ಲಬಹುದೆಂದು ರಾವಣನಿಗೆ ದುರ್ಬೋಧನೆಯನ್ನು ಮಾಡುತ್ತಾಳೆ. ಲಂಕಾನಗರಿಯ ನಾಶಕ್ಕೆ ಕಾರಣಳಾಗುತ್ತಾಳೆ.

ರಾವಣನ ಪಟ್ಟದ ರಾಣಿ ಮಂಡೋದರಿ. ದಾನವಶಿಲ್ಪಿ ಮಯನ ಮಗಳು. ಪಂಚ ಮಹಾಪತಿವ್ರತೆಯರಲ್ಲಿ ಒಬ್ಬಳೆಂದು ಪರಿಗಣಿತವಾಗಿದ್ದಾಳೆ. ಈಕೆ ಅಪೂರ್ವ ಲಾವಣ್ಯವತಿಯಾಗಿದ್ದು, ರಾವಣನ ಪ್ರೀತಿಗೆ ಪಾತ್ರಳಾಗಿದ್ದಳು. ಸೀತೆಯಷ್ಟೇ ಬಾಹ್ಯಸೌಂದರ್ಯ ಮಂಡೋದರಿಯಲ್ಲಿತ್ತು. ರಾವಣನ ಶ್ರೇಯಸ್ಸಿಗಾಗಿ ವ್ರತ ಉಪವಾಸ, ಆರಾಧನೆಯಲ್ಲಿ ಸದಾ ನಿರತಳಾಗಿದ್ದ ಮಂಡೋದರಿಯು ರಾವಣನು ಅನೇಕ ಸ್ತ್ರೀಯರನ್ನು ಅಪಹರಿಸಿ ತಂದು ತನ್ನವರನ್ನಾಗಿಸಿಕೊಳ್ಳುತ್ತಿದ್ದದ್ದನ್ನು ಮೂಕವೇದನೆಯಲ್ಲಿ ಸಹಿಸುತ್ತಿದ್ದಳು. ಆದರೆ ಪರಮ ಪವಿತ್ರೆಯೂ ಪತಿವ್ರತೆಯೂ ಆದ ಸೀತೆಯನ್ನು ಅಪಹರಿಸಿದಾಗ ಆಕೆಯು ರಾವಣನ ನಾಶಕ್ಕೆ ದಾರಿಯಾಯಿತೆಂದು; ಸೀತೆಯ ತಪಸ್ಸಿನ ಪ್ರಭಾವದಿಂದ ರಾವಣನು ಸುಟ್ಟುಹೋಗುವನೆಂದು ಶಂಕಿಸಿರುತ್ತಾಳೆ. ಮಂಡೋದರಿಯು ಸೀತೆಯು ತನ್ನಷ್ಟು ರೂಪವಂತಳಲ್ಲವೆಂದೂ; ರಾವಣನು ಆಕೆಯನ್ನು ತನ್ನವಳನ್ನಾಗಿಸಿಕೊಳ್ಳಲು ಪ್ರಯತ್ನಿಸುತ್ತಿದ್ದನ್ನು ಕಂಡು ಸಹಿಸುತ್ತಿರಲಿಲ್ಲವೆಂದು ಚಿತ್ರಿಸುತ್ತಾರೆ. ಸೀತೆಯನ್ನು ಪಡೆಯಬೇಕೆಂದು ಹಂಬಲಿಸುವ ರಾವಣನ ಆಸೆಗೆ ತಣ್ಣೀರೆಚುವ ಏಕೈಕ ಲಂಕಾನಗರಿಯ ಪ್ರಜೆಯೆಂದರೆ ಮಂಡೋದರಿಯೇ.

ರಾವಣನು ಸೀತೆಯನ್ನು ವರಿಸುವಂತೆ ಪೀಡಿಸುವಾಗಲೆಲ್ಲಾ ರಾವಣನನ್ನು ಸಮಾಧಾನಪಡಿಸಿ ಉಪಾಯದಿಂದ ಕರೆದೊಯ್ಯುತ್ತಿದ್ದವಳು ಮಂಡೋದರಿ "ರಾಕ್ಷಸೇಂದ್ರ, ನಿನ್ನ ಕೋಪಕ್ಕೆ ಈ ಮನುಷ್ಯ ಮಾತ್ರಳು ಪಾತ್ರಳೆ? ಮಹಾವೀರನಾದ ನೀನು ಈ ಒಬ್ಬ ಹೆಂಗಸಿಗಾಗಿ ಇಷ್ಟು ಕಾತರಗೊಳ್ಳುವ ಕಾರಣವೇನಿದೆ? ನಿನ್ನ ದಾಸಿಯರಾದ ನಾವೆಲ್ಲರು ಸಿದ್ಧರಾಗಿರುವೆವು. ಅಲ್ಲದೆ, ಕೇವಲ ವ್ಯಸನಾಧೀನಳೂ, ಕೃಶಾಗಿಯೂ, ಕಾಮೇಚ್ಛೆಯೇ ಇಂಗಿಹೋದವಳೂ ಆದ ಈ ದುರ್ಬಲಳಾದ ಮನುಷ್ಯ ಸ್ತ್ರೀಯ ಅಂಗಸಂಗದಿಂದ ನಿನಗೆ ಎಂತಹ ಸುಖವಾಗಬಲ್ಲದು? ಬಾ, ಅಂತಃಪುರಕ್ಕೆ ಹೋಗೋಣ, ನನ್ನೊಡನೆ ಭೋಗಿಸುವೆಯಂತೆ".[೧೦] ಎಂದು ಸಮಾಧಾನಿಸುತ್ತಾ ಕರೆದೊಯ್ಯುತ್ತಿದ್ದ ಮಂಡೋದರಿಯು ಬುದ್ಧಿವಂತಳೂ, ಚತುರಳೂ, ಪತಿಯ ಶ್ರೇಯಸ್ಸಿಗಾಗಿ ಕಾತಿರಿಸುವವಳೂ ಎಂದು ನಿಸ್ಸಂದೇಹವಾಗಿ ಹೇಳಬಹುದು. ಸಾಮಾನ್ಯ ಸ್ತ್ರೀಯಾಗಿದ್ದರೆ ರಾಜನ ವ್ಯವಹಾರಗಳಿಗೇ ತಲೆಹಾಕುತ್ತರಲಿಲ್ಲ, ಈಕೆ ಸಾದಾರಣ ಸ್ತ್ರೀಯಲ್ಲ ಸೀತೆಗೆ ವಿರುದ್ಧವಾಗಿ ಪತಿಯೊಂದಿಗೆ ಮಾತನಾಡಿದರೂ ಕೂಡ ರಾವಣನನ್ನು ಸೀತೆಯಿಂದ ದೂರವಿರಿಸಲು ಯಶಸ್ವಿಯಾಗುತ್ತಾಳೆ.

----------

೧೦. ಉದ್ಧೃತ: ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೩೩೧.

ಮಂಡೋದರಿಯು ರಾವಣನು ಯುದ್ಧದಲ್ಲಿ ಮಡಿದನೆಂದು ತಿಳಿದು ಲಂಕಾನಗರಿಯೇ ಗೋಳಿನಿಂದ ತುಂಬುವಂತೆ ವಿಲಾಪಿಸುತ್ತಾಳೆ. ರಾವಣನ ಅಜೇಯವಾದ ಶೌರ್ಯ ಪ್ರತಾಪಗಳನ್ನು ಹೊಗಳುತ್ತಾ ತನಗೆ ವೃಥವ್ಯ ಪ್ರಾಪ್ತಿಯಾದುದನ್ನು ನೆನೆದು ತೀವ್ರ ದುಃಖದಿಂದ ಗೋಳಾಡುತ್ತಾಳೆ. ವಾಲ್ಮೀಕಿಯಿಂದ ಅಲಕ್ಷಿತವಾದ ಪಾತ್ರಗಳಲ್ಲಿ ಮಂಡೋದರಿಯೂ ಒಬ್ಬಳಾಗಿದ್ದಾಳೆ.

ವಾಲ್ಮೀಕಿ ಮಹರ್ಷಿಗಳು ರಚಿಸಿರುವ ಸ್ತ್ರೀಪಾತ್ರಗಳಲ್ಲಿ ಶಬರಿ, ತಾರೆ, ರುಮೆ, ಮತ್ತು ತ್ರಿಜಟೆ ಅಪ್ರಮುಖ ಪಾತ್ರಗಳಾಗಿ ಕಂಡುಬರುತ್ತವೆ. ಶಬರಿ ತಪಸ್ವನಿ, ರಾಮನ ದರ್ಶನಕ್ಕಾಗಿ ಹಂಬಲಿಸಿ ಕುಳಿತಜೀವ. ಮಾತಂಗ ಋಷಿಗಳು ಸ್ವರ್ಗಕ್ಕೇರಿಹೋಗುವಾಗ ಶಬರಿಗೆ 'ಶ್ರೀರಾಮನು ಈ ಆಶ್ರಮಕ್ಕೆ ಬರುವನು, ಆತನನ್ನು ಸತ್ಕರಿಸು' ಎಂದು ಹೇಳುತ್ತಾರೆ. ಶಬರಿ ರಾಮನಿಗಾಗಿ ಹದಿಮೂರು ವರ್ಷಕಾಲ ಪ್ರತಿ ಹಗಲು ಉಣಿಸನ್ನು ಸಿದ್ಧಪಡಿಸಿಕೊಂಡು ಅತಿಥಿಸತ್ಕಾರ ಮಾಡಲು ಕಾದು ಕುಳಿತಿರುತ್ತಾಳೆ.

ತಾರೆ ಮತ್ತು ರುಮೆ ವಾಲಿ ಸುಗ್ರೀವರ ಪತ್ನಿಯರು, ವಾಲಿಯು ಸಗ್ರೀವನ ಮೇಲೆ ಕೋಪಗೊಂಡು ಆತನನ್ನು ಬಿಲದಲ್ಲಿ ಬಂಧಿಸಿರುತ್ತಾನೆ. ಸುಗ್ರೀವ ತಪ್ಪಿಸಿಕೊಂಡು ಹೊರಗೆ ಬಂದಿರುತ್ತಾನೆ. ಸುಗ್ರೀವನ ಭಾರ್ಯೆಯಾದ ರುಮೆಯ ಮೇಲೆ ವಾಲಿಗೆ ಆಸೆಯಾಗಿ ಆಕೆಯನ್ನು ಬಂಧನದಲ್ಲಿಟ್ಟದ್ದನೆಂದೂ, ವಾಲಿಯ ಪತ್ನಿಯಾದ ತಾರೆಯು ಬುದ್ಧಿಮಾತುಗಳನ್ನು ಹೇಳಿದರೂ, ವಾಲಿ ತಿರಸ್ಕರಿದನೆಂದು ತಿಳಿದುಬರುತ್ತದೆ. ವಾಲಿ ರಾಮನಿಂದ ಹತನಾದಾಗ ತನ್ನ ತಪ್ಪನ್ನು ಒಪ್ಪಿಕೊಳ್ಳುತ್ತಾನೆ. ವಾಲಿಯ ಶವದ ಮೇಲೆ ಬಿದ್ದು ವಿಲಾಪಿಸುವ ತಾರೆಯ ಮಾತುಗಳಿಂದ ರುಮೆಯ ಬಗೆಗೆ ತಿಳಿದುಬರುತ್ತದೆ. ತಾರೆಯು ವಾಲಿಯ ಜೊತೆ ಪ್ರಯೋಪವೇಶಮಾಡಲು ನಿರ್ಧರಿಸಿದಾಗ ಹನುಮಂತ ತಡೆಯುತ್ತಾನೆ. ಶ್ರೀ ರಾಮನು ತಾರೆಯನ್ನು ಸಮಾಧಾನಪಡಿಸಿತ್ತಾನೆ. ತಾರೆ ತನ್ನ ಮಗನಾದ ಅಂಗದನಿಗಾಗಿ ಬದುಕಲು ನಿರ್ಧರಿಸುತ್ತಾಳೆ.

ನ್ಯಾಯವಾದಿಯೂ, ಧರ್ಮಶೀಲನೂ, ಆದ ವಿಭೀಷಣನ ಪತ್ನಿ ಸರಮೆ. ವಿಭೀಷಣನು ರಾವಣನ್ನು ತೊರೆದು ರಾಮನ ಪಕ್ಷ ಸೇರಿದಾಗ ಆತನ ಪತ್ನಿ ಸರಮೆ ಲಂಕೆಯಲ್ಲಿಯೇ ಉಳಿಯುತ್ತಾಳೆ. ಸೀತೆಯನ್ನು ಕಾಯುವ ಕೆಲಸದಲ್ಲಿ ನಿಯುಕ್ತಳಾದ ಸರಮೆ ಸೀತೆಯೊಂದಿಗೆ ಸಖ್ಯವನ್ನು ಬೆಳೆಸಿಕೊಳ್ಳುತ್ತಾಳೆ. ಈ ಸರಮೆ ವಿಭೀಷಣನ ಪತ್ನಿಯೇ? ಅಥವಾ ಬೇರೊಬ್ಬ ದಾಸಿ ಸರಮೆ ಎಂಬುವಳಿದ್ದಳೇ? ಎಂಬುದರ ಬಗ್ಗೆ ಸ್ಪಷ್ಟತೆ ಸಿಗುವುದಿಲ್ಲ. ಸೀತೆಯನ್ನು ಅಶೋಕವನದಲ್ಲಿ ಕಾವಲು ಕಾಯುತ್ತಿದ್ದವರಲ್ಲಿ ಇಬ್ಬರು ದಾಸಿಯರು ಮಾತ್ರ ಸೀತೆಯ ಮೆಚ್ಚುಗೆಗೆ ಪಾತ್ರರಾಗಿದ್ದರು. ಅವುಗಳೆಂದರೆ ತ್ರಿಜಟೆ ಮತ್ತು ಸರಮೆ. ಇವರಿಬ್ಬರು ಸೀತೆಯನ್ನು ಸಮಾಧಾನಪಡಿಸಲು ಪ್ರಯತ್ನಿಸುತ್ತಿದ್ದರು.

ತ್ರಿಜಟೆ ಸೀತೆಯ ಮೆಚ್ಚುಗೆಯನ್ನು ಪಡೆದ್ದಿದ್ದ ಲಂಕೆಯ ದಾಸಿ. ರಾವಣನ ವಶವಾಗುವ ಕಾಲ ಬಂದರೆ ಪ್ರಾಣತ್ಯಾಗ ಮಾಡುವೆನೆಂದಾಗ ಲಂಕೆಯ ಇತರ ದಾಸಿಯರಿಗೆ ಕೋಪ ಉಂಟಾಗುತ್ತದೆ. ಅವರು ಸೀತೆಯನ್ನು ಹೀಯಾಳಿಸುತ್ತಾರೆ, ಬೆದರಿಸುತ್ತಾರೆ. ತ್ರಿಜಟೆಯು ಅವರನೆಲ್ಲಾ ತಡೆದು ತನ್ನ ಸ್ವಪ್ನ ವೃತ್ತಾಂತ ತಿಳಿಸುತ್ತಾಳೆ. ರಾವಣನು ರಾಮನಿಂದ ಕೊಲ್ಲಲ್‌ಪಡುವಂತೆಯೂ, ಸೀತೆಯನ್ನು ರಾಮನು ಪಡೆಯುವಂತೆಯೂ, ಕಂಡ ಸ್ವಪ್ನವನ್ನು ಹೇಳುತ್ತಾಳೆ. ಸೀತೆಗೆ ಪತಿಯ ವಿಜಯದ ಭವಿಷ್ಯ ಕೇಳಿ ಸಂತೋಷವಾಗುತ್ತದೆ. ಇಡೀ ಲಂಕೆಯ ದಾಸಿಯರಲ್ಲೆಲ್ಲಾ ತ್ರಿಜಟೆ ಮತ್ತು ಸರಮೆ ಬುದ್ಧಿವಂತರು ಮತ್ತು ಸೀತೆಯ ಸಹವಾಸದಿಂದ ಸದ್ಗುಣ ಸಂಪನ್ನತೆಯನ್ನು ಪಡೆದವರು. ಸೀತೆಯನ್ನು ಸಮಾಧಾನಪಡಿಸುವುದಲ್ಲದೆ; ಆಕೆಯನ್ನು ರಕ್ಷಿಸುವ ಕಾರ್ಯದಲ್ಲೂ ನಿರತರಾಗಿದ್ದರು.

ತ್ರಿಜಟೆ ವಿಮಾನದಲ್ಲಿ ಸೀತೆಯನ್ನು ಕೊಂಡೊಯ್ದು ಯುದ್ಧದಲ್ಲಿ ಪ್ರಜ್ಞೆತಪ್ಪಿ ಬಿದ್ದಿದ್ದ ರಾಮಲಕ್ಷ್ಮಣರನ್ನು ತೋರಿಸುತ್ತಾಳೆ. ಅವರು ಸತ್ತಿಲ್ಲವೆಂದೂ ಪ್ರಜ್ಞೆತಪ್ಪಿದೆ ಎಂದು ದೃಢಪಡಿಸುತ್ತಾಳೆ. ಸರಮೆ ಮತ್ತು ತ್ರಿಜಟೆ ಇಬ್ಬರೂ ಕೂಡ ಸೀತೆಯ ದಿವ್ಯಾನುಗ್ರಹಕ್ಕೆ, ಗಾಢಾಲಿಂಗನ ಭಾಗ್ಯಕ್ಕೆ ಪಾತ್ರರಾಗಿದ್ದರು.

ವಾಲ್ಮೀಕಿಯು ಚಿತ್ರಿಸಿರುವ ಸ್ತ್ರೀ ಪಾತ್ರಗಳಲ್ಲಿ ಹೆಚ್ಚಿನ ಪಾತ್ರಗಳು ಓದುಗರ ಟೀಕೆಗೆ ಗುರಿಯಾಗುತ್ತವೆ. ವಾಲ್ಮೀಕಿ ಮಹರ್ಷಿಗಳು ಇನ್ನು ಕೆಲವು ಪಾತ್ರಗಳನ್ನು ಅಲಕ್ಷಿಸಿಬಿಟ್ಟಿದ್ದಾರೆ. ಅವರಲ್ಲಿ ಮಂಥರೆ, ಕೈಕೆ, ಮಂಡೋದರಿ, ಊರ್ಮಿಳೆ, ಮುಂತಾದ ಪಾತ್ರಗಳನ್ನು ಕಾಣಬಹುದು. ಸ್ತ್ರೀ ಜನಾಂಗಕ್ಕೆ ಮೆತ್ತಿರುವ ಕಳಂಕವೇ ಮಂಥರೆ, ಕೈಕೆ ಎಂಬಂತೆ ವಾಲ್ಮೀಕಿ ಚಿತ್ರಿಸಿದ್ದಾರೆ. ಊರ್ಮಿಳೆಯ ಬಗ್ಗೆ ಯಾವುದೇ ಪ್ರಸ್ತಾಪ ಕಾಣುವುದಿಲ್ಲ. ಮಂಡೋದರಿ ಲಂಕಾ ಸಾಮ್ರಾಜ್ಯದ ಅಧಿಪತಿ ರಾವಣನ ಪಟ್ಟಮಹಿಷಿಯಾದರೂ ಆಕೆಯ ಪಾತ್ರಕ್ಕೆ ನೀಡಬೇಕಾದ ಗಟ್ಟಿತನ ಘನತೆಗಳನ್ನು ನೀಡದೆ ಸಾಮಾನ್ಯ ಸ್ತ್ರೀಯಂತೆ ಚಿತ್ರಿಸಿದ್ದಾರೆ. ರಾಮಾಯಣದ ಎಲ್ಲ ಪಾತ್ರಗಳೂ ಊರ್ಧ್ವಗಾಮಿಯಾಗಿ ಚಲಿಸುವಂತೆ ಮಾಡಿ, ರಾಮಾಯಣದ ಕಥೆಗೆ ಚ್ಯುತಿಬರದ ರೀತಿಯಲ್ಲಿ ಎಲ್ಲ ಪಾತ್ರಗಳನ್ನು ಉದ್ಧಾರಿಸಿರುವ ಕೀರ್ತಿ ಕುವೆಂಪು ಅವರದು. 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ 'ಸೃಷ್ಟಿಯ ವ್ಯೂಹರಚನೆಯಲ್ಲಿ ಪಾಪಿಗೂ ಉದ್ಧಾರವಿದೆ' ಎಂಬುದನ್ನು ಮಹಾಕವಿ ತೋರಿಸಿಕೊಟ್ಟಿದ್ದಾರೆ.

## ೪. ಕುವೆಂಪು ಅವರ 'ಶ್ರೀ ರಾಮಾಯಣ ದರ್ಶನಂ' ನ ಸ್ತ್ರೀ ಪಾತ್ರಗಳು

### ಅ. ಕೆಲವು ಪ್ರಮುಖ ಪಾತ್ರಗಳು :

### ೧. ಕೌಸಲ್ಯೆ

ಕೌಸಲ್ಯೆ ಅಯೋಧ್ಯೆಯ ದಶರಥನ ಪಟ್ಟದ ರಾಣಿ, ಶ್ರೀರಾಮನ ಜನ್ಮದಾತೆ, ಸಾಕೇತಪುರದ ಗೃಹಲಕ್ಷ್ಮಿ. ಶ್ರೀರಾಮನನ್ನೇ ಗರ್ಭದಲ್ಲಿ ಧರಿಸಿ ಧರೆಗಿಳಿಸಿದ ಮಹಾಮಾತೆ, ಸಾಮಾನ್ಯ ಸ್ತ್ರೀಯಂತೆ ಕಂದನ್ನು ಎತ್ತಿ ಮುದ್ದಾಡುತ್ತಾಳೆ, ವನವಾಸ ಪ್ರಾಪ್ತವಾದಾಗ ಗೋಳಾಡುತ್ತಾಳೆ, ಮಗನಿಗಾಗಿ ಶ್ರೀರಕ್ಷೆಯನ್ನು ಕಟ್ಟುತ್ತಾಳೆ. ಲೋಕದ ತಾಯಂದಿರ ಮಮತೆ, ವಾತ್ಸಲ್ಯ, ಪ್ರೀತಿಯ ಸಾಕಾರಮೂರ್ತಿ ಕೌಸಲ್ಯೆ.

ಉದ್ಯಾನವನದ ತೋಟದಲ್ಲಿ ಮರಿಹಕ್ಕಿಗೆ ಗುಟುಕು ಕೊಡುತ್ತಿದ್ದ ತಾಯಿಹಕ್ಕಿಯನ್ನು ಕಂಡ ದೊರೆಗೆ ಮಕ್ಕಳನ್ನು ಪಡೆದ ಹಕ್ಕಿ ಸಿರಿತನದ ಮುಂದೆ ಚಕ್ರವರ್ತಿಯಾದ ತನ್ನ ಬಡತನವನ್ನು ಎತ್ತಿ ತೋರಿದಂತೆ ಭಾಸವಾಗಿ ತನ್ನಲ್ಲಿರುವ ಚಿಂತೆ ದ್ವಿಗುಣಗೊಳಿಸಿಕೊಂಡು ಗುರುಗಳಲ್ಲಿ ಸಮಾಲೋಚಿಸುವಂತೆ ಮಾಡುತ್ತದೆ. ದೊರೆತನವೆಂಬುದು ಮಕ್ಕಳಿಲ್ಲದ ನನಗೆ ಶವದ ಶೃಂಗಾರದಂತಾಗಿದೆ ಎಂದು ಕೊರಗುವ ದಶರಥ ಮಹಾರಾಜನಿಗೆ ಪುತ್ರಾಭಿವಾಂಛೆ ಅಧಿಕವಾಗಿ ಗುರುಗಳ ಸಲಹೆಯಂತೆ ಕ್ರೌರ್ಯವಿಲ್ಲದೆ, ಪೂಜೆಯಿಂದ ದೇವರುಗಳನ್ನು, ಋಷಿಮುನಿಗಳನ್ನು, ದಾನದಿಂದ ಪ್ರಜೆಗಳನ್ನು ಮೆಚ್ಚಿಸಿದುದರ ಫಲವಾಗಿ ಯಜ್ಞ ಮೂರ್ತಿಯಿಂದ ಪಡೆದ ಪಾಯಸವನ್ನು ದಶರಥ ಒಪ್ಪಿಸುವುದು ಕೌಸಲ್ಯೆಗೆ. ಇದರಿಂದಲೇ ನಮಗರಿವಾಗುತ್ತದೆ ಕೌಸಲ್ಯೆ ಮಹಾರಾಣಿ, ಅಯೋಧ್ಯಾ ಸಾಮ್ರಾಜ್ಯದ ಗೃಹಲಕ್ಷ್ಮಿ, ಎಲ್ಲರೊಂದಿಗೆ ಪ್ರೀತಿ, ಅನ್ಯೋನ್ಯತೆಯಿಂದ ಸಹಬಾಳ್ವೆ ನಡೆಸುತ್ತಾ ಎಲ್ಲರೀತಿಯಿಂದಲೂ ದಶರಥನ ಹೆಜ್ಜೆಯನ್ನು ಅನುಸರಿಸಿ ನಡೆವ ಪ್ರೇಮಮೂರ್ತಿ, ಅರಿತು ನಡೆವ ಸತಿ ಎಂದು.

"ರಾಜ್ಞಿ ಕುಸುಮ ಸುಖಮೊದಗಿತೀ ಮಾಮರಕೆ
ಮಧುಫಲಸಾದು ಸಂತೋಷವಿದೊ, ಕೊಳ್ಳಿದಂ
ಕ್ರತುಮೂರ್ತಿ ದಯೆಗೆಯ್ದು ಪಾಯಸ ಪ್ರಾಣಮಂ.
ನೀನುಮಾ ನಿನ್ನ ತಂಗಿಯರಿದಂ ಪಸುಗೆಗೊಳ್ಳಿಂ
ಕುಲದ ಮೇಣ್ ಕ್ರಮದ ಮರ್ಯಾದೆಗಳ್ ಮೆರೆವವೋಲ್"

[ಶ್ರೀರಾಮಾಯಣದರ್ಶನಂ, ಪು-೧೬]

ದಶರಥ ತನ್ನ ಕುಲದ ಮರ್ಯಾದೆಗನುಗುಣವಾಗಿ ಕ್ರಮತಪ್ಪದಂತೆ ಪಾಯಸವನ್ನು ಹಂಚಿಕೊಳ್ಳಲು ತಿಳಿಸಿದ್ದನ್ನು ಕೌಸಲ್ಯೆ ಭಕ್ತಿಯಿಂದ ಸ್ವೀಕರಿಸಿ ಕ್ರಮತಪ್ಪದಂತೆ ಹಂಚಿಕೊಂಡು ಪತಿಯ ಆಸೆಯನ್ನರಿತು ನಡೆದು ಪ್ರೇಮಪುತ್ರರ ಸಾಕ್ಷಾತ್ಕಾರಕ್ಕೆ ಕಾರಣಳಾಗುತ್ತಾಳೆ. ಅಯೋಧ್ಯೆಯು ನಲಿಯುತ್ತಾ ದೊರೆಯ ಸಿರಿಯನ್ನು ದ್ವಿಗುಣಗೊಳಿಸುತ್ತದೆ. ಕೌಸಲ್ಯೆ ರಾಮಶಿಶುವನ್ನು ಗರ್ಭದಲ್ಲಿ ಹೊತ್ತು ಹುಣ್ಣಿಮೆಯಂತೆ ಶೋಭಿಸುತ್ತಾಳೆ. ಹಾಲ್ಗಡಲಿನ ಹಾಲ್ದೆರೆಗಳ ಮೇಲೆ ಚಂದ್ರಶಿಶು ತೇಲಿ ಬಂತೆಯೂ, ಅದನ್ನು ಕೈಚಾಚಿ ಕರೆಯಲು ಅದು ಬಂದು ಕೌಸಲ್ಯೆಯ ತೊಡೆ ಮೇಲೇರಿದಂತೆಯೂ, ಆಕೆ ಅದನ್ನು ಎದೆಗೆ ಅಪ್ಪಿಕೊಂಡಂತೆಯೂ ಕೌಸಲ್ಯೆಗೆ ಕನಸಾಗುತ್ತದೆ. ಪ್ರೇಮಮೂರ್ತಿಯಾದ ಮಾತೆಗೆ ಶಿಶುವಿನ ಹಿರಿಮೆಯ ಅರಿವು ಆ ಸಮಯದಲ್ಲಾಗುವುದಿಲ್ಲ. ಶುಭ ಶಕುನವೆಂದು ಬಗೆದು

ಸುಮ್ಮನಾಗಿರಬಹುದಷ್ಟೆ. ಕ್ಷೀರಸಾಗರದಂತಿರುವ ನಕ್ಷತ್ರಗಳಿಂದ ತುಂಬಿರುವ ಅಂತರಿಕ್ಷದಿಂದ ಬಾಲೇಂದು ಬರುವಂತೆ; ಪ್ರತಿಭಾವಂತ ಕವಿಯ ಮನಸ್ಸಿನಲ್ಲಿ ಮಹಾಕಾವ್ಯ ಮೂಡುವಂತೆ; ಚೈತ್ರ ನವಮಿಯ ಶುಭ ಮಹೂರ್ತದಲ್ಲಿ ಕೌಸಲ್ಯೆ ಶ್ರೀರಾಮಚಂದ್ರನಿಗೆ ಜನ್ಮ ನೀಡಿದಳು.

ಕೌಸಲ್ಯೆ ತನ್ನ ಮಗನ ಸೌಂದರ್ಯ ಸುಧೆಯಲ್ಲಿ ತನ್ನ ಆತ್ಮವನ್ನೇ ಅದ್ದಿ ಕರಗಿಸುತ್ತಾಳೆ. ಜಗತ್ತನ್ನು ಮರೆಯುತ್ತಾಳೆ, ಮೂರುಜಗವನ್ನು ಮಗನಲ್ಲಿ ಕಾಣುತ್ತಾಳೆ. ರಾಮನ ಸೇವೆಯೇ ಅವಳಿಗೆ ಸಕಲ ಸಾಧನೆಯಾಗುತ್ತದೆ. ಪ್ರೇಮದಿಂದ ಮುದ್ದು ಕಂದನನ್ನು ಲಲ್ಲೆಗೈದು ಆಲಂಗಿಸಿ ಮೈಮರೆಯುತ್ತಾಳೆ. ಮಗನನ್ನು ಬಿಟ್ಟು ಉಳಿದೆಲ್ಲಾ ಅವಳಿಗೆ ಶೂನ್ಯವೆನಿಸುತ್ತದೆ. ಸಾದಾರಣವಾಗಿ ಲೋಕದ ಎಲ್ಲ ತಾಯಂದಿರಂತೆ ಕೌಸಲ್ಯೆ ವರ್ತಿಸುತ್ತಾಳೆ. ರಾಮನ ಬಾಲಲೀಲೆಗಳಿಂದ ಮನತಣಿದು ಸುಖಿಸುತ್ತಾಳೆ.

"ಮಗನ ಕಂಗಳ ನೋಡಿ
ಬಾನನೀಕ್ಷಿಸಿದಂತೆ, ಮಗನ ತೊದಲಂಕೇಳಿ
ಕಡಲನಾಲಿಸಿದಂತೆ ಬೆಚ್ಚುವಳು ತಾಯ್ ಸುಯ್ದು
ಒರ್ಮೆ ಆ ಹೂಹಗುರ ಶಿಶುವಿದ್ದಕಿದ್ದಂತೆ
ಗಿರಿಭಾರಮಾಗಿ ಬರೆ,ನೆಗೆಹಲಾರದೆ ತಾಯಿ
ತೇಂಕಿದಳು, ಕಾತರಿಸಿ ಮಗನಭ್ಯುದಯ ಶಂಕೆಯಿಂ
ಮತ್ತೊರ್ಮೆ ಪಚ್ಚೆದೊಟ್ಟಿಲ್ ಬಿಂಬದಲಿ ತನ್ನ
ಮುದ್ದುಕಂದಗೆ ಬದಲ್ ಕಾಣಿಸಿ ಮಹಾಮೂರ್ತಿ
ಕೂಗಿಕೊಂಡಳು ದುಷ್ಟ ಕುಗ್ರಹ ಚೇಷ್ಟೆಯೆಂದಳ್ಕಿ".

[ಶ್ರೀರಾಮಾಯಣದರ್ಶನಂ, ಪು-೨೦]

ಮಗನ ಕಣ್ಣುಗಳನ್ನು ನೋಡಿ ಆಕಾಶವನ್ನು ಕಂಡಂತೆ, ಮಗನ ತೊದಲು ನುಡಿ ಕೇಳಿ ಕಡಲಿನ ಮೊರೆತವನ್ನು ಆಲಿಸಿದಂತೆ ಕೌಸಲ್ಯೆ ಬೆಚ್ಚುತ್ತಾಳೆ. ತೊಟ್ಟಿಲಲ್ಲಿ ಮಗುವಿಗೆ ಬದಲು ಮಹಾಮೂರ್ತಿಯನ್ನು ಕಂಡು ಇದೆಲ್ಲಾ ಕುಗ್ರಹಚೇಷ್ಟೆ ಎಂದು ಸಾಮಾನ್ಯ ಸ್ತ್ರೀಯಂತೆ ಹೆದರಿ ಕುಲಪುರೋಹಿತರನ್ನು ಕರೆಸಿ ನಿವೇದಿಸುತ್ತಾಳೆ. ವಶಿಷ್ಠ ಮಹರ್ಷಿಗಳು ಧ್ಯಾನದಲ್ಲಿದ್ದಾಗ ಆದ ಅನುಭವ ನೆನೆದು ರಾಮ ಅಪ್ರಾಕೃತನೆಂದೂ, ಅಮರಲೋಕದ ಅಮರಶಕ್ತಿಗಳು ಪೃಥ್ವಿಗಿಳುದು ಅಯೋಧ್ಯೆಯನ್ನು ಪ್ರವೇಶಿಸಿ ನಿನ್ನ ತೊಡೆತೊಟ್ಟಿಲ್ಲಲ್ಲಿ ಮಲಗಿದ್ದ ನಿನ್ನ ಮಗನ ಜ್ಯೋತಿಶ್ಶರೀರವನ್ನು ಹೊಕ್ಕವು ಎಂದು, ನಾನು ಧನ್ಯ, ನೀನು ಧನ್ಯ, ನಿನ್ನಿಂದ ರವಿಕುಲವು ಧನ್ಯ ಎಂದೂ ಸಮಾಧಾನದ ನುಡಿಗಳನ್ನು ಹೇಳಿದಾಗ ಕೌಸಲ್ಯೆಗೆ ಪೂರ್ಣವಾಗಿ ಗುರುಗಳ ಮಾತು ಅರ್ಥವಾಗದಿದ್ದರೂ ಕುಗ್ರಹಚೇಷ್ಟೆಯಲ್ಲವೆಂದು ಅರಿತು ಸಮಾಧಾನಹೊಂದುತ್ತಾಳೆ.

ಒಂದು ಹುಣ್ಣಿಮೆಯ ರಾತ್ರಿ ಮೂವರು ರಾಣಿಯರೂ ತಮ್ಮ ಮಕ್ಕಳೊಡಗೂಡಿ ಅರಮನೆಯ ಉದ್ಯಾನದಲ್ಲಿ ಸಂತೋಷದಿಂದ ನಲಿಯುತ್ತಿದ್ದಾಗ ಶಿಶುರಾಮನು ಆಕಾಶದ ಪೂರ್ಣಚಂದ್ರನನ್ನು ನೋಡಿ ಅದನ್ನು ತಂದು ಕೊಡಬೇಕೆಂದು ತಾಯಿ ಕೌಸಲ್ಯೆಯನ್ನು ಕಾಡಿತ್ತಾನೆ. ಅದನ್ನು ಭೂಮಿಗೆ ತರಲಾಗದೆಂದು ರಾಮನಿಗೆ ಹೇಳಿದರೂ ಶಿಶುವಿನ ರೋದನ ಹೆಚ್ಚಾಗಿ ಏನನ್ನು ತೋರಿದರೂ ಸುಮ್ಮನಾಗದೆ ಅಳುವನ್ನು ಹೆಚ್ಚಿಸುತ್ತಿರುವ ಶಿಶುವನ್ನು ಕಂಡು ಅರಮನೆಯ ಜನರು ಬೆದರುತ್ತಾರೆ. ಕೌಸಲ್ಯೆ ಚಂದ್ರನ ಮೇಲೆ ಮುನಿದು " ರವಿವಂಶದವನೆಂಬ ಕರುಬಿನಿಂದಲೇ ನೀನು

ಹಸುಳೆಯನ್ನು ಪೀಡಿಸುತ್ತಿರುವೆ"[1] ಎಂದು ಚಂದ್ರನನ್ನು ನಿಂದಿಸುತ್ತಾಳೆ. ದಶರಥನಾದಿಯಾಗಿ ಅರಮನೆಯವರೆಲ್ಲರೂ ರಾಮನನ್ನು ಸಮಾಧಾನಪಡಿಸಲಾಗದೇ ಸೋತಾಗ ದೊರೆಗೆ ದಿಕ್ಕುತೋಚದಂತಾಗುತ್ತದೆ. ಮಂಥರೆಯ ಉಪಾಯ ಫಲಿಸಿ, ಮಂಥರೆ ನೀಡಿದ ಕನ್ನಡಿಯಲ್ಲಿ ಚಂದ್ರಬಿಂಬವನ್ನು ಕಂಡು ರಾಮನು ಚಂದ್ರನೇ ಕೈಗೆ ಸಿಕ್ಕಂತೆ ನಲಿಯುತ್ತಾನೆ. ಮುದಿಗೂನಿ ಮಂಥರೆ ರಾಮನನ್ನು ಮುದ್ದುಮಾಡಲು ಮುಂದೆಬಂದಾಗ ಕೌಸಲ್ಯೆ "ಕಂದಂಗಮಂಗಳಂ ಮುಟ್ಟದಿರ್ ಮುಟ್ಟದಿರ್"[2] ಎಂದು ಆಕೆಯನ್ನು ತಡೆಯುತ್ತಾಳೆ. ಮಂಥರೆಗೆ ಅವಮಾನದಿಂದ ಕಣ್ಣಲ್ಲಿ ನೀರೂರಿ; ಕೋಪವು ಸರ್ಪದಂತೆ ಹೆಡೆಯೆತ್ತಿ, ಭರತನನ್ನು ಬಿಗಿಯಾಗಿ ಅಪ್ಪಿಕೊಂಡು ಅಲ್ಲಿ ನಿಲ್ಲದೆ ಹೊರಟುಹೋಗುತ್ತಾಳೆ. ಕೌಸಲ್ಯೆ ಸಹಜವಾದ ಮಾತೃವಾತ್ಸಲ್ಯದಿಂದ ಕಂದನ ಕ್ಷೇಮರಕ್ಷಣೆಯಲ್ಲಿ ತೊಡಗಿದಳು. ಆದರೆ ಅದೇ ಸಮಯದಲ್ಲಿ ಇತರರ ಮನಸ್ಸಿಗೆ ನೋವಾಗುತ್ತದೆಂದು ಯೋಚಿಸಲೂ ಸಾಧ್ಯವಾಗದೇ ಸೋತಳು. ಅಮಂಗಳವೆಂದು ಅವಮಾನಿಸಿ ದ್ವೇಷದ ಮುಂದುವರಿಕೆಗೆ ಕಾರಣಳಾದಳು. ಅಂದಿನ ಅವಮಾನ ಮುಂದಿನ ದುರಂತಗಳ ಸರಮಾಲೆಯನ್ನೇ ಸೃಷ್ಟಿಸುತ್ತದೆ. ಇಡೀ ಅಯೋಧ್ಯೆಗೆ ರಾಮ ಮಹಾಪುರುಷನಾಗಿ ಕಂಡರೆ, ಮಂಥರೆಗೆ ಮಾತ್ರ ರಾಮ ಕೇವಲ ಕೌಸಲ್ಯೆಯ ಮಗನಾಗಿಯೇ ಉಳಿದುಬಿಟ್ಟನು. ಇದೇ ಮುಂದಿನ ದುರಂತಗಳಿಗೆ ನಾಂದಿ.

ವಿಶ್ವಾಮಿತ್ರ ಮಹರ್ಷಿಗಳ ಜೊತೆ ಯಾಗ ರಕ್ಷಣೆಗೆ ಹೋಗಿದ್ದ ಪುತ್ರರ ಕ್ಷೇಮ ಸಮಾಚಾರಕ್ಕಾಗಿ ಕಾತರಿಸುತ್ತಿದ್ದ ಕೌಸಲ್ಯೆಗೆ ಮಿಥಿಲೆಯಿಂದ ಬಂದ ಶುಭಸಮಾಚಾರವನ್ನು ಕೇಳಿ ಸಂತೋಷವಾಗುತ್ತದೆ. ಮಗನ ಜೊತೆಯಲ್ಲಿ ನಿಲ್ಲುವ ಸೊಸೆಯ ರೂಪ ಗುಣಶೀಲಗಳನ್ನು ಸಾಮಾನ್ಯ ತಾಯಿಯಂತೆ ಕಲ್ಪಿಸಿಕೊಂಡು ಹಿಗ್ಗುತ್ತಾಳೆ. ರಾಮನಿಗೆ ಪಟ್ಟಾಭಿಷೇಕ ತಪ್ಪಿ ವನವಾಸ ಪ್ರಾಪ್ತವಾದಾಗ ಬಿರುಗಾಳಿಗೆ ಸಿಕ್ಕ ಅರಳಿತಳಿಯಂತಾಗುತ್ತಾಳೆ ಕೌಸಲ್ಯೆ. ಸರ್ವಸ್ವವೂ 'ರಾಮ' ನೆಂದು ತಿಳಿದಿದ್ದ ಕೌಸಲ್ಯೆಗೆ ಅಯೋಧ್ಯೆಯನ್ನು ವ್ಯಾಪಿಸಿದ ದುರ್ವಾರ್ತೆಯಿಂದ ಸಿಡಿಲೆರಗಿದಂತಾಗುತ್ತದೆ. ಶ್ರೀರಾಮ ಬಂದು ನಡೆದುದನ್ನು ಹೇಳಿದಾಗ ಪುಣ್ಯ ಸವೆದ ಅಪ್ಸರೆಯು ಭೂಮಿಗೆ ಬೀಳುವಂತೆ ಕೌಸಲ್ಯೆ ನೆಲಕ್ಕೆ ಬೀಳುತ್ತಾಳೆ. ಮಗನ ಶೈತ್ಯೋಪಚಾರದಿಂದ ಎಚ್ಚೆತ್ತು ಗೋಳಾಡುತ್ತಾಳೆ.

"ಮಗನೆ, ಕೈಕೆಯ ಕುವರನಿಗೆ ರಾಜ್ಯ ಸಂಪದವೆ?
ಹಳುವವೆ ಗತಿಯೆ ನಿನಗೆ ಕೆಟ್ಟೆನೈ ನಾನೆನ್ನಂ
ಕೈಬಿಟ್ಟರೆಲ್ಲರುಂ, ಓ ಕಂದ ಲಕ್ಷ್ಮಣಾ ।
ಬಾ ತಂದೆ,ನೀನಾದೊಡಂ ಬಾಳ್ಗಡರ್ಪಾಗಿ
ಕಾಪಿದೆನ್ನಂ! ಕೇಡದೇನನಾಂ ಕೋರಿದೆನೊ
ಪೋದ ಜನ್ಮದೊಳಾರ್ಗೆ? ಸತ್ಪುರುಷನಾವಂಗೆ
ಬಗೆಯನೋಯುವಂತೆ ನುಡಿದೆನೊ, ದೇವಾ? ಓ ವಿದಿಯೆ
ನಿನ್ನ ಗರಗಸಕಿನಿತು ಕರುಳಿಲ್ಲ? ಕಂದನಂ
ಪೆತ್ತು ಪಡುವಳಲಿಗಿಂ ಬಂಜೆತನಮಿನಿದಲ್ತೆ!
ವತ್ಸ! ವತ್ಸ!"

[ಶ್ರೀರಾಮಾಯಣದರ್ಶನಂ, ಪು-೮೧]

-----------

೧. ಕುವೆಂಪು, ಶ್ರೀರಾಮಾಯಣದರ್ಶನಂ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು ೨, ಎರಡನೇ ಆವೃತ್ತಿ ೨೦೦೪, ಪು.೨೨.

೨. ಅದೇ, ಪುಟ.೨೩.

ಮಗನಿಗೆ ವನವಾಸ ಪ್ರಾಪ್ತವಾದ ದುರ್ವಾರ್ತೆಯು ಕೌಸಲ್ಯೆಯನ್ನು ದಃಖದ ಪಾತಾಳಕ್ಕೆ ನೂಕಿತು. ಕೌಸಲ್ಯೆಯು "ಕೇಡದೇನನಾಂ ಕೋರಿದೆನೊ ಪೊಡ ಜನ್ಮದೊಳಗೆ?" ಸತ್ಪುರುಷನಾವಂಗೆ ಬಗೆಯನೋಯುವಂತೆ ನುಡಿದೆನೊ? ಎಂದು ದುರಂತ ಸಂಭವಿಸಿದ ಮೇಲೆ ತನ್ನ ಆತ್ಮವಿಮರ್ಶೆ ಮಾಡಿಕೊಳ್ಳುತ್ತಾಳೆ. ಹೋದಜನ್ಮದ ಪಾಪವೆಂದು ಭ್ರಮಿಸುತ್ತಾಳೆಯೇ ವಿನಾ ಈ ಜನ್ಮದಲ್ಲಿ ತಾನು ಮಂಥರೆಯನ್ನು 'ಅಮಂಗಳೆ' ಎಂದು ತಿರಸ್ಕರಿಸಿ ನೋಯಿಸಿದ್ದನ್ನು ಮರೆತೇಬಿಡುತ್ತಾಳೆ. ಕಂದನನ್ನು ಪಡೆದು ದುಃಖಿಸುವುದಕ್ಕಿಂತ ಬಂಜೆತನ ಲೇಸೆಂದು ಕೌಸಲ್ಯೆ ರೋದಿಸುತ್ತಾಳೆ. 'ವಿಧಿಯ ಗರಗಸಕ್ಕೆ ಸಲ್ಪವೂ ಕನಿಕರವಿಲ್ಲ' ಎಂಬುದು ಸತ್ಯ. ಪಟ್ಟಾಭಿಷೇಕಕ್ಕೆ ತಯಾರಾಗುತ್ತಿದ್ದ ಮಗ ಶ್ರೀರಾಮ ವನವಾಸಕ್ಕೆ ತೆರಳಿದರೆ, ಪಟ್ಟಾಭಿಷೇಕ್ಕೆ ಸಿದ್ಧತೆನಡೆಸಿದ್ದ ರಾಜ ದಶರಥ ಮರಣಶಯ್ಯೆಯಲ್ಲಿ ಬೀಳುತ್ತಾನೆ. ಮಗನ ಪಟ್ಟಾಭಿಷೇಕ ಮಹೋತ್ಸವ ನೋಡಿ ಕಣ್ತುಂಬಿಕೊಳ್ಳಲು ಅಣಿಯಾಗಿದ್ದ ಕೌಸಲ್ಯೆಗೆ ದುರಂತಗಳ ಸರಮಾಲೆ ಜೊತೆಗೆ ವೈಧವ್ಯ ಪ್ರಾಪ್ತಿಯಾಗುತ್ತದೆ. ಅಯೋಧ್ಯೆ ವಿಧಿಯ ತೋಳ್ತೆಕ್ಕೆಯಲ್ಲಿ ನಲುಗಿ ಹೋಗುತ್ತದೆ. ಕೌಸಲ್ಯೆಯಾಡುವ ಒಂದೊಂದು ಮಾತುಗಳೂ ಆಕೆಯ ಜರ್ಜರಿತ ಸ್ಥಿತಿಯನ್ನು ತೋರಿಸುತ್ತವೆ:

"ತನ್ನುಸಿರನಡವಿಗಟ್ಟುತೆ ಒಡಲ್
ಮನೆಯೊಳಂತಿರ್ಪುದಯ್? ತೊಡೆಯ ತೊಟ್ಟಿಲೊಳಿಟ್ಟು
ಪಾಲೆರೆದು ಕರುವಿಟ್ಟು, ತೂಗಿ ಜೋಗುಳವಾಡಿ
ಲಾಲಿಸಿದ ಪಾಲಿಸಿದ ನಿನ್ನ ಮೆಯ್ಯಿದನೆಂತು
ಪೇಳ್ ಕಾಂತಾರ ರಾಕ್ಷಸಿಗೆ ತುತ್ತುಗೂಳ್ ಕೊಡಲಿ?
ಕರುಣಿಯಂ ದೂರಗೆಯ್ದೀ ನಿನ್ನ ಪರದೇಶಿಯಂ
ತಾಯಿಯ ತಳ್ಳದಿರೊ ಚಿಂತಾನರಕ ಚಿತೆಯ
ಪುತ್ರವಿರಹದ ಚಿತ್ರಭಾನುವಿಗೆ! ದಾಶರಥಿ,
ಹೆತ್ತ ತಾಯನೆ ತೊತ್ತುಗೈದೀ ಧರ್ಮ ಬುತ್ತಿಯಂ
ಕಟ್ಟಿಕಾಡಿಗೆ ಹೊತ್ತುಣುವ ಬುದ್ಧಿಯಂ ಮಾಣ್ದು
ಕಿರುವೆಂಡತಿಗೆ ಮಾರುವೋದ ನಿನ್ನಯ್ಯನಂ
ತಿದ್ದಿ, ಕಾಪಿಡು ಕುಲದ ಬಾಳ್ವೆಯಂ ಕೀರ್ತಿಯಂ
ನೀನಡವಿಗೆಯ್ದುವೊಡೆ ನಾನುಮೆಯ್ದುವೆನೊಡನೆ,
ಕರುಗೂಡಿ ನಡೆವ ಗೋವಂತೆ!"

[ಶ್ರೀರಾಮಾಯಣದರ್ಶನಂ, ಪು-೮೨]

ಮಗುವನ್ನಗಲುವ ಸಂದರ್ಭ ಒದಗಿದಾಗ ಒಬ್ಬ ತಾಯಿಗೆ ಒದಗುವ ಸಂಕಟವೇ ಇಲ್ಲಿ ಮೂರ್ತಿವೆತ್ತಂತಿದೆ. ಮಗ ಮಹಾಪುರುಷ, ಬಲಶಾಲಿಯೇ ಆದರೂ ಹೆತ್ತಕರುಳು ಕಾನನಕ್ಕೆ ಕಳಿಸಲು ಹಿಂಜರಿಯುತ್ತದೆ. ಸಂಕಟದ ಸಮಯದಲ್ಲಿ ಕಿರು ಹೆಂಡತಿಗೆ ಮಾರುಹೋದ ಪತಿಯ ಬಗ್ಗೆ ಬೇಸರವಾಗಿ ಮಗನಿಗೆ ತಂದೆಗೆ ಬುದ್ಧಿಕಲಿಸಲು ತಿಳಿಸುತ್ತಾಳೆ. ಕುಲದ ಕೀರ್ತಿಯನ್ನು ಬೆಳಗು ಎನ್ನುತ್ತಾಳೆ. ಇಲ್ಲಿ ಪತಿ ಪ್ರೇಮಕ್ಕಿಂತಾ ಪುತ್ರವಾತ್ಸಲ್ಯವೇ ಮೇಲ್ಮೈ ಪಡೆದಿದೆ. 'ಕರುವಿನೊಡಗೂಡಿ ನಡೆವ ಗೋವಿನಂತೆ' ಕೌಸಲ್ಯೆ ರಾಮನಿಂದೆ ಹೋಗಲು ಬಯಸುತ್ತಾಳೆ. ರಾಮನು ತಾಯಿಯ ಸಂಕಟದ ನುಡಿಗಳನ್ನು ಅರಿತು ಸಮಾಧಾನಿಸುತ್ತಾನೆ. ಬಾಲರ್ಷಿ ಭರತನು ನನ್ನಂತೆಯೇ ನಿನ್ನನ್ನು ಪ್ರೀತಿಸುತ್ತಾನೆ, ಚಿಂತಿಸಬೇಡಿ ಹೋಗಿಬರಲು ಆಶಿರ್ವಾದಿಸು. ಕೋಸಲದ ಕ್ಷೇಮಕ್ಕೆ, ರವಿಕುಲದ ಕ್ಷೇಮಕ್ಕೆ ಹರೈಕೆಗ್ಯೆ, ಸತ್ಯಕ್ಕೆ ಧರ್ಮಕ್ಕೆ, ಪಿತೃವಾಕ್ಯಪರಿಪಾಲನಕ್ಕೆ ಮತ್ತು ನಿನ್ನ ಪುತ್ರನ

ಆತ್ಮೋದ್ಧಾರಕ್ಕಾಗಿ ಹರಕೆಗೈದು ಕಳಿಸಿಕೊಡಬೇಕೆಂದು ಬೇಡಿದಾಗ ಕೌಸಲ್ಯೆ ರಾಮನಿಗೆ ಮಣಿಯುತ್ತಾಳೆ.

"ಜೈಸುಗೆ ವಿಧಿಯ ವಜ್ರೇಚ್ಛೇ!
ಗೆಲ್ಗೆ ನಿರುತಂ ಋತು! ಜಗದೀಶ ಕೃಪೆಯೆನಗೆ
ದಯೆಗೆಯ್ಗೆ! ಗೆಲಮಕ್ಕೆ ದೇವರ್ಕಳೆಲ್ಲರ್ಗೆ
ಜಯಮಕ್ಕೆ ಮಾತೃವೊಲ್ಮೆಯ ಮಹತ್ ಪ್ರಾರ್ಥನೆಗೆ!
ಓ ಧರ್ಮದೇವತೆಯೆ, ಮಗನೀತನೆನ್ನಂ;
ನಿನ್ನಂಕ ಪರ್ಯಂಕದೊಳಗಿಟ್ಟು ಕಳಿಪೆನಾ
ಹೇರಡವಿ ಪೊಡವಿಯ ಹುಲಿಯ ಹೊಡೆಗೆ ಪಾಲಿಸೌ
ಪರದೇಶಿಯಂ! ನೀನೆ ತಾಯಮ್ಮ ತಬ್ಬಲಿಗೆ,
ನನ್ನ ಕಂದಗೆ ರಾಮಚಂದ್ರಂಗೆ!"

[ಶ್ರೀರಾಮಾಯಣದರ್ಶನಂ, ಪು-೮೬]

ವಿಧಿಯ ಇಚ್ಛೆಯು ಜಯಿಸಲೆಂದು, ಧರ್ಮದೇವತೆಯಲ್ಲಿ ತನ್ನ ಮಗನಿಗೆ ಶ್ರೇಯಸ್ಸು ಸಿಗಲೆಂದು ಬೇಡಿ, ಪ್ರಕೃತಿಯೇ ತಾಯಿ ಎಂದು ರಕ್ಷೆಯನ್ನು ಬೇಡಿ ಕೌಸಲ್ಯೆ ರಾಮನಿಗೆ ಆಶೀರ್ವಾದಿಸುತ್ತಾಳೆ. ತನ್ನ ಕರುಳಕುಡಿ ರಾಮ ಶಕ್ತಿಶಾಲಿಯೆಂದು ತಿಳಿದಿದ್ದರೂ ಅರಣ್ಯಕ್ಕೆ ಕಳಿಸಲು ತಾಯಿಯ ಮನಸ್ಸು ಎಷ್ಟು ವ್ಯಥೆಪಡುತ್ತದೆಂಬುದನ್ನು ಕೌಸಲ್ಯೆಯ ಮಾತುಗಳು ಧ್ವನಿಸುತ್ತವೆ:

"ಸಾಗರಯಾತ್ರೆ ಕೈಗೊಂಡಿರುವ ನದಿಯನ್ನು ಬೆಟ್ಟ ತಡೆಯುತ್ತದೆಯೆ? ನಿನ್ನ ಹಿರಿಯ ಬಾಳಿಗೆ ತಾಯೊಲ್ಮೆ ಕಿರಿದಲ್ಲವೆ? ಜಗಜ್ಜೀವನವೇ ನಿನ್ನನ್ನು ಕೈ ಬೀಸಿ ಕರೆಯುತ್ತಿದೆ. ಹೋಗಪ್ಪ, ಹೋಗಪ್ಪ, ಹೋಗು! ಹೋಗಿ ಬೇಗನೆ ಬಾ, ನಿನಗೆ ಸುಖವಾಗಲಿ, ಗೆಲುವಾಗಲಿ. ಹೆತ್ತಾಗಲೇ ನಾನಿದನ್ನು ಶಂಕಿಸಿದೆ. ಮೊಟ್ಟೆಯೊಡೆದು ಬಂದ ಮರಿಹಕ್ಕಿ ಗಗನ ಸಾಹಸಕ್ಕೆಳಸುವಂತೆ, ಬಿಂದು ಸಿಂಧುವನ್ನು ಸೇರುವಂತೆ, ಮನೆಯೊಲ್ಮೆ, ತಾಯೊಲ್ಮೆ, ನಾಡೊಲ್ಮೆಗಳನ್ನು ತ್ಯಜಿಸಿ ಅರಣ್ಯವಾಸದ ನೆಪವೊಡ್ಡಿ ಹಾರಿಹೋಗುತ್ತಿದ್ದೀಯೆ. ನೀನು ಯಾವ ಧರ್ಮಕ್ಕಾಗಿ ಕಾಡಿಗೆ ಹೋಗುತ್ತಿದ್ದೀಯೊ ಆ ಧರ್ಮವೇ ನಿನ್ನನ್ನು ಕಾಪಾಡಲಿ".[೩]

ಕೌಸಲ್ಯೆಯ ಅಂತಃಕರಣ ರಾಮನಿಗಾಗಿ ಎಷ್ಟು ಕಾತರಿಸುತ್ತದೆಂದು ಈ ವಾಕ್ಯಗಳಿಂದ ಅರಿವಾಗುತ್ತದೆ. ಕೌಸಲ್ಯೆಗೆ ಕಂದನನ್ನು ತಡೆಯಲಾಗದೆಂದು ಅರಿತಾಗ ಆಶೀರ್ವಾದಿಸುವ ಮನಸ್ಸು ಮಾಡುತ್ತಾಳೆ. ಕಾಡಿನಲ್ಲಿ ತನ್ನ ಕಂದನಿಗೆ ಒದಗಬಹುದಾದ ತೊಂದರೆಗಳನ್ನು ನೆನೆದು ಜಲದೇವತೆಗಳು, ಭೂದೇವತೆಗಳು, ದಿಗ್ದೇವತೆಗಳೆಲ್ಲರನ್ನು ಕಂದನಿಗೆ ಒಳಿತಾಗಲು ಪ್ರಾರ್ಥಿಸುತ್ತಾಳೆ. ವಿಷಜಂತುಗಳಿಂದ ರಾಮನಿಗೆ ಅಪಾಯ ಒದಗಬಾರದೆಂದು ಬೇಡುತ್ತಾಳೆ. ಸಿಡಿಲು, ಮಿಂಚು,ಬಿರುಗಾಳಿಗಳಿಂದ ಕೇಡಾಗಬಾರದೆಂದು ಕೇಡಾದರೆ 'ಹೆತ್ತ ಜನನಿಯ ಎದೆಯ ಅಭಿಶಾಪ ನಿಮ್ಮನ್ನು ತಾಗಲಿ' ಎಂದು ರಕ್ಷೆಗಳನ್ನು ಕಟ್ಟುತ್ತಾಳೆ. ಕೌಸಲ್ಯೆ ವಿಧಿಲೀಲೆಗೆ ಮರುಗಿ ಕಂದ ಶ್ರೀರಾಮನನ್ನು ಹಾರೈಸಿ ಕಳುಹಿಸುತ್ತಾಳೆ.

---

೩. ದೇಜಗೌ, ಶ್ರೀರಾಮಾಯಣ ದರ್ಶನಂ ವಚನ ಚಂದ್ರಿಕೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಕೃಷ್ಣಮೂರ್ತಿಪುರಂ, ಮೈಸೂರು ೪, ಏಳನೆಯ ಮುದ್ರಣ ೨೦೦೭, ಪು.೮೫.

ಭರತನು ದುಃಖದಿಂದ ತಾಯಿ ಕೌಸಲ್ಯೆಯನ್ನು ಬೇಟಿಮಾಡಿದಾಗ ಕೌಸಲ್ಯೆಗೆ ಸವತಿ ಮಾತ್ಸರ್ಯದ ಲವಲೇಶವೂ ಇಲ್ಲದೇ ರಾಮನನ್ನೇ ಕಂಡಷ್ಟು ಸಂತಸ ಭರತನ ಆಗಮನದಿಂದ ಉಂಟಾಗುತ್ತದೆ. ಭರತನಿಗೆ ರಾಮನಷ್ಟೇ ಪ್ರೀತಿ, ವಾತ್ಸಲ್ಯಯದಿಂದ ಆಶಿರ್ವಾದಿಸಿ ಸಮಾಧಾನಿಸುತ್ತಾಳೆ. ಕೌಸಲ್ಯೆಯು ಭರತನನ್ನು ಸಂತೈಸುವ ನುಡಿಗಳು:

"ಬಾ ಕಂದ; ಬಾ,
ಹೇ ಸಾಧು ಸುಕುಮಾರ! ಮುತ್ತಿದೀ ಕತ್ತಲೊಳ್
ದೀಪದೋಲ್ಯೆತಂದೆ. ಕಣ್ಗೆಟ್ಟ ಕರುಡಿಂಗೆ
ಬಟ್ಟೆದೋರ್ಪರೆಗೋಲಾಗಿ ನೀಂ ಬಂದೆ, ಬಾ,
ತಂದೆ, ಬಾ! ನಾರುಡೆಯನುಟ್ಟಡವಿಗೈದಿದಾ
ಕಂದನಂ ನಿನ್ನೊಳೆಯೆ ಕಂಡು, ತವಿಸುವನೆರ್ದೆಯ
ತಾಪಮಂ. ಮರುಗದಿರ್, ತಪ್ಪು ತಾಯದಲ್ತು
ನಾಚದಿರ್. ಮೂದಲಿಸಲೆಳೆಸಿದರೆ ದುರುಳ ವಿಧಿ
ಹಡೆದ ಕರುಳೇನ ಮಾಡುವುದಣ್ಣ? ಮಂಥರೆಯ
ಕೈತವಕೆ ತುತ್ತಾದರೆಲ್ಲರುಂ, ಕೇಳ್, ಮಗುವೆ
ನೀನಿಲ್ಲದಾ ದುರ್ಮುಹೂರ್ತದಲಿ!"

[ಶ್ರೀರಾಮಾಯಣದರ್ಶನಂ, ಪು–೮೫]

ಭರತನಿಗೆ ಕೌಸಲ್ಯೆಯೇ ಸಮಾಧಾಪಡಿಸಿ, ವಿಧಿ ಮಂಥರೆಯ ರೂಪದಲ್ಲಿ ಅಯೋಧ್ಯೆಯನ್ನು ಕಣ್ಣೀರಿನ ಕಡಲಿನಲ್ಲಿ ನೂಕಿತಂದೂ, ಭರತನ ತಾಯಿಯದು ತಪ್ಪಿಲ್ಲವೆಂದೂ ಸಂತೈಸುವ ವಿಶಾಲಹೃದಯ ಮಹಾಮಾತೆ ಕೌಸಲ್ಯೆಯದು.ರಾಮನಮಹಾಮಾತೆ ಕೌಸಲ್ಯೆಯ ಸತ್ವವನ್ನು ಎತ್ತಿಹಿಡಿಯುವ ಪ್ರಸಂಗವೇ ಇದು ಎನ್ನಬಹುದು.

ರಾಮನನ್ನು ಮನಸ್ಸಿಲ್ಲದ ಮನಸ್ಸಿನಿಂದ ಪಿತೃವಾಕ್ಯಪರಿಪಾಲನೆಗೆ ವನವಾಸಕ್ಕೆ ಕಳುಹಿಸಿದ ಕೌಸಲ್ಯೆಯ ತಾಯಿ ಹೃದಯ ದ ಹಂಬಲವನ್ನು ಮುಂದೆಲ್ಲಿಯೂ ಕವಿ ಪ್ರಾಸ್ತಾಪಿಸುವ ಗೋಜಿಗೇ ಹೋಗುವುದಿಲ್ಲ. ಹದಿನಾಲ್ಕು ವರ್ಷಕಾಲ ಕೌಸಲ್ಯೆ ಮಗ ಸೊಸೆಯನ್ನು ಎಷ್ಟು ನೆನೆದು ಹಂಬಲಿಸಿರಬಹುದು? ವಿಧಿಯನ್ನು ಬೈದಿರಬಹುದು! ಮಹಾಕವಿ ಇದಾವುದರ ಸುಳಿವೂ ನೀಡದೆ ತಟಸ್ಥಗೊಳಿಸಿದ್ದಾರೆ. ಮುಂದೆ ರಾಮ, ಸೀತೆ, ಲಕ್ಷ್ಮಣರು ವನವಾಸ ಮುಗಿಸಿ ಹಿಂತಿರುಗಿದಾಗಲೂ ಕೌಸಲ್ಯೆ ಯಾವ ರೀತಿ ತನ್ನ ಉಸಿರಾದ ರಾಮನನ್ನು ಬರಮಾಡಿಕೊಂಡಳೆಂಬುದನ್ನು ಕುವೆಂಪು ಅವರು ಚಿತ್ರಿಸಿಲ್ಲ. ವಾಲ್ಮೀಕಿ ಮಹರ್ಷಿ "ದೀನಳಾದ ದುಃಖದಿಂದ ಕೃಶಳಾದ ತಾಯಿಯ ಬಳಿಗೆ ರಾಮನು ಬಂದು ತಾಯಿಯ ಮನಸ್ಸನ್ನು ಸಮಾಧಾನಪಡಿಸುತ್ತಾ ಭಕ್ತಿಯಿಂದ ಆಕೆಯ ಪಾದಗಳನ್ನು ಹಿಡಿದುಕೊಂಡನು"[೪] ಎಂದು ಚಿತ್ರಿಸಿದ್ದಾರೆ. ಇದು ಸಹಜವಾಗಿ ಮೂಡಿಬಂದಿದೆ. ಆದರೆ ಕುವೆಂಪು ಚಿತ್ರಿಸಿರುವ ಬಗೆ ಅಚ್ಚರಿಗೊಳಿಸುತ್ತದೆ. ವನವಾಸ ಕಾಲದಲ್ಲಿ ತಾಯಿ ಕೌಸಲ್ಯೆ ಅನುಭವಿಸಿದ ನೋವನ್ನಾಗಲಿ, ರಾಮಾಗಮನದ ನಂತರ ಕೌಸಲ್ಯೆ ಅನುಭವಿಸಿದ ಸಂತೋಷದ ಕ್ಷಣಗಳನ್ನಾಗಲಿ ಕವಿ ಸಹೃದಯರಿಗೆ ವೇದ್ಯವಾಗುವಂತೆ ಚಿತ್ರಿಸಿಲ್ಲ. ಕೇವಲ ಎರಡು ಮೂರು ವಾಕ್ಯದಲ್ಲಿ ಕೌಸಲ್ಯೆಯ ಸಂಭ್ರಮವನ್ನು ನಿಲ್ಲಿಸಿಬಿಟ್ಟಿದ್ದಾರೆ.

----------

೪. ಡಾ. ಸಿ.ಎನ್.ಶ್ರೀನಿವಾಸ ಅಯಂಗಾರ್, ಕನ್ನಡ ವಾಲ್ಮೀಕಿರಾಮಾಯಣ ಭಾಗ.೨, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಕೃಷ್ಣಮೂರ್ತಿಪುರಂ, ಮೈಸೂರು ೪, ಐದನೆಯ ಮುದ್ರಣ ೨೦೦೭, ಪು.೧೪೫೧.

"ಕಂದನಂ ಕಂಡು ಕೌಸಲ್ಯೆ
ಮುಂಬರಿಯಲೆಳಸಿಯುಂ ಬೇರೆಯಾರನೊ ನೋಡಿ
ಬೆರಗಾದವಳಂತೆವೋಲ್ ಪಿಂಜರಿದು ನಿಂದಳ್
ಸಖೀಜನರಡರ್ಪಂ ಬಯಸಿ".

[ಶ್ರೀರಾಮಾಯಣದರ್ಶನಂ, ಪು-೮೬೩]

ಕಂದನನ್ನು ಕಂಡ ಕೌಸಲ್ಯೆ ರಾಮನು ಮಹಾನ್‌ವ್ಯಕ್ತಿಯಾಗಿ ಬೆಳೆದು ದೇವಸದೃಶನಾಗಿ ಕೀರ್ತಿ ಪಡೆದಿರುವುದಕ್ಕೆ ಬೆರಗಾಗುವುದು ಸರಿ. ಆದರೆ ಹಿಂಜರಿದು ನಿಲ್ಲುವುದು ಎಂದರೇನು? ವನವಾಸ ಪ್ರಾಪ್ತವಾಗಲೆಂದು ದಶರಥನಿಂದ ವರ ಪಡೆದ ತಾಯಿ ಕೈಕೆಯೀ "ರಾಮನ ಮಹಾಮಹಿಮೆಗೆ ವಿಕಾಸಕ್ಕೆ ತಾನೇ ಕಾರಣಳೆಂದು, ಜನಮನ ಭ್ರಾಂತಿಯನ್ನು ಮರೆತು ರಾಮನೆಡೆಗೆ ನಡೆಯುತ್ತಾಳೆ". ಆದರೆ ಅಗಾಧ ಪ್ರೀತಿ, ಮಮತೆ, ವಾತ್ಸಲ್ಯಗಳ ಮಾತೃ ಮೂರ್ತಿಯಾದ ಕೌಸಲ್ಯೆ ಹಿಂಜರಿದು ನಿಲ್ಲುತ್ತಾಳೆ ಎಂಬುದೇ ಸೋಜಿಗದ ಸಂಗತಿ.

೨. ಮಂಥರೆ

ರಾಮಾಯಣದ ಕಥಾಸಾಗರದಲ್ಲಿ ಕಣ್ಣೀರಿನ ಸೇತುವೆ ನಿರ್ಮಿಸಲು ಮೊದಲ ಅಡಿಗಲ್ಲು ಇಟ್ಟವಳು ಮಂಥರೆ. ಈಕೆ ರಾಮಕಥೆಗೆ ಜೀವಶಕ್ತಿಯಾಗಿ ಬಂದವಳು. ರಾಮನು ಮಹಾಪುರುಷನೆಂದು ಕೀರ್ತಿವಂತನಾಗಲು ಕಾರಣವಾದ ಜೀವಧಾತು ಮಂಥರೆ. "ಸಹಸ್ರ ಸಹಸ್ರ ವರ್ಷಗಳಿಂದ, ಆಕೆಯನ್ನು ಸೃಜಿಸಿದ ಮಹರ್ಷಿ ವಾಲ್ಮೀಕಿಯೇ ಮೊದಲುಗೊಂಡು ಇಂದಿನವರೆಗೂ, ಕೋಟಿ ಕೋಟಿ ಜನರ ಅವಹೇಳನಕ್ಕೆ, ತಿರಸ್ಕಾರಕ್ಕೆ, ಶಾಪಕ್ಕೆ ಆಕೆ ಆಹಾರವಾಗುತ್ತಾ ಬಂದಿದ್ದಾಳೆ. ಅವಳನ್ನು ಅಸ್ಪೃಶ್ಯಳೆಂದು, ಅನಿಷ್ಟಳೆಂದು, ಹೀನೈಸಿದ್ದು, ಅಪಶಕುನದ ಮೂರ್ತಿ ಎಂದು ತುಚ್ಛೀಕರಿಸಿದ್ದು ಕೇವಲ ಅಂದಿನ ಕೇಕೆಯ ರಾಜ್ಯ, ಕೋಸಲ ರಾಜ್ಯಗಳಷ್ಟೇ ಅಲ್ಲ, ಇಂದಿನವರೆಗಿನ ಎಲ್ಲ ದೇಶಗಳ ಜನತೆಯೂ ಕೂಡ ಆಕೆಯ ಇಂಥ ಯುಗ ಯುಗದ ಶಾಪ ಪಾಪಗಳು ಅಳಿದಿದ್ದು, ಕಳಂಕ ತೊಳೆದದ್ದು, ಈ ಯುಗದ ಕವಿ ಕುವೆಂಪು ಅವರಿಂದ. ತನ್ನ ವಿಮೋಚನೆಗಾಗಿ ಆಕೆ ಎರಡು ಸಾವಿರವರ್ಷಗಳು ಕಾಯಬೇಕಾಯಿತು, ನೋಯಬೇಕಾಯಿತು, ಬೇಯಬೇಕಾಯಿತು"[೫] ಎಂದು ಡಾ. ಎಚ್. ಜೆ. ಲಕ್ಕಪ್ಪಗೌಡ ಅವರು ಮಂಥರೆಯ ಬಗ್ಗೆ ಹೇಳಿರುವ ಅಭಿಪ್ರಾಯವು ಅರ್ಥಗರ್ಭಿತವಾಗಿದೆ.

'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ ಕುವೆಂಪು ಅವರು ಮಂಥರೆಯ ಶಾಪಕ್ಕೆ ವಿಮೋಚನೆ ನೀಡಿ ಆಕೆಯನ್ನು ಉದ್ಧರಿಸು ಕೆಲಸವನ್ನು ಮಾಡಿದ್ದಾರೆ. ಮಂಥರೆ ವಿಧಿಯ ಕೈಗೊಂಬೆ. ರಾಮನ ಹಿರಿಮೆಯನ್ನು ಸಾಕಾರಗೊಳಿಸಲು ಸಹಕರಿಸಿದ ಜೀವ, ರಾಮಾಯಣದ ಕಥೆಗೆ ಜೀವತುಂಬಿದಾಕೆ, ಆದ್ದರಿಂದ ಕುವೆಂಪು ಆಕೆಯನ್ನು ಉದ್ಧರಿಸಿ ರಾಮಶಕ್ತಿಯೊಂದಿಗೆ ಲೀನಗೊಳಿಸಿದ್ದಾರೆ. ಮಂಥರೆಯನ್ನು 'ಶ್ರೀ ರಾಮಾಯಣ ದರ್ಶನಂ' ನಲ್ಲಿ ಮೊದಲು ಉದ್ಯಾನವನದಲ್ಲಿ ರಾಮನನ್ನು ಉಪಾಯದಿಂದ ಸಮಾಧಾನಪಡಿಸುವ ಸಮಯದಲ್ಲಿ ಕಾಣುತ್ತೇವೆ. ಒಂದು ಹುಣ್ಣಿಮೆಯ ರಾತ್ರಿ ಮೂವರು ರಾಣಿಯರೂ ತಮ್ಮ ಮಕ್ಕಳೊಡಗೂಡಿ ಅರಮನೆಯ ಉದ್ಯಾನದಲ್ಲಿ ಸಂತೋಷದಿಂದ ನಲಿಯುತ್ತಿದ್ದಾಗ ಶಿಶುರಾಮನು ಆಕಾಶದ ಪೂರ್ಣಚಂದ್ರನನ್ನು ನೋಡಿ ಅದನ್ನು ತಂದು ಕೊಡಬೇಕೆಂದು ತಾಯಿ ಕೌಸಲ್ಯೆಯನ್ನು ಕಾಡಿತ್ತಾನೆ. ಅದನ್ನು ಭೂಮಿಗೆ ತರಲಾಗದೆಂದು ರಾಮನಿಗೆ ಹೇಳಿದರೂ ಶಿಶುವಿನ ರೋದನ ನಿಲ್ಲುವುದಿಲ್ಲ. ವಿವಿಧ ಭಕ್ಷ್ಯ ಬೋಜನಗಳನ್ನು ತಂದು ಅವನ ಮುಂದಿಟ್ಟರೂ ಯಾವೂದೂ ಬೇಡವಾಗಿ, ದಶರಥನೇ ಬಂದು ಸಂತೈಸಲಾರದೆ ಸೋಲುತ್ತಾನೆ. ತಾಯಿ ಕಂಗಾಲಾಗಿ, ದಶರಥ ದಿಕ್ಕು ತೋಚದಂತಾದಾಗುತ್ತಾನೆ. ಆ ಸಮಯದಲ್ಲಿ ಕಾಣಿಸಿಕೊಂಡವಳು ಮಂಥರೆ. ಮಂಥರೆಯನ್ನು ಕಂಡ ಜನರೆಲ್ಲರೂ, ಕೈಕೆಯನ್ನು ಬಿಟ್ಟು ಮಿಕ್ಕವರೆಲ್ಲರೂ ಅಮಂಗಳವನ್ನು ಕಂಡಂತೆ ಮೊಗತಿರುವಿ ಮಾತು ನಿಲ್ಲಿಸುತ್ತಾರೆ.

ಕಡು ಬಿಲ್ಲು ಬಾಗಿದ ಮೆಯ್ಯ
ತೊನ್ನು ಬೆಳಲೆವಿಡಿದ ಕರ್ರನೆಯ ಕುಬ್ಜತೆಯ
ಗುಳಿ ಹಿಂಟಲಿನವೋಲ್ ಗೂನುವುಟ್ಟಿದ ಬೆನ್ನು
ಸುಕ್ಕು ನಿರಿ ನಿರಿಯಾಗಿ ಬತ್ತದ ತೊವಲ್ ಪತ್ತಿ
ಬಿಗಿದೆಲ್ವುಗೂಡಿನಾ ಶಿಥಿಲ ಕಂಕಾಲತೆಯ,

----------

೫. ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೨೯೧.

ಪಲ್ಲುದುರಿ ಬೋಡಾದ ಬಚ್ಚು ಬಾಯಿಯ, ಕುಳಿಯ
ಕೆನ್ನೆಗಳ, ದಿಟ್ಟಿಮಾಸಿದ ಕಣ್ಣಕೋಟರದ
ಕರ್ಬನ ಮೊರಡು ಮೊಗದ, ಕೂದಲುದುರಿದ ಬೋಳು
ಪುರ್ಬಿನ ವಿಕಾರದಾ, ಬೆಳ್ನಕ್ಕಿ ತಿಪುಳೆನೆ
ಮಂಡೆಯಂ ಮುತ್ತಿ ಕೆದರಿದ ಬೆಳ್ಳನೆಯ ನವಿರ
ಅಸ್ಥಿಪಂಜರದಂತೆವೋಲಸ್ಥಿರ ಸ್ಥವಿರೆಯಂ!

[ಶ್ರೀರಾಮಾಯಣದರ್ಶನಂ, ಪು–೨೩]

ಮಂಥರೆಯ ಮುಪ್ಪಿನ ರೂಪವನ್ನು ಕವಿಯು ಸಹೃದಯರ ಮನಸ್ಸಿಗೆ ಹೆಚ್ಚು ಸ್ಪಷ್ಟವಾಗುವಂತೆ ಚಿತ್ರಿಸಿದ್ದಾರೆ. ಈಘೋರ ರೂಪು ಸಾಮಾನ್ಯರಿಗೆ ಮೊಗತಿರುವುವಂತೆ ಮಾಡಿದೆ. ಆದರೆ ಕೈಕೆ ಮಾತ್ರ ತಾಯಿಯಂತೆ ಭಾವಿಸಿ ಗೌರವಿಸುತ್ತಾಳೆ. ಮಂಥರೆಯು ಕೈಕೆಗೆ ಕನ್ನಡಿಯೊಂದನ್ನು ನೀಡಿ ಅದನ್ನು ರಾಮನ ಮುಂದಿಡಿಯುವಂತೆ ಹೇಳುತ್ತಾಳೆ. ಕನ್ನಡಿಯಲ್ಲಿ ಚಂದ್ರನ ಬಿಂಬವನ್ನು ಕಂಡು ಚಂದ್ರನೇ ಕೈಗೆ ಸಿಕ್ಕಷ್ಟು ರಾಮನು ಹರ್ಷಿಸುತ್ತಾನೆ. ಮಂಥರೆ ರಾಮನನ್ನು ಮುದ್ದಿಸಲು ಮುಂದಾದಾಗ ಕೌಸಲ್ಯೆ ಕಂದನಿಗೆ ಅಮಂಗಳವೆಂದು ಮುಟ್ಟಿಸುವುದಿಲ್ಲ. ಮಂಥರೆಗೆ ಅವಮಾನ ತಾಳಲಾಗದೆ ಕಣ್ಣೀರು ಜಾರುತ್ತದೆ, ಮನಸ್ಸು ನೋಯುತ್ತದೆ. ಈ ಪ್ರಸಂಗವನ್ನು ಕೌಸಲ್ಯೆ ಮರೆತು ಬಿಡುತ್ತಾಳೆ. ಆದರೆ ಮಂಥರೆ ಮರೆಯಲಿಲ್ಲ; ಹೆಡೆ ತುಳಿಸಿಕೊಂಡ ಸರ್ಪಿಣಿಯಂತಾದಳು; ರಾಮಾಯಣದ ದುರಂತ ಸರಮಾಲೆಗೆ ಅಂದೇ ಶಿಲಾನ್ಯಾಸವಾದಂತಾಯಿತು.

ಈ ಸಂದರ್ಭವನ್ನು ಸೃಷ್ಟಿಸುವ ಮೂಲಕ ಕವಿ ಮಹಾಕಾವ್ಯದ ಮುನ್ನಡೆಗೆ ಅತ್ಯಂತ ಸುಭದ್ರವೂ ಸಕಾರಣವೂ ಸಾಕೇತಿಕವೂ ಆದ ಅಪೂರ್ವ ಬುನಾದಿಯನ್ನು ಹಾಕಿದ್ದಾರೆ ಎಂಬುದು ಸತ್ಯ; ಆದರೆ "ಅರಮನೆಯಲ್ಲಿ ಪ್ರೀತಿಯ ಪೂರವನ್ನೇ ಹರಿಸುವ ಸಾವಿರಾರು ಜನರಿದ್ದರೂ ಮುಂದೆ ಮಹಾವಿಭೂತಿಯಾಗಲಿರುವ ಶ್ರೀರಾಮನ ದೈವಾಂತರಂಗವನ್ನು ಅರಿಯುವ ಶಕ್ತಿ ಮಂಥರೆಗೆ ಮಾತ್ರವಿತ್ತು; ಕನ್ನಡಿಹಿಡಿಯುವ ಮೂಲಕ ಆಕೆ ಶಿಶು ರಾಮನಿಗೆ ತೋರಿಸಿದ್ದು ಕೇವಲ ಚಂದ್ರನನ್ನು ಮಾತ್ರವಲ್ಲ, ಅವನ ಅಂತಃಸ್ವರೂಪವನ್ನು ಸಹ; ಲೌಕಿಕವಾಗಿ ತಾಯಿ ತಂದೆಯರ ಕೈಯಲಾಡುವ ಮಗು ಅಲೌಕಿಕ ಮಹಾಚೇತನವಾಗಿ ಬೆಳೆಯಲು ಮಂಥರೆ ಮಾರ್ಗತೋರುತ್ತಾಳೆ; ಅವಳು ಮೇಲ್ನೋಟಕ್ಕೆದ ರಾಮ ವಿರೋಧಿ, ಒಳನೋಟಕ್ಕೆ ರಾಮೋನ್ನತಕಾರಿಯಾದ ದೂರದೃಷ್ಟಿಯ ದಿವ್ಯಮಂಗಳ ಮಾರ್ಗ"[೬] ಎಂಬ ಡಾ. ಎಚ್.ಜೆ. ಲಕ್ಕಪ್ಪಗೌಡ ಅವರ ಅಭಿಪ್ರಾಯವನ್ನು ಒಪ್ಪಲಾಗದು. ಕನ್ನಡಿಯಲ್ಲಿ ರಾಮನಿಗೆ ತನ್ನ ಅಂತಃಸ್ವರೂಪದ ಅರಿವಾಗಿರಬಹುದು. ಆದರೆ ಮಂಥರೆಯು ಮೊದಲೇ ಶ್ರೀರಾಮನ ದೇವಾತರಂಗವನ್ನು ಅರಿತಿದ್ದಳೆಂಬುದನ್ನು ನಂಬಲಾಗದು. ಮಂಥರೆ ರಾಮ ವಿರೋದಿಯಲ್ಲ; ಅವಳ ಅಂತರಂಗ ಬಹಿರಂಗವೆಲ್ಲವೂ ಭರತ ಕೈಕೆಯರೇ ತುಂಬಿರುವಾಗ ರಾಮನಿಗೆ ಅಲ್ಲಿ ಸ್ಥಳವೆಲ್ಲಿತ್ತು? ಮಂಥರೆ ಏನೇ ಮಾಡಿದರೂ ಅದು ಭರತ ಕೈಕೆಯರ ಅಭ್ಯುದಯಕ್ಕೆ ಮಾತ್ರವಾಗಿತ್ತು. ಏಕಂದರೆ ಇಡೀ ಜಗತ್ತಿನಲ್ಲಿ ಅವಳಿಗೆ ಇದ್ದದ್ದು ಭರತ ಕೈಕೆ ಮಾತ್ರ. ಮುಂದೆ ಮಂಥರೆ ಭರತನಿಗಾಗಿಯೇ ರಾಮನನ್ನು ಹುಡುಕಿಕೊಂಡು ಹೋಗುವುದು; ರಾಮನ ಸ್ಮರಣೆ ಹಾಗು ರಾಮನನ್ನು ಹೃದಯದಲ್ಲಿ ಅಲಂಕರಿಸಿಕೊಂಡು ಮುನ್ನಡೆದುದರ ಫಲವಾಗಿ ಆಕೆಯ ಪಾಪಗಳಿಂದ ಆಕೆಗೆ ಮುಕ್ತಿ ದೊರೆಯುತ್ತದೆ; ಸುಜನಾ ಅವರು ಹೇಳಿರುವಂತೆ ಮಂಥರೆ 'ಮಂಥರಾಲಕ್ಷ್ಮಿ' ಯಾಗಿ ಮಾರ್ಪಟ್ಟಿದ್ದಾಳೆ.

----------

೬. ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೨೯೧.

ವಾಲ್ಮೀಕಿ ರಾಮಾಯಣದಲ್ಲಿ ಮಂಥರೆಯ ಹುಟ್ಟಿನ ಬಗ್ಗೆ ತಿಳಿಸುವುದಿಲ್ಲ ಆದರೆ ಕುವೆಂಪು ಮಂಥರೆಯು ಕಾಡಿನಲ್ಲಿ ಕೇಕೆಯ ರಾಜನಿಗೆ ದೊರೆತು ಕರುಣೆಯ ಶಿಶುವಾಗಿ ಅರಮನೆಯಲ್ಲಿ ಬೆಳೆದ ಬಗೆಯನ್ನು ಚಿತ್ರಿಸುತ್ತಾರೆ. ಕೈಕೆಯ ತಾತ ಬೇಟೆಗಾಗಿ ಕಾಡಿಗೆ ಹೋಗಿ ಹಿಂತಿರುಗುವಾಗ ಶಿಶು ರೋದನವು ಕೇಳಿಸುತ್ತದೆ. ಕರುಣೆ ಮೂಡುತ್ತದೆ. 'ಕಟ್ಟಲಿಹ ಕಟ್ಟಡಕೆ ಮೊದಲ್ ಗುದ್ದಲಿಯ ಪೂಜೆಪೋಲ್'[೭] ಕರುಣೆ ಮೂಡಿತಂದು ಮಹಾಕವಿ ನಿವೇದಿಸುವುದು ಆಕೆ ಪಾತ್ರ ರಾಮಾಯಣದಲ್ಲಿ ಹಿರಿದೆಂದು ಸಾರುವಂತಿದೆ. ಮುಳ್ಳು, ಮಣ್ಣು ತರಗೆಲೆಯ ನೆಲದಮೇಲೆ ದಸ್ಯು ಶಿಶು ಕಾಣಿಸುತ್ತದೆ. ಅದಕ್ಕೆ ಇರುವೆ ಮುತ್ತಿ ವಿಕೃತಿ ವಕ್ರತೆಯೇ ರಾಹುಗೊಂಡವಂತಿದ್ದರೂ, ಕೈಕೆಯ ತಾತ ಕಟ್ಟಿರುವೆಗಳನ್ನೊರೆಸಿ ಸಂತೈಸಿ, ಗೂಬೆಯ ಅಪಶಕುನದ ವಿಕಾರದುಲಿಯನ್ನು ಲೆಕ್ಕಿಸದೇ ದಾರಿಯ ಮಾರಿಯನ್ನು ಮನೆಗೆ ತರುವಂತೆ, ಮುಂದಣ ಮಹಾದುಃಖ ದಾವಾನಳಕ್ಕೆ ತನ್ನದೇ ಮೊದಲ ಕಿಡಿಯನ್ನು ಪೋಷಿಸುತ್ತಾನೆ. ಆ ಕೂಸು ಕುಳ್ಳಗೆ ಗೂನಾಗಿ, ತೊತ್ತಾಗಿ, ಕರ್‍ರಗೆ ಜನರ ಕಣ್ಣಿಗೆ ಹೇಸಿನಾಕೃತಿಯಾಗಿ ಬೆಳೆಯುತ್ತದೆ.

ಪರದೇಶಿ ಕನ್ನೆಯಂ ಚೀಃ ಎಂದು, ತೊಲಗೆಂದು,
ಥೂ ಎಂದು, ಸಾಯೆಂದು, ನಾಯ್ಮರಿಗೆ ಕಡೆಯಾಗಿ
ಭಾವಿಸಿದರಾ ನೃಪನ ಕಟ್ಟಾಣೆಯಂ ಮೀರ್ದು
ಕಡೆಗಣ್ಚಿ, ಮನುಜರೊಲ್ಮೆಯ ಸವಿಯನೊದಿನಿತುಂ
ಕಾಣದೆ, ಮಿಗದ ತೆರದಿ ಮಿದುಳಿಲ್ಲದೆಯೇ ಬೆಳೆದು
ಜಡತೆವೆತ್ತಿರ್ದ ಸೋಂಬೆಗೆ ಮಂದಿ, ಬಯ್ಯುವೋಲ್
ಜರೆದು, ಮಂಥರೆಯೆಂದು ಪೆಸರನೆಸೆದರ್, ಮೊಗಕೆ
ಕೆಸರನಿಡುವಂತೆ, ಕನ್ನಡಿಯಂತುಟಾಕೆಯುಂ
ಪ್ರತಿಬಿಂಬ ರೀತಿಯಿಂ ಕೈಕೊಂಡಾಳಾ ಜನದ
ಮನದ ವಿಕೃತಿಗೆ ತನ್ನ ಮೆಯ್ ವಿಡಂಬನಮಪ್ಪವೋಲ್,
[ಶ್ರೀರಾಮಾಯಣದರ್ಶನಂ, ಪು-೨೪, ೨೫]

ಆ ಪರದೇಶಿ ಕನ್ಯೆ ಜನನಿಂದನೆ ಅವಮಾನಗಳ ಉಗುಳಿನಲ್ಲಿ ಬೆಳೆದು ಮಾನವ ಪ್ರೇಮದ ಸವಿಯನ್ನೇ ಕಾಣದೆ ಬೆಳೆಯುತ್ತಾಳೆ. ಜನರು ಅವಳ ಮುಖಕ್ಕೆ ಕೆಸರನ್ನು ಎಸೆಯುವಂತೆ ಮಂಥರೆ ಎಂಬ ಹೆಸರನ್ನು ಎಸೆಯುತ್ತಾನೆ. ಆ ಮಂದಿಯ ವಿಕಾರವೇ ಮೂರ್ತಿಗೊಂಡಂತೆ ಮಂಥರೆ ಬೆಳೆಯುತ್ತಾಳೆ.

"ನಿಂದನೆಯನ್ನುಂಡು ಬೆಳೆದು ಮಂಥರೆ ಕೌಮಾರ್ಯವನ್ನು ಮುಟ್ಟುವಷ್ಟರಲ್ಲಿ ಕೇಕೆಯ ರಾಜನಿಗೆ ಕೈಕೆ ಮಗಳಾಗಿ ಹುಟ್ಟಿದಳು. ಮಂಥರೆಯ ಒಂಟಿಬಾಳನ್ನು ಕಂಡು ಕನಿಕರಿಸಿದ ದೊರೆ ಅವಳನ್ನೇ ಮಗುವನ್ನು ಆಡಿಸುವ ಕೆಲಸಕ್ಕೆ ನೇಮಿಸಿದನು. ಅವಳ ಮರುಭೂಮಿಯಲ್ಲಿ ಮಳೆ ಹೊಯ್ದಂತಾಯಿತು; ಅವಳ ಬಾಳಿನ ನಿಶೆಗೆ ಶಶಿ ಮೂಡಿದಂತಾಯಿತು; ಒಣಬಾಳಿನಲ್ಲಿ ಒಲ್ಮೆಯ ಹಸುರು ಚಿಮ್ಮಿದಂತಾಯಿತು, ಶಿಶು ಸಾನಿಧ್ಯದ ಪ್ರೇಮಸೌಂದರ್ಯ ಮಹಿಮೆಯಿಂದ ಅವಳ ಬದುಕು

----------

೭. ಕುವೆಂಪು, ಶ್ರೀರಾಮಾಯಣದರ್ಶನಂ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು ೨, ಎರಡನೇ ಆವೃತ್ತಿ೨೦೦೪, ಪು.೨೪.

ಸಾರ್ಥಕವಾಯಿತು; ಮಧುರವಾಯಿತು, ತನ್ನಲ್ಲಿಲ್ಲದ ಚೆಲುವನ್ನು ಚೆಲುವನ್ನು ಆ ಚೆಲುವೆಯಲ್ಲಿ ಕಂಡಳು; ಹಾಲಿನಲ್ಲಿ ಇದ್ದಲಿನ ಚೂರು ತೇಲುವಂತೆ, ಆಮಗುವಿನ ಚಲುವಿನಲ್ಲಿ ಅವಳು ತೇಲಾಡಿದಳು. ಕಾಳಸರ್ಪದ ಹೆಡೆಯ ಮಣಿಯಂತೆ ಕೈಕೆ ಮಂಥರೆಯ ತೊಡೆಯಲ್ಲಿ ಹೊಳೆದಳು ಚಕ್ಕಮಕ್ಕಿ ಕಲ್ಲಿನೊಳಗಣ ಬೆಂಕಿಯಂತೆ ಮಂಥರೆಯ ಬಾಹ್ಯವಿಕಾರದೊಳಗೆ ಮಲಗಿದ್ದ ಪ್ರೇಮ ಪ್ರಭಾವ ಕೈಕೆಯ ಸಹವಾಸ ಮಹಿಮೆಯಿಂದ ಎಚ್ಚರಗೊಂಡಿತು ರಾಜಕುಮಾರಿಯೆ ತನ್ನ ಜೀವನದ ಸರ್ವಸುಕವಾದಳು ತನಗಾದ ಅಪಮಾನ ಅನ್ಯಾಯಗಳನ್ನು ಮರೆತು ಕೈಕೆಯಲ್ಲಿ ಒಂದಾದಳು".[೮]

ಕೈಕೆ ಮದುವೆಯಾದಾಗ ಕೈಕೆಯೇ ಸರ್ವಸ್ವವೆಂದು ತಿಳಿದದ್ದ ಮಂಥರೆ ಅಯೋದ್ಯಗೆ ಬರುತ್ತಾಳೆ ಮತ್ತೆ ಅಯೋದ್ಯೆಯ ಜನರಿಂದ ತಿರಸ್ಕರಿಸಲ್ಪಡುತ್ತಾಳೆ ಮಂಥರೆಗೆ ಸುಖವಿಲ್ಲದಾಯಿತು; ಎಲ್ಲರೂ ಬೈಗುಳದ ಮಳೆಸುರಿಸುತ್ತಿದ್ದರು, ಶನಿಯೆಂದು ಶಪಿಸುತ್ತಿದ್ದರು, ಮೈಲಿಗೆಯಾಗುತ್ತದೆಂದು ದೂರನಿಲ್ಲುತ್ತಿದ್ದರು. ಕಡೆಗೆ ದೇವರ ಆರಾಧನೆ, ಊಟದ ಮನೆಗಳಿಂದಲೂ ದೂರವಿಟ್ಟರು ಮಂಥರೆ ತನ್ನೊಡತಿಯ ಸುಖಕ್ಕೆ ತನ್ನ ಬಾಳನ್ನೇ ಸಮರ್ಪಿಸುತ್ತಾಳೆ. ಭರತ ಹುಟ್ಟದ ಮೇಲೆ ಮಂಥರೆಗೆ ಮೂರನೆ ಕಣ್ಣು ಮೂಡಿದಂತಾಗುತ್ತದೆ. ಹೆತ್ತ ತಾಯಿ ನಾಚುವಂತೆ ಭರತನನ್ನು ಸಾಕುತ್ತಾಳೆ. ಯೌವ್ವನದಲ್ಲಿ ಕೈಕೆಯನ್ನು ಮಗಳಂತೆ; ಮುಪ್ಪಿನಲ್ಲಿ ಭರತನನ್ನು ಮೊಮ್ಮಗನಂತೆ ಸಾಕಿದ ಮಂಥರೆಗೆ ತನ್ನ ಸರ್ವಸ್ವವೂ ಭರತ –ಕೈಕೆ ಎಂದು ತಿಳಿಯುತ್ತಾಳೆ. ಅವರ ಒಳಿತಿಗಾಗಿ ಎಲ್ಲವನ್ನೂ ಅರ್ಪಿಸುತ್ತಾಳೆ. ಕಣ್ಣಿಕಟ್ಟಿಕೊಂಡ ಕುದುರೆಯಂತೆ ಮಂಥರೆ ಈ ಭೂಮಿ ಇರುವುದು ಭರತ ಕೈಕೆಯರಿಗಾಗಿಯೇ ಎಚೆದು ನಂಬಿಕೊಳ್ಳುತ್ತಾಳೆ. 'ಮಂಥರೆ ರಾಮ ದ್ವೇಷಿಯಲ್ಲ, ಭರತನ ಅಭ್ಯುದಯ ಸಾಧಕಿ' ಎಂದೇ ಹೇಳಬಹುದು. "ಅಂದು ಕೇಕೆಯ ರಾಜನ ಅರಮನೆಯಲ್ಲಿನ ಅಸಹನೀಯ ವಾತಾವರಣದಿಂದ ಪಾರಾಗಿ ಬೇರಾಗಿ ಬದುಕಲು ಕೈಕೆಯ ಕಾರಣವಾದರೆ, ಇಂದು ಅಯೋಧ್ಯೆಯ ಅರಮನೆಯ ಉಸಿರು ಕಟ್ಟಿಸುವ ನಿಷ್ಕರುಣ ಪರಿಸರದಿಂದ ಪಾರಾಗಿ ಬದುಕಲು ಭರತನ ಜನನ ನೆರವಾಯಿತು. 'ಜಿಪುಣ ಕಡವರವನ್ನಪ್ಪಿಕೊಳ್ಳುವಂತೆ' ಹಗಳಿರುಳೂ ಭರತನನ್ನು ಕಣ್ಣು ಗೊಂಬೆಯಂತೆ ಲಾಲಿಸಿದಳು ಮಂಥರೆ, ಹಡೆದ ತಾಯಿಯೇ ನಾಚುವಂತೆ".[೯]

ನರರನ್ಯರಿಲ್ಲಾಯಿತ್ತು ಮಂಥರೆಯ
ಲೋಕಕ್ಕೆ, ಕೈಕೆ ಭರತನವಿನಾ ದಶರಥಂ
ಕೈಕೆ ಭರತರಿಗಾಗಿ; ಕೈಕೆ ಭರತರಿಗಾಗಿ
ಕೋಸಲಮಯೋಧ್ಯೆಗಳು, ಶಶಿ ಸೂರ್ಯ ತಾರಾಳಿಗಳ್
ಕೈಕೆ ಭರತರಿಗಾಗಿ; ಭರತನಾಳ್ವಿಕೆಗಾಗಿ ಈ ಪೃಥಿವಿ!

[ಶ್ರೀರಾಮಾಯಣದರ್ಶನಂ, ಪು–೨೯]

ಈ ಭಾವ ಅಳಿಸಲಾಗದ ಸತ್ಯವಾಗಿ ಮಂಥರೆಯ ಮನಸ್ಸಿನಲ್ಲಿ ಬೇರೂರಿ ಬೆಳೆದು ಹೆಮ್ಮರವಾಗುತ್ತದೆ. ಆದ್ದರಿಂದ ಮಹಾಕವಿ ಕುವೆಂಪು 'ಮಮತೆಯ ಸುಳಿ ಮಂಥರೆ' ಎಂದಿರುವುದು ಸತ್ಯಸ್ಯ ಸತ್ಯವಾಗಿ ಸಹೃದಯರಿಗೆ ವೇದ್ಯವಾಗುತ್ತದೆ. "ಕೋಸಲದಲ್ಲಿ ಗೂನಿ ಮಂಥರೆಯಂಥ ತಿರಸ್ಕೃತೆಯಾಗಲೀ ಸಂತೃಪ್ತ ಸುಖಿಯಾಗಲೀ ಮತ್ತೊಬ್ಬರಿರಲಿಲ್ಲ. ಕೈಕೆ ಭರತರ ಅಭ್ಯುದಯದಲ್ಲಿ

----------

೮. ದೇಜಗೌ, ಶ್ರೀರಾಮಾಯಣ ದರ್ಶನಂ ವಚನ ಚಂದ್ರಿಕೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಕೃಷ್ಣಮೂರ್ತಿಪುರಂ, ಮೈಸೂರು ೪, ಏಳನೆಯ ಮುದ್ರಣ ೨೦೦೭, ಪು.೩೮,೩೯.

೯. ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೩೦೧.

ಅವಳು ತನ್ನನ್ನು ತಾನು ಮರೆತಿದ್ದಳು. ಕೈಕೆ ಭರತರನ್ನು ಬಿಟ್ಟು ಈ ಪ್ರಪಂಚದಲ್ಲಿ ಅವಳ ಪಾಲಿಗೆ ಬೇರೆ ನರಪಿಳ್ಳೆ ಇಲ್ಲವಾಯಿತು. ದಶರಥ, ಕೋಸಲ, ಅಯೋಧ್ಯೆ, ಶಶಿ, ಸೂರ್ಯ, ತಾರಾಳಿ ಎಲ್ಲವೂ ಭರತನ ರಾಜ್ಯಭಾರಕ್ಕಾಗಿ ಎಂದು ಅವಳ ಗಾಢವಾದ ನಂಬಿಕೆಯಾಯಿತು. ಸುಂಟರಗಾಳಿಯಲ್ಲಿ ಧೂಳು ತರಗೆಲೆಗಳು ತಿರ್ರನೆ ತಿರುಗುವಂತೆ ಅವಳ ಮಮತೆಯ ಸುಲಿಯಲ್ಲಿ ತ್ರೇತಾಮಹಾಯುಗ ಘೂರ್ಣಿಸದಿರುತ್ತದೆಯೆ?"[೧೦] ವಿರಾಣ್ಮನವೇ ಜಗತ್ತನ್ನು ಆಳುವ ಶಕ್ತಿ, ಸೂಕ್ಷ್ಮಾತಿಸೂಕ್ಷ್ಮವಾದ ತಂತ್ರಗಳಿಂದ ಜೀವಿಗಳನ್ನು ಅದು ಬಿಗಿದಿದ್ದರೂ ಸ್ವಲ್ಪ ಪ್ರಮಾಣದ ಇಚ್ಛಾಸ್ವಾತಂತ್ರ್ಯ ಸಹ ಅವುಗಳಿಗಿರುತ್ತದೆ. ಆ ವಿಧಿಯ ಕೈಯಲ್ಲಿ ಮಂಥರೆ ಸೀತೆ ರಾಮ, ರಾವಣರೆಲ್ಲರೂ ಸೂತ್ರದ ಗೊಂಬೆಗಳಿದ್ದಂತೆ, ರಾವಣನ ವಿಧಿ ಮಂಥರೆಯ ಮನಸ್ಸಿನ ತಂತ್ರವನ್ನು ರೂಪಿಸುತ್ತದೆ. ಎಂದು ಮಹಾಕವಿ ತಮ್ಮ ಕಥೆಗೆ ಪೂರಕವಾಗಿ ಮಂಥರೆಯು ಕಾಣುವ ಕನಸಿಗೂ ಮುಂದಾಗುವ ಘಟನೆಗಳಿಗೂ ಸಂಬಂಧವನ್ನು ಕಲ್ಪಿಸುತ್ತಾರೆ.

ಮುದುಕಿಯಾದ ಕೈಕೆ ಭರತನಂ ಕೈವಿಡಿದು
ಮರುಧರೆಯನಲೆಯುತಿರ್ದಳ್ ವಿಧವೆಯೋಲ್ ಕುಬ್ಜೆ
ಕರೆದೊಡಂ ಕಿವಿಗೊಡದೆ, ಮಗನೊಡನೆ ಕಿರಿರಾಣಿ
ಮುಂದು ಮುಂದೆಯ್ದುತಿರೆ, ಬೈಗುಗತ್ತಯಿಳಿದು
ನುಂಗಿದತಿರ್ವರಂ. ತೊಳತೊಳಲಿ ನೀರಡಿಸಿ
ದೆಸೆದೆಸೆಗೆ ಬಾಯ್ಬಿಟ್ಟು ನಿಡುವರಲಿ ಗೂನಿತಾಂ
ಕಡೆದಳಾ ಮರಳುಗಾವಲಿಯಿಳೆಗೆ, ರಾಮನಂ
ಕರೆಕರೆದು ನಿಡುಸರದೊಳಾಕ್ರಂದಿಸುತೆ ಕೂಗಿ.

[ಶ್ರೀರಾಮಾಯಣದರ್ಶನಂ, ಪು-೬೧]

ಭಯಂಕರವಾದ ಕನಸಿನಿಂದ ನಡುಗಿ ಭಯದಿಂದ ಎದ್ದು ಕುಳಿತ ಮಂಥರೆಯ ಕಿವಿಗೆ ಬಿದ್ದಿದ್ದು ಮಂಗಳವಾದ್ಯಗಳ ಸಂಭ್ರಮ.ಆಶ್ಚರ್ಯದಿಂದ ರಾಜಬೀದಿಯಲ್ಲಿ ನಡೆದ ಮಂಥರೆ ನಗರ ಶೃಂಗಾರ ಕಂಡು ಬೆರಗಾಗಿ ಈ ಓಸಗೆಯ ಸಂಭ್ರಮವೇನೆಂದು ತಿಳಿಯಲು ಕಾತರಿಸುತ್ತಾಳೆ. ರಾಮನ ಪಟ್ಟಾಭಿಷೇಕದ ಸತ್ಯ ತಿಳಿದಾಗ ಆಕೆಯ ಮನಸ್ಸು ತನ್ನ ಕನಸಿಗೂ ಈ ಕಹಿ ಸತ್ಯಕ್ಕೂ ಸಂಬಂಧ ಕಲ್ಪಿಸಿ ತತ್ತರಿಸುತ್ತದೆ.

"ಓ ಕೈಕೆ,
ಮತಿಗೇಡಿ, ನಿರ್ಭಾಗ್ಯೆ, ಇನ್ನುಮೇನೀನಿದ್ದೆ
ನಿನಗೆ? ಮೇಲೇಳ್ ಏಳ್: ಕೆಡೆದುಬಿದ್ದಿದೆ ನಿನ್ನ
ಸಿರಿಗುಡಿಯ ಗೋಪುರಂ! ಹೊಂಗನಸು ಹುಡಿಯಾಯ್ತು!
ಬಯಲ ಸೇರ್ದುದು ಬಹುದಿನದ ಬಯಕೆ! ಕೆಟ್ಟೆನೀಂ!
ಕೆಟ್ಟೆನಾಂ! ಹಾ ಭರತ! ಭರತ! ಹಾ! ಎಲ್ಲಿಹಯ್?
ಎಲ್ಲಿಹೆಯೋ ಇಂದು? ಬಾ ಬೇಗ ಬಾ!"

[ಶ್ರೀರಾಮಾಯಣದರ್ಶನಂ, ಪು-೬೨]

----------

೧೦. ದೇಜಗೌ, ಶ್ರೀರಾಮಾಯಣ ದರ್ಶನಂ ವಚನ ಚಂದ್ರಿಕೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಕೃಷ್ಣಮೂರ್ತಿಪುರಂ, ಮೈಸೂರು ೪, ಏಳನೆಯ ಮುದ್ರಣ ೨೦೦೬, ಪು.೬೦.

ಎಂದು ಚೀರುತ್ತಾ, ಅಳುತ್ತಾ ದುಃಖದಿಂದ ಕುಸಿದ ತಾಯಿ ಮಂಥರೆಯನ್ನು ಶೈತ್ಯೋಪಚಾರಗಳಿಂದ ಚೇತರಿಸಿಕೊಳ್ಳುವಂತೆ ಮಾಡಿದ ಹಾಲು ಮನಸ್ಸಿನ ರಾಣಿ ಕೈಕೆ ಮಂಥರೆಯಿಂದ ರಾಮನ ಪಟ್ಟಾಭಿಷೇಕದ ವಿಷಯ ತಿಳಿದು ಸಂತೋಷದಿಂದ ನಲಿಯುತ್ತಾಳೆ. ಅವಳ ಹಾಲು ಮನಸ್ಸನ್ನು ಮಂಥರೆಯ ದ್ವೇಷದ ಕಿಡಿನುಡಿಗಳು ನುಚ್ಚುನೂರು ಮಾಡುತ್ತವೆ. ಮಮತೆಯ ಸುಳಿಯಾದ ಮಂಥರೆ ತನ್ನ ಕೈಕೆ ಭರತರಿಗೆ ಈ ಪೃಥ್ವಿ ಎಂದು ತಿಳಿದಿದ್ದವಳು ರಾಮನ ಪಟ್ಟಾಭಿಷೇಕವನ್ನು ಸಹಿಸುವಳೇ? ಕೈಕೆಯ ಮನಸ್ಸನ್ನು ಬದಲಿಸುವ ಕೆಲಸದಲ್ಲಿ ಯಶಸ್ವಿಯಾಗುತ್ತಾಳೆ.

" ಎಲೌ ಕೈಕೆ, ನಿನ್ನ ಸೌಂದರ್ಯದಂತೆ ನಿನ್ನ ಸಂಪತ್ತೂ ಬೇಸಗೆಯ ಹೊಳೆಯಾಯಿತು. ಬಂಡನ್ನು ಹೀರಿಕೊಂಡಮೇಲೆ ದುಂಬಿಗೆ ಹೂವಿನ ಗೊಡವೆಯೇಕೆ? ದಶರಥನ ದೃಷ್ಟಿಯಲ್ಲಿ ನೀನೂ ಆ ಹೂವಿನಂತಾದೆ, ಎಲೈ ಮಗಳೆ ಒಂದು ಕೆಟ್ಟ ಸುದ್ದಿಯನ್ನು ಹೇಳುತ್ತೇನೆ. ಕೇಳುವ ಸಾಮರ್ಥ್ಯವಿದ್ದರೆ ಕೇಳು! ಮೋಸಗಾರರ ಸಂಚಿನಿಂದ ಭರತನಿಗೆ ಈ ನೆಲ ಸಿಗುವಂತಿಲ್ಲ. ನಾವಿಬ್ಬರಿದ್ದೂ ಅವನಿಗೆ ಇಂಥ ಸ್ಥಿತಿ ಒದಗಿದೆ. ವಿಪತ್ತು ಸಮೀಪಿಸಿದಾಗಲೂ ಸುಮ್ಮನೆ ಕುಳಿತಿರುವುದು ಬುದ್ಧಿಯುಳ್ಳವರ ಲಕ್ಷಣವಲ್ಲ. ನಿನಗರಿವಾಗದಂತೆಯೇ ನಿನ್ನ ಕೊರಳು ಕುಯ್ಯುವ ಕತ್ತಿಯನ್ನು ಮಸೆದಿದ್ದಾರೆ. ನಿನ್ನ ದುಃಖವೇ ನನ್ನ ದುಃಖ, ನಿನ್ನ ಸುಖವೇ ನನ್ನ ಸುಖ. ನನ್ನ ಬಾಳಿಗೆ ಬೇರೆ ಗುರಿಯಿದೆಯೇ ಅಕ್ಕಾ? ದಶರಥನ ಪ್ರೇಮದಂಥ ಭಾಗ್ಯ ಬೇರಿಲ್ಲವೆಂದು ತಿಳಿದ ನೀನು ಅಲ್ಪಮತಿ. ಕ್ರೌರ್ಯದಲ್ಲಿ ಕ್ಷತ್ರಿಯ ಕುಲ ರಾಕ್ಷಸ ಕುಲವನ್ನು ಮೀರಿದುದು. ದಶರಥ ಕ್ಷತ್ರೀಯ ಕುಲಶ್ರೇಷ್ಠ ಅವನ ಸಕ್ಕರೆಯ ನುಡಿಗೆ ನೀನು ಮರುಳಾದೆ, ಅವನ ಪ್ರೇಮವೆಲ್ಲಾ ಕೌಸಲ್ಯೆಯಲ್ಲಿ. ಹುಸಿ ಪ್ರೇಮ ನಿನ್ನಲ್ಲಿ, ಉಪಾಯದಿಂದ ಭರತನನ್ನು ನಿನ್ನ ತವರೂರಿಗೆ ಕಳುಹಿಸಿಬಿಟ್ಟು ನಾಳೆಗೆ ರಾಮನಿಗೆ ಪಟ್ಟವನ್ನು ಕಟ್ಟುತ್ತಾನಂತೆ. ಆ ರಾಮನನ್ನು ನೀನು ಪ್ರೀತಿಯಿಂದ ಸಾಕಿದೆ. ಹಾವಿಗೆ ಹಾಲೆರೆದಂತಾಯಿತು. ಮೊಟ್ಟೆಯಲ್ಲಿದ್ದಾಗಲೇ ಹಾವನ್ನು ಕೊಲ್ಲದಿದ್ದರೆ ಅದು ನಮ್ಮನ್ನೇ ಕೊಲ್ಲುತ್ತದೆ. ನೀನಿನ್ನೂ ಅನುಭವವಿಲ್ಲದವಳು ನಿನಗೇನುಗೊತ್ತಾಗುತ್ತದೆ".[೧೧]

ಈ ಮಾತುಗಳು ಮಂಥರೆಯ ವಾಕ್ ಪ್ರೌಢಿಮೆಗೆ ಸಾಕ್ಷಿಯಾಗಿವೆ. ಮಂಥರೆಯು ಕೈಕೆಯ ಮನಸ್ಸನ್ನು ಪರಿವರ್ತಿಸಲು ಬೇಕಾಗುವ ಎಲ್ಲ ಉಪಾಯವನ್ನು ಹುಡುಕುತ್ತಿದ್ದಾಳೆ. ಮಾತಿನ ಮೋಡಿಯಲ್ಲಿ ಕೈಕೆಯ ಮನಸ್ಸನ್ನು ಸೆರೆಹಿಡಿಯುತ್ತಾಳೆ. ಸವತಿ ಮಾತ್ಸರ್ಯವನ್ನು ಹುಟ್ಟಿಹಾಕುತ್ತಾಳೆ. ಕೌಸಲ್ಯೆಗಿಂತ ನೀನು ಕೀಳೆ? ರಾಮನಿಗಿಂತ ಭರತ ಕೀಳೆ? ಎಂದು ಕೈಕೆಯ ಮನಸ್ಸಿಗೆ ಗೊಂದಲವನ್ನು ಸೃಷ್ಟಿಸಿ ವಿಷಬೀಜಗಳನ್ನು ಬಿತ್ತುತ್ತಾಳೆ. ಜನ್ಮಕ್ರಮದಿಂದ ನೋಡಿದಾಗ ನಾಲ್ಕು ಜನರಲ್ಲಿ ಭರತ ಹಿರಿಯವನು, ದೊರೆ, ಮಂತ್ರಿ, ಕುಲಪುರೋಹಿತರು ಪಕ್ಷಪಾತದಿಂದ ಕೌಸಲ್ಯೆಯ ಮಗನನ್ನು ಹಿರಿಯವನನ್ನಾಗಿಸಿದರೆಂದು ಸುಳ್ಳಿನ ಕಥೆ ಕಟ್ಟುತ್ತಾಳೆ. ಕೌಸಲ್ಯೆ ನಿನಗೆ ಕೊಟ್ಟ ಕಾಟವನ್ನು ನೆನಪಿಸಿಕೊ, ಅವರ ಮೋಸಕ್ಕೆ ಬಲಿಯಾಗದೆ ಎಚ್ಚರವಾಗು ಎಂದು ಉರಿಯುವ ಬೆಂಕಿಗೆ ತುಪ್ಪಸುರಿವಂತೆ ತನ್ನ ಘೋರ ಕನಸನ್ನು ಜೋಡಿಸುತ್ತಾಳೆ.

ಕೈಕೆಯ ಮನಸ್ಸು ಮಂಥರೆಯ ವಿಷಬೀಜವನ್ನು ಹೊತ್ತು ಮೊಳಕೆಯೊಡೆದು ಬೆಳೆಯುತ್ತದೆ. ಅದರ ದುರಂತ ಫಲ ಅಯೋಧ್ಯೆಯ ಜನರ ಗೋಳು. ನೀರಿನಲ್ಲಿ ಮುಳುಗುವಾತ

----------

೧೧. ದೇಜಗೌ, ಶ್ರೀರಾಮಾಯಣ ದರ್ಶನಂ ವಚನ ಚಂದ್ರಿಕೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಕೃಷ್ಣಮೂರ್ತಿಪುರಂ, ಮೈಸೂರು ೪, ಏಳನೆಯ ಮುದ್ರಣ ೨೦೦೭, ಪು.೬೦.

ಪ್ರಾಣ ರಕ್ಷಣೆಗೆ ಮೊಸಳೆಯನ್ನು ತಬ್ಬುವಂತೆ ಕೈಕೆ ಮಂಥರೆಯನ್ನು ತಬ್ಬುತ್ತಾಳೆ. ಮಂಥರೆಯೇ ಕೈಕೆಗೆ ದಶರಥ ನೀಡಿದ್ದ ವರಗಳನ್ನು ಸ್ಮರಿಸಿಕೊಳ್ಳುವಂತೆ ಮಾಡುತ್ತಾಳೆ. ಕೈಕೆಯು ಸಂಪೂರ್ಣ ಮಂಥರೆಗೆ ಶರಣಾದಾಗ ಅವಳನ್ನು ಹೊಗಳಲು ಪ್ರಾರಂಭಿಸುತ್ತಾಳೆ:

"ಕಂಗೆಟ್ಟೆನಗೆ ದಾರಿ ತೋರ್ದೆಯೌ
ಓ ನನ್ನ ಭಾಗ್ಯ ದೇವತೆ! ಮರಳಿ ಹಡೆದೆಯೌ
ನೀನೆನ್ನ ತಾಯಿ! ನೀಂ ತೊರೆಯಲಿನ್ನಾರೆಗತಿ
ಪರದೇಸಿ ಎನಗೆ? ಕಣ್ಣಿರ್ದುಮಾನಿನ್ನೆಗಂ
ಕುರುಡಿಯಾಗಿರ್ದೆನೌ, ನೋಡಿತ್ತ ನೋಡೆನ್ನನಃ!
ಇಂದೆನಿತು ಚಾರುರೂಪಿಣಿಯೂ ತೋರುತಿಹೆ
ನೀನೆನಗೆ! ಲೋಕದೊಳ್ ಹೊರಮೆಯ್ಯನೀಕ್ಷಿಸುತೆ
ಸೊಬಗನಾರ್ೖವವರ್ ಬರಿಯ ಬೆಪ್ಪುಗಳಲ್ತೆ
ನಿಜಮಪ್ಪ ಸೌಂದರ್ಯಮಾತ್ಮಕ್ಕೆ ಸೇರ್ದುದೆನೆ
ನಿನಗಿನೇಂ ಸುಂದರಿಯರೊಳರೆ? ಗೂನಿರ್ದರೇಂ?
ಚಂದನದ ಕೊರಡು ಮುರುಟಿದ್ದರೇನೂನಾಯ್ತು
ಗಂಧಕ್ಕೆ?"

[ಶ್ರೀರಾಮಾಯಣದರ್ಶನಂ, ಪು-೬೬]

ಮಂಥರೆಯ ಕುರೂಪ ಅಳಿದು ಕೈಕೆಯ ಕಣ್ಣಿಗೆ ಸೌಂದರ್ಯ ಗೋಚರಿಘುತ್ತದೆ. ಸೌಂದರ್ಯ ಎಂಬುದು ಆತ್ಮಕ್ಕೆ ಸಂಬಧಿಸಿದ್ದೆಂದು ಅರಿಯದ ಕೈಕೆ ಮಂಥರೆಯನ್ನು ಗಂಧಕ್ಕೆ ಹೋಲಿಸುತ್ತಾಳೆ. ಮಂಥರೆಯ ಗಾಳಕ್ಕೆ ಸಿಕ್ಕಿದ ಮೀನಿನಂತೆ ಕೈಕೆ ಸ್ವಬುದ್ದಿಯನ್ನೇ ಕಳೆದುಕೊಂಡು ಮಂಥರೆಯಮಾತಿಗೆ ಮರುಳಾಗುತ್ತಾಳೆ. ಮಮತೆಯ ಪ್ರೀತಿ ವಾತ್ಸಲ್ಯಗಳ ರಕ್ಷಣಾ ವೃತ್ತದಲ್ಲಿ ಮಂಥರೆಯು ಭರತ ಕೈಕೆಯನ್ನು ಬಂಧಿಸಿಕೊಳ್ಳಲು ಮುಂದಾಗಿ ಇಡೀ ಅಯೋಧ್ಯೆಗೇ ಕ್ಕಿಚ್ಚನ್ನು ಹತ್ತಿಸಿಬಿಡುತ್ತಾಳೆ. ಮುಂದಾಗುವ ಪರಿಣಾಮಗಳ ಬಗ್ಗೆ ಕಲ್ಪನೆಕೂಡ ಮಂಥರೆಗಿರುವುದಿಲ್ಲ. ಮಂಥರೆಗೆ ಬೇಕಾಗಿರುವುದು ಭರತನ ಪಟ್ಟಾಭಿಷೇಕ! ರಾಮನು ಅಯೋಧ್ಯೆಯಲ್ಲಿದ್ದರೆ ಅದು ಸಾಧ್ಯವಿಲ್ಲವೆಂದು ರಾಮನಿಗೆ ವನವಾಸ! ಮಂಥರೆಗೆ ಮತ್ತಾವುದೇ ದ್ವೇಷವಿಲ್ಲ! ಮುಂದಿನ ಆಗುಹೋಗುಗಳ ಚಿಂತೆಯಿಲ್ಲ; ಭರತ- ಕೈಕೆಗಾಗಿ ಸರ್ವಸ್ವವನ್ನೂ ಕಾಯ್ದಿಡುವ ಮಾತೃಹೃದಯಿ ಮಂಥರೆ.

ಕಾರ್ಯಸಾಧಿಸುವ ಉಪಾಯಗಳನ್ನು ಕೈಕೆಗೆ ಮಂಥರೆಯೇ ಉಪದೇಶಿಸುತ್ತಾಳೆ. ಮಂಥರೆ ಮಹಾಬುದ್ದಿವಂತೆ ತನ್ನ ಮೇಲೆ ಕೈಕೆ ಪೂರ್ಣ ನಂಬಿಕೆ ಇಟ್ಟಿದ್ದಾಳೆಂದು ಅರಿತು ನಿಶ್ಚಯಿಸುವ ಮುಂಚೆ ಮತ್ತೊಮ್ಮೆ ಯೋಚಿಸು ದುಡುಕಬೇಡ, ತಲೆಗೆಟ್ಟ ಗೂನಿಯೆನ್ನಯ ನುಡಿಗೆ ದುಡುಕಿ ನಂತರ ನನ್ನನ್ನು ದೂರಬೇಡ ಎಂದು; ನನಗೆ ಭರತನ ಮೇಲೆ ಮಮತೆಯೇ ಹೊರತು, ರಾಮನ ಮೇಲೆ ದ್ವೇಷವಿಲ್ಲ; ರಾಮ ಬಾಳಲಿ! ಎಂದು ಬೆಣ್ಣೆಯಲ್ಲಿ ಕೂದಲು ತೆಗೆದಂತೆ ಮಾತನಾಡಿ ರಾಣಿಯನ್ನು ಸಿದ್ಧಗೊಳಿಸುತ್ತಾಳೆ. ಕೈಕೆಯು ವರಗಳನ್ನು ಬೇಡಿಕೊಳ್ಳಲು; ವಚನ ನೀಡಿದ ದಶರಥನ ಕಿವಿಗೆ ಆಕೆಯ ಮಾತುಗಳು ಕಾದ ಕಬ್ಬಿಣದ ಸರಳುಗಳಾಗುತ್ತವೆ. ದಶರಥನು ಮೂರ್ಛೆಗೆ ಸಂದಾಗ ಕುಬ್ಜೆಯೇ ಓಡಿಹೋಗಿ ರಾಮನಿಗೆ ವಿಷಯ ಮುಟ್ಟಿಸಿ ಕರೆತರುತ್ತಾಳೆ. ಇದು ಅವಳ ಕಾರ್ಯ ತತ್ಪರತೆಗೆ ಸಾಕ್ಷಿಯಾಗಿದೆ.

"ಪೆತ್ತಾತನೆಂತಾದೊಡಂ ಕೊಡುವನೇ ಕುಮಾರಂಗೆ
ಪಟ್ಟಮಂ ಬಿಟ್ಟಡವಿಗೆಯ್ದುವ ನಿರೂಪಮಂ?
ದೇವನಿಂಗಿತವರಿತು ನಡೆವುದೆ ಪಥಂ ನಿನಗೆ"

[ಶ್ರೀರಾಮಾಯಣದರ್ಶನಂ, ಪು-೭೮]

ದಶರಥನು ಬಾಯ್ಬಿಟ್ಟು ಮಗನಿಗೆ ವಚನ ಕೊಟ್ಟುದನ್ನು ಆಜ್ಞೆಮಾಡಲಾರನೆಂದು ಮಂಥರೆಯೇ ರಾಮನಿಗೆ ತಂದೆಯ ಮಾತನ್ನು; ಇಷ್ಟವನ್ನು; ಅರಿತು ನಡೆಯುವುದೇ ಮಗನಿಗಿರುವ ದಾರಿ ಎಂದು ರಾಮನನ್ನೇ ಪಿತೃವಾಕ್ಯಪರಿಪಾಲನಕ್ಕೆ ಮುಂದಾಗುವಂತೆ ಪ್ರಚೋದಿಸುತ್ತಾಳೆ. ಮತ್ತು ಸಂಭ್ರಮದಿಂದಲೇ ಮಂಥರೆ ರಾಮನು ಬೇಡಿದ ನಾರುಡೆಗಳನ್ನು ತಂದು ಕೊಡುತ್ತಾಳೆ. ರಾಮನು ಸೀತೆ ಲಕ್ಷ್ಮಣರೊಡನೆ ಕಾಡಿಗೆ ತೆರಳಿದಾಗ ಮಂಥರೆಗೆ ಕಾರ್ಯ ಕೈಗೂಡಿದ ಸಂತಸ. ದಶರಥನ ಸಾವಿನ ಸಿಡಿಲು ಅರಮನೆಯಾದಿಯಾಗಿ ಅಯೋಧ್ಯೆಗೇ ಬಡಿದರೂ ಮಂಥರೆ ಮಾತ್ರ ಸಂತೃಪ್ತಳು. ಭರತನ ಆಗಮನ ನಿರೀಕ್ಷೆಯಲ್ಲಿದ್ದ ಕೈಕೆ ಮತ್ತು ಮಂಥರೆಗೆ ತೀವ್ರ ನಿರಾಸೆ ಕಾದಿರುತ್ತದೆ. ಎಲ್ಲವನ್ನೂ ಅರಿತ ಭರತನು ಇಬ್ಬರನ್ನೂ ತಿರಸ್ಕರಿಸಿ ರಾಮನ ದಾರಿಯಲ್ಲಿ ನಡೆಯಲು ಮುಂದಾಗುತ್ತಾನೆ. ಶತ್ರುಘ್ನನ ಬಡಿತದಿಂದ ಗೋಳಾಡುವ ಮಂಥರೆಗೆ ಭರತನಿಂದ ರಕ್ಷಣೆ ಒದಗಿದರೂ ಮೊದಲಿನ ಪ್ರೀತಿ ದೊರೆಯದೇ ತಿರಸ್ಕಾರದ ಮಾತುಗಳೇ ಉಣಿಸಾಗುತ್ತವೆ.

ತೊಲಗೆಲೆ ಕುರೂಪಿ, ಓ ತೊಲಗು ಕಣ್ಬೊಲದಿದೆ
ತೊಲಗಾಚೆ ಪಾಪಿ! ಬಳಿಸಾರದಿರ್; ನಿಲ್ಲದಿರ್!

[ಶ್ರೀರಾಮಾಯಣದರ್ಶನಂ, ಪು-೧೧೭]

ಎಂದು ಮಂಥರೆಯನ್ನು ತಿರಸ್ಕರಿಸುವ ಭರತನು, ವಿಕೃತಿ ಎಂಬುದು ಮನಸ್ಸಿಗೇ ಹೊರತು ಬಾಹ್ಯಪ್ರಕೃತಿಗಲ್ಲವೆಂದು ಮಂಥರೆಗೆ ಹೇಳುವಂತ ಕೊನೆಯ ಮಾತುಗಳು ಮಂಥರೆಯನ್ನು ಪಾತಾಳಕ್ಕಿಳಿಸುತ್ತವೆ:

ಪೆತ್ತವಳನಳುಪುವೊಲ್
ಕಾಣಿಸುತ್ತಳಿಗೆಯ್ತ್ತಕದ್ದಿದ ತನ್ನ ಕಣ್ಗಳನೆ
ಕಿಳ್ತೆಸೆವನಂತೆ ನಾಂ, ಮಂಥರೆ, ಬಿಸುಟ್ಟೆನಿದೊ
ನಿನ್ನನೆಂದೆಂದಿಗುಂ.

[ಶ್ರೀರಾಮಾಯಣದರ್ಶನಂ, ಪು-೧೧೭]

ಯಾವ ಭರತನನ್ನು ತನ್ನ ಕಣ್ಣುಗಳಂತೆ ಸಾಕಿದ್ದಳೋ ಆತನಿಂದಲೇ ತಿರಸ್ಕೃತಳಾದಾಗ ಮಂಥರೆಗೆ ಸಿಡಿಲು ಬಡಿದಂತಾಗುತ್ತದೆ. ಭರತನ ಬಗ್ಗೆ ಕಟ್ಟಿದ್ದ ಆಶಾಗೋಪುರವು ಕಳಚಿ ಧರೆಗುರುಳತ್ತದೆ. ಮಂಥರೆಯ ಮನ ಸೂತ್ರ ಹರಿದ ಗಾಲಿಪಟದಂತಾಗುತ್ತದೆ. "ಮಂಥರೆ ಇದುವರೆಗೆ ಕಟ್ಟಿಕೊಂಡಿದ್ದ ಸೀಮಿತಲೋಕ ಮೋಹದ ಕೋಟೆಯೊಡೆದು ನಾಕ ಮೋಹ ಅವಳ ಮನಸ್ಸನ್ನಾವರಿಸುತ್ತದೆ. ಅದೇ ರಾಮ ಮೋಹ! ತಾನುಮಾಡಿದ ಕಾರ್ಯದಿಂದ ಭರತನಿಗೆ ಹಿತವಾಗದಿದ್ದರೆ, ಅವನಿಗೆ ಹಿತವಾಗುವಂತ ಕಾರ್ಯವನ್ನು ಮಾಡುವ ಮೂಲಕ ಅವನ ಮನಸ್ಸಗೆ ಶಾಂತಿ ಸಂತೋಷಗಳನ್ನು ತುಂಬಬೇಕು ಯಾವುದು ಆ ಕಾರ್ಯ? ರಾಮನ ಪುನರಾಗಮನ! ಭರತ ತನ್ನನ್ನು ತಿರಸ್ಕರಿಸಿದರೂ ಆಕೆಗೆ ಅವನ ಮೇಲೆ ಕೋಪವಿಲ್ಲ, ಬದಲಾಗಿ ಮತ್ತಷ್ಟು ತೀವ್ರತರವಾದ ಮಮತೆ. ಆ ಮಮತೆಯೇ ಅವನ ಸುಖ ಬಾಳಿಗೆ ಮೂಲನಾದ ರಾಮನನ್ನು ಕರೆತರಲು ಪ್ರೇರೇಪಿಸುತ್ತದೆ ಅವಳನ್ನು. ಆದ್ದರಿಂದ ಇದುವರೆಗೆ ಭರತನಿಗೆ ಭೌತಿಕ ಸಾಮ್ರಾಜ್ಯ ಸುಖವನ್ನೊದಗಿಸುವ ಕಿರುಬಯಕೆಯಿಂದ ಭ್ರಮಿಸುತ್ತಿದ್ದ ಆಕೆಯ ಆತ್ಮ ಈಗ ಅಯೋಧ್ಯೆಯ ಕಿರು

ವಲಯವನ್ನು ದಾಟಿ ರಾಮಪಥಗಾಮಿಯಾಗುತ್ತದೆ".[೧೨] ರಾಮನನ್ನು ಕರೆತಂದರೆ ಕಂದ ಭರತನಿಗೆ ಸಂತೋಷವಾಗುತ್ತದೆ, ಕೈಕೆಗೆ ಉತ್ಸವವಾಗುತ್ತದೆ. ನನಗೆ ಮೊದಲಿನಂತೆ ಅವರೆಲ್ಲರ ಪ್ರೇಮ ಲಭಿಸುತ್ತದೆಂದು ರಾಮನನ್ನು ನೆನೆಯುತ್ತಾ ಪುಣ್ಯವನ್ನು ಹುಡುಕಿಕೊಂಡು ಹೋಗುವ ಪಾಪದಂತೆ ಕಾಡಿನ ಹಾದಿಯಲ್ಲಿ ನಡೆಯುತ್ತಾಳೆ. ದಶರಥನ ದಹನಚಿಂತೆಯಲ್ಲಿ ಯಾರೂ ಅವಳನ್ನು ಗಮನಿಸುವುದಿಲ್ಲ. ಆದರೆ ಕೆಲವು ಪಟ್ಟಣಿಗರು ಅವಳ ಮೇಲೆ ಕಲ್ಲು ಎಸೆದು; ಮುಖಕ್ಕೆ ಉಗುಳಿ ಅವಮಾನಿಸುತ್ತಾರೆ. ಯಾವುದನ್ನೂ ಲೆಕ್ಕಿಸದೇ ಮುಂದುವರಿದ ಮಂಥರೆ ಶ್ರೀರಾಮನನ್ನೇ ಅರಸುತ್ತಾ ಕಾಡುಮೇಡನ್ನು ಅಲೆಯುತ್ತಾಳೆ:

"ಬೆಳಗಿನಿದುಣಿಸಿಲ್ಲ;
ನೀರ್ಪನಿಯನೀಟಿಲ್ಲ; ಪೆಟ್ಟನಲ್ಲದೆ ಬೇರೆ
ತಿಂದಿಲ್ಲ; ಕಣ್ಣೀನೊಂಲ್ಲದಿನ್ನೇನುಮಂ
ಕುಡಿದಿಲ್ಲ. ಬೆನ್ನಿಗಂಟಿದ ಹೊಟ್ಟೆ ಹಸಿವಿಂದೆ
ಗಂಟಲೊಣಗಿ ನೀರಡಿಕೆಯಿಂದೆ, ರಕ್ತಮುಂ
ಬಸಿವ ಗಾಯದ ಪಸಿಯ ನೋವಿಂದೆ,"

[ಶ್ರೀರಾಮಾಯಣದರ್ಶನಂ, ಪು-೧೨೪]

ಹೃದಯ ಪೀಠದಲ್ಲಿ ಶ್ರೀರಾನನ್ನು ಅಲಂಕರಿಸಿಕೊಂಡು ನಡೆಸಿ ಮಂಥರೆ ಲೋಕದ ಪರಿವೇ ಇಲ್ಲದೇ ತನ್ನ ವ್ರತ ಊರುಗೋಲನ್ನು ನಂಬಿಕೊಂಡು ರಾಮ ರಾಮ ಎಂದು ಜಪಿಸುತ್ತಾ ಓ ನನ್ನ ಭರತನಣ್ಣಯ್ಯ, ಓ ರಾಮಯ್ಯ! ಎಲ್ಲಿರುವೆ? ಹೇಳಯ್ಯ ಎಂದು ಕೂಗುತ್ತಾ ಕಾಡಿನಲ್ಲಿ ಮುಂದುವರೆಯುವ ಆಕೆಯ ಬಾಹ್ಯಪ್ರಜ್ಞೆ ಶೂನ್ಯವಾಗಿದ್ದರೂ ಅಂತರಾತ್ಮ ಮಾತ್ರ ಪ್ರಬುದ್ಧವಾಗಗಿದ್ದು, ದೂರದಲ್ಲಿ ಕಂಡ ಜ್ಯೋತಿಯೊಂದನ್ನೇ ರಾಮನೆಂದು ಬಗೆದು ಮುಂದುವರೆದು ಅಪ್ಪಿಕೊಳ್ಳಲು ನುಗ್ಗುತ್ತಾಳೆ. ಕಾಲದ ಅಗ್ನಿಯಂತೆ ದಿಕ್ಕು ದಿಕ್ಕು ವ್ಯಾಪಿಸಿದ ಕಾಳ್ಗಿಚ್ಚು ಮಂಥರೆಯನ್ನು ಕಬಳಿಸುತ್ತದೆ. ಅಗ್ನಿ ಸಂಸರ್ಗದಿಂದ ಮಂಥರೆಯ ವಕ್ರತೆ ಅಳಿದು ಆಕೆಯ ಮಾತೃಪ್ರೇಮ ರಾಮಭಕ್ತಿ ಲೋಕಕ್ಕೆ ವ್ಯಾಪಿಸುತ್ತದೆ. ಆತ್ಮಲಕ್ಷ್ಮಿ ಮಾತ್ರ ರಾಮ ಭರತರ ರಕ್ಷೆಯಾಗಿ ನಿಲ್ಲುತ್ತದೆ. ಮಂಥರೆಯು ದಾವಾಜ್ಞಿಯಲ್ಲಿ ಲೀನಳಾದ ನಂತರ ಆಕೆಯ ಆತ್ಮದ ಪುಣ್ಯಲಕ್ಷ್ಮಿ ಭರತನ, ರಾಮನ ರಕ್ಷಣೆಗಾಗಿ ಶ್ರೀರಕ್ಷೆಯಾಗಿ ನಿಂತಿರುವುದು ಶ್ರೀಸಂಪುಟದ 'ತಪಸ್ಸಿದ್ಧಿ'ಯಲ್ಲಿ ಗೋಚರವಾಗುತ್ತದೆ. ಮಹಾಕವಿಯು ಅಲ್ಲಲ್ಲಿ ಭರತನ, ರಾಮನ ಇರುವನ್ನು ಹುಡುಕುತ್ತಾ ಹೊರಟ ಭರತನಿಗೆ ದಾರಿ ತೋರುವುದು ಮಂಥರೆಯ ಪುಣ್ಯ ಆತ್ಮವೆಂಬಂತೆ ಮಹಾಕವಿ ಚಿತ್ರಿಸುತ್ತಾನೆ.

ರಾಮನನರುಸುತ್ತೈ ತಂದು
ತನ್ನೊಡಲನುರಿಗೆ ಬೇಳ್ದಾದೇವಿ ಮಂಥರೆಯ
ಪುಣ್ಯಾಂತರಾತ್ಮಪ್ರಣಯಲಕ್ಷ್ಮಿ ಭರತಂಗದೇ
ಕೌಸಲೆಯ ಕುವರನೆಡೆಯಂ ಪೊಗೆವೆರಳ್ ನೀಡಿ
ಸುಟ್ಟಿದೋರ್ದಪಳೊ? ಎನೆ ಕಂಡುದಾ ಕರ್ವಟ್ಟೆ
ಹೊಗೆಯ ಹಳವಿಗೆಯನಾ.

[ಶ್ರೀರಾಮಾಯಣದರ್ಶನಂ, ಪು-೧೬೩]

-----------

೧೨. ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೩೦೫.

ಕುವೆಂಪು ಅವರು ಮಂಥರೆಯ ಪುಣ್ಯ ಆತ್ಮ ರಾಮ-ಭರತರ ಸಮಾಗಮಕ್ಕೆ ಕಾತರಿಸುವ ಪರಿಯನ್ನು ಬಿಂಬಿಸಲು ಒಳ್ಳೆಯ ಉಪಮೆಯನ್ನು ಬಳಸಿದ್ದಾರೆ. ರಾಮಾನ್ವೇಷಣೆಗಾಗಿ ಹೊರಟ ಕಾಳ್ಗಿಚ್ಚಿಗೆ ಆಹುತಿಯಾದ ಮಂಥರೆಯ ಅಂತರಾತ್ಮದ ಪುಣ್ಯಲಕ್ಷ್ಮಿಯೇ ಭರತನಿಗೆ ರಾಮನಿರುವ ತಾಣವನ್ನು ತೋರಿಸಲು ಹೊಗೆಯ ರೂಪತಾಳಿ ಪರ್ಣಕುಟಿಯಿಂದ ಮೇಲೇಳುತ್ತಿತ್ತೆಂದು ಹೇಳುತ್ತಾರೆ.

ನಂದಿಗ್ರಾಮದಲ್ಲಿ ತಪೋನಿರತನಾಗಿಯೇ ಅಣ್ಣನ ಆಗಮನವನ್ನು ಕಾಯುತ್ತಿದ್ದ ಭರತನು ಹದಿನಾಲ್ಕು ವರ್ಷ ಕಳೆದ ಮಾರನೆಯ ದಿನ ಬರದಿದ್ದರೆ ಅಗ್ನಿಗೆ ಆಹುತಿಯಾಗಲು ಪ್ರತಿಜ್ಞೆ ಕೈಗೊಂಡಿರುತ್ತಾನೆ. ರಾಮ ಹಿಂತಿರುಗದೇ, ರಾಮನ ಬಗ್ಗೆ ಯಾವ ಸುದ್ದಿ ಯೂ ತಿಳಿಯದ ಭರತನು ನಿರಾಶನಾಗಿ ಅಗ್ನಿಪ್ರವೇಶ ಮಾಡಲು ನಿಶ್ಚಯಿಸಿದಾಗ ಯಜ್ಞಕುಂಡದಿಂದ ಒಂದು ಜ್ವಾಲಾಮೂರ್ತಿ, ಸೂಕ್ಷ್ಮ ತೇಜಸ್ಸಿನ ಸುರಾಂಗನಾ ಮೂರ್ತಿ ಮೈದೋರಿ ಭರತನ್ನು ತಡೆಯುತ್ತದೆ.

"ಕಂದಾ ನಿನ್ನಗ್ರಜಂ
ಇಂದೊ ನಾಳೆಯೊ ದಿಟಂ ಪಿಂತಿರುಗಿ ಬಂದಪನ್
ಮಾಣ್ ಮನದ ತರಿಸಲ್ಕೆಯಂ"
[ಶ್ರೀರಾಮಾಯಣದರ್ಶನಂ, ಪು-೮೫೦]

ಭರತನ್ನು ತಡೆದು ಆಮೂರ್ತಿಯನ್ನು ಕಂಡು ಬೆರಗಾದ ಭರತ ದೇವಿ ನೀನಾರು ಎಂದು ಪ್ರಶ್ನಿಸಿದಾಗ ಭರತನ ಸುಕ್ಷೇಮ ಚಿಂತೆಳಿರ್ಪ ಮಂಥರೆ ಎಂದು ತಿಳಿಯುತ್ತದೆ. ಭರತನು ಆ ಹೆಸರು ಕೇಳಿ ಕೋಪಗೊಳ್ಳುತ್ತಾನೆ ಆಗ ಆ ಶಾಂತಮೂರ್ತಿಯು ಮಂಥರೆಯ ಪ್ರೇಮದ ಅಂತಃಕರಣವನ್ನು ಹಾಗೂ ಅದು ದಾವಾಗ್ನಿಯಲ್ಲಿ ಬೆಂದು ವಿಕೃತಿಯ ಪಾಪ ಅಳಿದುದನ್ನು ವಿವರಿಸಿ 'ನಾನು ನಿನ್ನ ಮಂಥರೆಯಾತ್ಮದ ಪುಣ್ಯಲಕ್ಷ್ಮಿ!'[೧೩] ಎಂದು ಹೇಳುತ್ತದೆ. ರಾಮನಾಗಮದ ವಾರ್ತೆಯನ್ನು ತಿಳಿದ ಭರತನು ಸಂತಸಗೊಂಡು ಕೈಜೋಡಿಸುತ್ತಾನೆ.

ಮಂಥರೆಯ ಆತ್ಮದ ಪುಣ್ಯ ಲಕ್ಷ್ಮಿಯು ರಾಮ-ಭರತರ ಪುನರ್ ಸಮಾಗಮಕ್ಕೆ ಕಾರಣವಾಗುತ್ತದೆಂದು ಮಹಾಕವಿಯು ಧ್ವನಿಪೂರ್ಣವಾಗಿ ಚಿತ್ರಿಸಿ ಮಂಥರೆಯ ಪಾತ್ರವನ್ನು ಊರ್ಧ್ವಗಾಮಿಯಾಗಿ ಮಾಡಿ ಎಷ್ಟೋ ವರ್ಷಗಳಿಂದ ಮೆತ್ತಿಕೊಂಡಿದ್ದ ಕಳಂಕವನ್ನು ತೊಳೆದು ಸುಂದರ ಶಿಲ್ಪವಾಗಿ ಕಡೆದು ನಿಲ್ಲಿಸಿದ್ದಾರೆ. "ಶ್ರೀ ರಾಮಚಂದ್ರನಿಗೆ ಕನ್ನಡಿ ಕೊಡುವ ಮೂಲಕ ಅವನ ವಿಶ್ವವ್ಯಕ್ತಿತ್ವವನ್ನು ಅವನಿಗೆ ನೆನಪಿಸಿದ ಮಂಥರೆ; ಅವನನ್ನು ಕಾಡಿಗೆ ಕಳುಹಿಸುವ ಮೂಲಕ ಕಿರು ತೊರೆಯಾಗಿದ್ದ ಜೀವನ ವಾಹಿನಿ ಮಹಾನದಿಯಾಗಿವಂತೆ ಅವಕಾಶ ಕಲ್ಪಿಸುತ್ತಾಳೆ."[೧೪] ಶ್ರೀರಾಮನನ್ನೇ ಹಂಬಲಿಸಿ ನಡೆದು ಅಗ್ನಿಗಾಹುತಿಯಾಗಿ ತನ್ನ ಪಾಪಗಳನ್ನು ತೊಳೆದು ಪವಿತ್ರವಾದ ಆತ್ಮಲಕ್ಷ್ಮಿಯಾಗಿ ಎಲ್ಲರ ಕ್ಷೇಮ ಕಾತರೆಯಾಗಿ ನಿಲ್ಲುತ್ತಾಳೆ.

-----------

೧೩. ಕುವೆಂಪು, ಶ್ರೀರಾಮಾಯಣದರ್ಶನಂ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು ೨, ಎರಡನೇ ಆವೃತ್ತಿ೨೦೦೪, ಪು.೮೫೦.

೧೪.ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೩೦೯.

### ೩. ಕೈಕೆ

ರಾಮಾಯಣದ ದುಃಖ ಸೇತುವೆಯ ನಿರ್ಮಾಣಕ್ಕೆ ಮಂಥರೆ ಹೇಗೆ ಕಾರಣಳೋ ಅವಳಂತೆ ಕೈಕೆಯೂ ಕಾರಣಳು. ರಾಮನ ಅಭ್ಯುದಯಕ್ಕೆ, ಏಳ್ಗೆಗೆ ಮಂಥರೆಯಂತೆ ಕೈಕೆಯೂ ಕಾರಣಳು. ವಿಧಿ ಮಂಥರೆಯ ಮೂಲಕ ಹೂಡಿದ ಸಂಚಿಗೆ ದಾಳವಾದವಳು ಕೈಕೆ. "ವಾಲ್ಮೀಕಿ ಮಹರ್ಷಿಯ ಶ್ರೀ ರಾಮಾಯಣದಲ್ಲಿ ಇತಿಹಾಸದುದ್ದಕ್ಕೂ ಬಹಳ ಮಂದಿ ಓದುಗರ ವ್ಯಾಖ್ಯಾನಕಾರರ ಕಟುಟೀಕೆಗಳಿಗೆ ನಿಂದನೆಗಳಿಗೆ ತಿರಸ್ಕಾರಗಳಿಗೆ ಗುರಿಯಾಗಿ, ಇಂದಿಗೂ ಹಟಮಾರಿತನ, ಗೈಯಾಳಿತನದ ಸವತಿಮಾತ್ಸರ್ಯ ಮನೆಮುರುಕುತನಗಳಿಗೆ ಮತ್ತೊಂದು ಹೆಸರಾಗಿ ಉಳಿದಿರುವ ಪಾತ್ರ ಭರತಮಾತೆ ಕೈಕೆಯದು. ಆಕೆಯ ಕಾರಣದಿಂದಲೇ ದಶರಥ ರಾಮ ಲೋಕಾಭಿರಾಮನಾದರೂ, ಆಕೆಯ ಕಾರಣದಿಂದಲೇ ರಾಮಾಯಣದ ರೋಮಾಂಚನಕಾರಿಯಾದ ಮಹದ್ಘಟನೆಗಳು ನಡೆದು ಪಾತ್ರಗಳು ನಭದೆತ್ತರಕ್ಕೆ ನೆಗೆದು ನಿಲ್ಲುವಂತಾಗುತ್ತಾಗಿದ್ದರೂ ಲೋಕನಿಂದೆಯ ತೋರುಬೆರಳಿಗೆ ಹೇಸುಗುರಿಯಾಗುವ ದೌರ್ಭಾಗ್ಯ ಆಕೆಯ ಪಾಲಿಗೆ ತಪ್ಪಲಿಲ್ಲ. ತಾಯಿಯಾದವಳು ತನ್ನ ಮಗನ ಬಗೆಗಿನ ಕರ್ತವ್ಯವನ್ನು ಕೊಂಚನಿಷ್ಠುರವಾಗಿ ನಿರ್ವಹಿಸಿದ್ದಕ್ಕೆ ಆ ಮಗನಿಂದಲೇ ಮೊದಲುಗೊಂಡು ಅಯೋಧ್ಯೆಯ ಅತಿ ಸಾಮಾನ್ಯ ಜನರ ಬಾಯ್ಗುತ್ತಿಗೆ ಮತ್ತೆ ಮತ್ತೆ ಬಲಿಯಾದ ನತದೃಷ್ಟೆ ಕೈಕೆ".[೧೩]

ದಶರಥನ ಪ್ರೇಮದ ಮಡದಿಯಾಗಿ ಮೆರೆದ ಕೈಕೆಯು ಕೇಕೆಯ ರಾಜನ ಪುತ್ರಿ. ಈಕೆಯು ಅಪೂರ್ವ ಸೌಂದರ್ಯವತಿಯಾಗಿದ್ದು ಅಷ್ಟೇ ಸಾತ್ವಕಳೂ ಪ್ರೇಮಮಯಿಯೂ ಆಗಿದ್ದಳು. ಎಲ್ಲರಿಂದಲೂ ತಿರಸ್ಕೃತಳಾದ ಮಂಥರೆಯನ್ನು ತಾಯಿಯಂತೆ ಗೌರವಿಸುತ್ತಿದ್ದಳು. ಮಂಥರೆಯ ಕುರೂಪಕ್ಕೆ ಅಸಹ್ಯಗೊಂಡವಳಲ್ಲ, ಆತ್ಮ ಸೌಂದರ್ಯದ ಮುಂದೆ ದೇಹ ಸೌಂದರ್ಯ ನಶ್ವರವೆಂದು ತಿಳಿದವಳೂ, ರಾಮನಷ್ಟೇ ಸಾತ್ವಿಕನೂ, ಗುಣಶೀಲನೂ ಆದ ಭರತನನ್ನು ಹೆತ್ತ ಮಹಾಮಾತೆ ಕೈಕೆ. ಮಂಥರೆಯೊಂದಿಗಿನ ಕೈಕೆ ಭರತರ ಸಂಬಂಧ ಒಡತಿ –ದಾಸಿ ಎಂಬಂತಿಲ್ಲ, ಅವರಿಬ್ಬರದೂ ತಾಯಿ ಮಗಳ ಸಂಬಂಧ. ತಾಯಿಯನ್ನು ಮಗಳು ಗೌರವಿಸುತ್ತಾಳೆ. ಆಕೆ ಹೇಳಿದಂತೆ ನಡೆಯುತ್ತಾಳೆ.ಆದರೆ ಕೈಕೆ ತಪ್ಪು ಸರಿಗಳ ವಿವೇಚನೆಗೆ ತೊಡಗದೇ ಮಂಥರೆ ಹೇಳಿದಂತೆ ಕೇಳಿದ್ದು ಅವಳ ದಡ್ಡತನ ಎನ್ನುವುದಕ್ಕಿಂತ ಇದನ್ನು ವಿಧಿಯ ಸಂಚು ವಿಧಿ ದಾಳಗಳಾಗಿ ಮಂಥರೆ ಕೈಕೆ ಕಾರ್ಯನಿರತರಾದರೆಂದೇ ಅರ್ಥೈಸಿಕೊಳ್ಳಬೇಕಾಗುತ್ತದೆ.

ವಾಲ್ಮೀಕಿ ರಾಮಾಯಣದಲ್ಲಿ ಚಿತ್ರಿತವಾಗಿರುವ ಕೈಕೆ ಮಂಥರೆಯ ದುರ್ಬೋಧನೆಗೆ ಒಳಗಾಗಿ ರಾಮನೊಂದಿಗೆ ಕಟುವಾಗಿ ವರ್ತಿಸುತ್ತಾಳೆ. ದಶರಥನ ಸಾವಿಗೆ ಕಾರಣಳಾಗುತ್ತಾಳೆ. ಅಯೋಧ್ಯೆಯನ್ನು ದುಃಖದ ಮಡುವಿಗೆ ನೂಕುತ್ತಾಳೆ. ಆದ್ದರಿಂದ ಜನರ ಕಟುಟೀಕೆಗೆ,ತಿರಸ್ಕಾರಕ್ಕೆ ಒಳಗಾಗುತ್ತಾಳೆ. ಈ ಪಾತ್ರವನ್ನು ಮೊದಲು ಉದ್ಧಾರಿಸಲು ಪ್ರಯತ್ನಿಸಿದ ಮಹಾನುಭಾವ ಭಾಸ ಮಹಾಕವಿ. ತನ್ನ ಪ್ರತಿಮಾನಾಟಕದಲ್ಲಿ ಈ ಕಾರ್ಯವನ್ನು ಕೈಗೊಂಡಿದ್ದಾನೆ. ಭಾಸ ಚಿತ್ರಿಸುವಂತೆ ಕೈಕೆಯು ಶೀಘ್ರವಾದ ಕೋಪವುಳ್ಳವಳಾದರೂ ಧೈರ್ಯವಂತೆ, ಸಾಹಸಿ, ಯುದ್ಧದಲ್ಲಿ ಪತಿಯ ಪ್ರಾಣವನ್ನು ಉಳಿಸಿದ ಸಾಹಸಶೀಲೆ, ರಾಮನ್ನು ಮೆಚ್ಚುವ ಗುಣಪಕ್ಷಪಾತಿ. ರಾಮನ ಮೇಲೆ ಭರತನಷ್ಟೇ ಪ್ರೀತಿ, ಮಮತೆ ಉಳ್ಳವಳು. ದಶರಥನು ಕೈಕೆಯನ್ನು ಮದುವೆಯಾಗುವ ಸಂದರ್ಭದಲ್ಲಿ ಆಕೆಯ ಮಗನಿಗೆ ರಾಜ್ಯವನ್ನು ಕೊಡುವ ಪ್ರತಿಜ್ಞೆ ಮಾಡಿದ್ದನೆಂದೂ, ರಾಮನಿಗೆ ಪಟ್ಟಕಟ್ಟಲು ಆಲೋಚಿಸುವಾಗ ಕೈಕೆಯು ಅದನ್ನೆಲ್ಲಿ ಒತ್ತಾಯಿಸುವಳೋ ಎಂದು ಪರಿತರಿಸುತ್ತಾನೆ.

----------

೧೩. ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೩೦೯.

" ಆವಕಾರ್ಯಕೆಂತು ಕೋಪಗೊಳುವಳೆಂಬುದೆನಗೆ ತಿಳಿಯದಾಗಿದೆ
ವಿಕ್ರಮವನು ಮೆರೆದ ಮಹಿಮಳೀಕೆ ನನ್ನ ಜೀವವುಳಿಸುವೆಸಕದೆ
ದೋಷಮಾನಗಳನು ಎಣಿಪುದೇಕೆ ಈಕೆ ಶೌರ್ಯಲೋಲಳು
ಇಚ್ಚೆಯಂತೆ ನಡೆದು ಗೌರವಿಸಿದರೀಕೆ ತಾನೇ ಒಲಿವಳು "[೧೬]

ದಶರಥನು ಆಕೆಯನ್ನು ಅರಿತು ನಡೆದರೆ ಒಲಿಯುವಳೆಂದು ಚಿಂತಿಸುವಾಗ ಆಕೆಯೇ ಪರಿಸ್ಥಿತಿಯನ್ನರಿತು ರಾಮ ಬೇರೆಯಲ್ಲ, ಭರತ ಬೇರೆಯಲ್ಲ , ರಾಮನಿಗೆ ಪಟ್ಟಕಟ್ಟಿ ಪ್ರತಿಜ್ಞಾಭಂಗವೇನೂ ಆಗುವುದಿಲ್ಲವೆಂದು ಪತಿಯನ್ನು ಸಂತೈಸುತ್ತಾಳೆ. ಇಂಥ ನಿಸ್ವಾರ್ಥಿಸಾಧ್ವಿ ಮಂತರೆಯ ದುರ್ಬೋಧನೆಗೆ ಒಳಗಾದರೂ ಮಹಾರಾಜನ ಸತ್ಯವಾಕ್ಯ ಪರಿಪಾಲನೆಗೆ ಹಾಗೂ ಋಷಿಯ ಶಾಪದ ಪ್ರಭಾವವನ್ನು ಕಡಿಮೆಮಾಡಲು ಗುರುಗಳು ಹಾಗೂ ಮಂತ್ರಿಗಳ ಸಲಹೆಯಂತೆ ರಾಮನಿಗೆ ವನವಾಸ ಕೋರಲು ಮುಂದಾಗುತ್ತಾಳೆ. ಆದರೆ ವಿಧಿ ಸಂಕಲ್ಪ ಬೇರೆಯಾಗುತ್ತದೆ. "ರಾಮನಿಗೆ ಹದಿನಾಲ್ಕು ವಾಸರ ವನವಾಸವೆಂದು ಹೇಳಬೇಕಾದವಳು ವ್ಯಾಕುಲಚಿತ್ತತೆಯಿಂದಾಗಿ ಬಾಯಿತಪ್ಪಿ ಹದಿನಾಲ್ಕು ವತ್ಸರ ಎಂದು ನುಡಿಯುತ್ತಾಳೆ".[೧೭] ಅರಮನೆಯಲ್ಲಿ ವಿದ್ಯೆಕಲಿತು, ಸುಸಂಸ್ಕೃತವಾಗಿ ಬೆಳೆದ ಕೈಕೆಯು ಬಾಯಿತಪ್ಪಿ ನುಡಿದಳೆಂದು ಭಾಸ ಚಿತ್ರಿಸಿರುವುದು ವಿದ್ವಾಂಸರ ಟೀಕೆಗೆ ಒಳಗಾಗಿದೆ. ಭಾಸ ವಿಧಿಯ ಸಂಚೆಂದು ಮುಗಿಸಿ ಬಿಡುತ್ತಾನೆ. ಭಾಸನ ಪ್ರಕಾರ ಕೈಕೆ ಶೂರಳೂ, ಸಾಹಸಿಯೂ, ಪ್ರೇಮಮಯಿಯೂ ಆಗಿದ್ದಳು. ಪತಿಯನ್ನು ತೆಗಳಿ ಮಾತನಾಡುವುದಿಲ್ಲ, ಎಲ್ಲರ ಪ್ರೀತಿ ಗೌರವಗಳಿಗೆ ಪಾತ್ರಳಾಗಿದ್ದವಳು. ರಾಮಭರತರನ್ನೇ ಎರಡು ಕಣ್ಣುಗಳಂತೆ ಭಾವಿಸದ್ದವಳು ಕೈಕೆ.

"ಭಾಸನಲ್ಲಿ ಕೈಕೆಯು ಚಿತ್ರ ಸುಂದರವಾಗಿ ಮೂಡಿಬಂದಿದ್ದರೂ ಆಕೆಯ ವ್ಯಕ್ತಿತ್ವದ ಸಹಜ ವಿಕಾಸ, ಆಕೆಯ ಸಂಕಲ್ಪದ ದೂರದೃಷ್ಟಿಯ ಭವ್ಯತರ ಪರಿಣಾಮ, ಅವಳ ಪಶ್ಚಾತ್ತಾಪದ ಸೂಕ್ಷ್ಮತಮ ಸಾಕ್ಷಿಗಳು ಪರಿಪೂರ್ಣವಾಗಿ ಮೂರ್ತಗೊಂಡಿರುವುದು ಶ್ರೀರಾಮಾಯಣದರ್ಶನಂ ಕಾವ್ಯದಲ್ಲಿ".[೧೮] ಕುವೆಂಪು ಅವರು ಕೈಕೆಯು ಮಂಥರೆಯ ದುರ್ಬೋಧನೆಯಿಂದ ರಾಮನಿಗೆ ವನವಾಸವನ್ನು ಬೇಡಿದ್ದು ವಿಧಿಯ ಸಂಕಲ್ಪವೆಂದು ತಿಳಿಸುತ್ತಾಳೆ. ರಾಮನನ್ನು ಭರತನಷ್ಟೇ ಮುದ್ದಿನಿಂದ ಬೆಳೆಸಿದ್ದ ತಾಯಿ ಕೈಕೆ ಎಂದು ಅನೇಕ ನಿದರ್ಶನಗಳಲ್ಲಿ ತೋರಿಸುವ ಮೂಲಕ ಆಕೆಯ ಪಾತ್ರವನ್ನು ಉತ್ತಮವಾಗಿ ಚಿತ್ರಿಸಿದ್ದಾರೆ.

ಕೈಕೆಯನ್ನು ನಾವು ಮೊದಲು ಕಾಣುವುದು ಬಾಲ ರಾಮನನ್ನು ಸಮಾಧಾನ ಪಡಿಸಿದ ಕನ್ನಡಿಯ ಪ್ರಸಂಗದಲ್ಲಿ, ಆಕೆ ಭರತನಂತೆಯೇ ರಾಮನನ್ನು ಮಮತೆಯಿಂದ ಸಾಕಿದ್ದಳೆಂದು ತಿಳಿಯಲು ಈ ಪ್ರಸಂಗವೊಂದೇ ಸಾಕು. ರಾಮನ ಪಟ್ಟಾಭಿಷೇಕದ ವಾರ್ತೆ ತಿಳಿದು, ಅಯೋಧ್ಯೆಯು ತಳಿರು ತೋರಣಗಳಿಂದ ಅಲಂಕೃತಗೊಂಡು ರಾಮನಿಗೆ ಶುಭಕೋರುತ್ತಿದ್ದದ್ದನ್ನು ಕಂಡು ಅಸೂಯೆಗೊಂಡವಳು ಮಂಥರೆ. ಅಮಂಗಳವನ್ನು ಕಂಡಂತೆ, ದುರಂತ ಭವಿಷ್ಯವನ್ನು ಶಂಕಿಸಿ ಕಳವಳಗೊಂಡು ಕೈಕೆಯಲ್ಲಿಗೆ ಗೋಳಾಡುತ್ತಾ ಬರುವಳು ಮಂಥರೆ.

----------

೧೬.ಎಸ್.ವಿ.ಪರಮೇಶ್ವರಭಟ್ಟ, ಕನ್ನಡ ಭಾಸ ಮಹಾಸಂಪುಟ, 'ಪ್ರತಿಮಾನಾಟಕ', ಪು.೧೫.

೧೭. ಅದೇ.

೧೮. ಡಾ. ಎಚ್.ಜಿ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೨೬೩.

" ಓ ಕೈಕೆ
ಮತಿಗೇಡಿ ನಿರ್ಭಾಗ್ಯೆ, ಇನ್ನುಮೇನೀನಿದ್ದೆ
ನಿನಗೆ ಮೇಲೇಳ್ ಏಳ್; ಕೆಡೆದು ಬಿದ್ದಿದೆನಿನ್ನ
ಸಿರಿಗಿಡಿಯಗೋಪುರಂ! ಹೊಂಗನಸುಹಿಡಿಯಾಯ್ತು
ಬಯಲ ಸೇರ್ದುದು ಬಹುದಿನದ ಬಯಕೆ! ಕೆಟ್ಟೆನೀಂ
ಕೆಟ್ಟೆನಾಂ!ಹಾ ಭರತ! ಭರತ! ಹಾ ! ಎಲ್ಲಿಹಯ್
ಎಲ್ಲಿಹೆಯೋ ಇಂದು? ಬಾ ಬೇಗಬಾ!

(ಪುಟ ೬೨)

ಕೈಕೆ ಸಾಕಿ ಬೆಳೆಸಿದ್ದ ತಾಯಿ ಮಂಥರೆಯಾದ್ದರಿಂದ ಕೈಕೆ ಮಹಾರಾನಿಯಾದರೂ ಆಕೆಯನ್ನು ಸಲುಗೆಯಿಂದ ಏಕವಚನದಲ್ಲಿ ಕರೆಯುವುದನ್ನು ಗಮನಿಸಬಹುದು.. ರಾಣಿಯನ್ನು ಮತಿಗೇಡಿ, ನಿರ್ಭಾಗ್ಯೆ ಎಮದು ಸಂಬೋಧಿಸುತ್ತಿರುವ ಮಂಥರೆಗೆ ಕೈಕೆಯ ಮನದಲ್ಲಿ ಉನ್ನತವಾದ ಗೌರವಸ್ಥಾನವಿತ್ತೆಂದು ಹೇಳಬಹುದು. ರಾಮನ ಪಟ್ಟಾಭಿಷೇಕ ಮಂಥರೆಗೆ ಅಮಂಗಳವಾರ್ತೆ. ಏಕೆಂದರೆ ಆಕೆಯ ಮನದಲ್ಲಿರುವುದು ಭರತ ಕೈಕೆ ಇಬ್ಬರೇ ಭರತನೇ ರಾಜ, ಕೈಕೆಯೇ ರಾಜಮಾತೆಯಾಗಬೇಕೆಂಬುದು ಆವಳ ಮನೋಗತ, ಅದಕ್ಕೆ ವಿರುದ್ಧ ಘಟನೆ ಮಂಥರೆಗೆ ಅಪ್ರಾಕೃತವೆನಿಸುತ್ತದೆ. ತನ್ನ ಆಸೆಯ ಈಡೇರಿಕೆಗೆ ಆಕೆ ತಂತ್ರಗಳನ್ನು ರೂಪಿಸುತ್ತಾಳೆ. ಮಂಥರೆಯು ಭರತನನ್ನು ನೆನೆದು ಗೋಳಿಡುವುದನ್ನು ಕಂಡು ಕೈಕೆಗೆ ಭರತನಿಗೆ ಏನಾಯಿತೋ ಎಂದು ಶಂಕೆಯುಂಟಾಗಿ ವಿಷಯ ತಿಳಿಯುವ ಕಾತರವನ್ನು ವ್ಯಕ್ತಪಡಿಸುತ್ತಾಳೆ. ಮಂಥರೆಯು ಕೈಕೆಯ ಮನಸ್ಸಿಗೆ ದುರ್ಬೀಜವನ್ನು ಬಿತ್ತಲು ಅಣಿಯಾಗುತ್ತಾಳೆ:

" ಬೇಸಗೆಯ ಹೊಳೆಯಾದುದೌ, ಕೈಕೆ ನಿನ್ನಸಿರಿಯಂ
ನಿನ್ನ ಸೌಂದರ್ಯದಂತೆ. ಬಂಡನೀಟಿದ ಬಳಿಕಮಾ
ಬಂಡುಣಿಗೆ ಹೂವಿನ ಗೊಡವೆಯೇಕೆ? ಅಂತೆವೋಲ್
ದಶರಥನಿಗೆ ನೀನಾದೆಯೌ".

[ಶ್ರೀರಾಮಾಯಣದರ್ಶನಂ, ಪು–೬೩]

ಬೇಸಗೆಯ ಹೊಳೆ ಬತ್ತುವಂತೆ ನಿನ್ನ ಸಿರಿ ಸೌಂದರ್ಯಗಳು ಬತ್ತಿಹೋದವು. ಮಧುವನ್ನು ಕುಡಿದ ದುಂಬಿಯು ಹೂವನ್ನು ಬಿಟ್ಟು ಹಾರುವಂತೆ ದಶರಥನಿಂದ ನೀನು ಮೋಸಹೋದೆ ಎಂದು ಕೈಕೆಯ ಮನಸ್ಸನ್ನು ಮಂಥರೆಯು ದೂರಾಲೋಚನೆಗೆ ಹದಗೊಳಿಸುತ್ತಾಳೆ. ದುರ್ವಾತೆಯನ್ನು ಕೇಳಿಸಿಕೊಳ್ಳುವ ಧೈರ್ಯವಿದ್ದರೆ ಹೇಳುತ್ತೇನೆ ಕೇಳೆಂದು ಭರತನಿಗೆ ಇತರರ ಸಂಚಿನಿಂದ ಈ ನೆಲ ದೊರೆಯದೆಂದು, ನಿನ್ನ ಕೊರಳನ್ನು ಕುಯ್ವ ಕತ್ತಿಯನ್ನು ಮಸೆಯುತ್ತಿದ್ದಾರೆಂದು, ನಿನ್ನ ದುಃಖವೇ ನನ್ನ ದುಃಖವೆಂದು ಕೈಕೆಯ ಮನಸ್ಸನ್ನು ತನ್ನ ಹಿಡಿತಕ್ಕೆ ತೆಗೆದುಕೊಳ್ಳಲು ಪ್ರಯತ್ನಿಸುತ್ತಾಳೆ. ಕಲ್ಮಶರಹಿತವಾದ ಕೈಕೆಯ ಮನಸ್ಸು ರಾಮನ ಪಟ್ಟಾಭಿಷೇಕದ ಸಂಗತಿ ತಿಳಿದು ಪ್ರತಿಕ್ರಿಯಿಸುವ ರೀತಿ ಭಿನ್ನವಾದುದ್ದು.

ಮೊಗಮಲರ್ದುದಯ್
ಕೈಕೆಗದನಾಲಿಸಿತೆ, ಶಶಿಗೆ ನೈದಿಲೆಯವೋಲ್,
ಕೊರಳಸರಮಂ ತೆಗೆದು ಮಂಥರೆಗೆ ನೀಡಿ ನುಡಿದಳ್
"ನಿನಗಿದೊ ಕೊಡುಗೆ, ಶುಭದವಾರ್ತೆಯಂ ತಂದುದಕೆ
ರಾಮನೇಂ? ಭರತನೇಂ? ಮಕ್ಕಳಿರ್ವರುಮೆನ್ನವರ್!"

( ಶ್ರೀ ರಾಮಾಯಣದರ್ಶನಂ. ಪುಟ ೬೪)

ಸಂತೋಷದಿಂದ ಮುಖ ಅರಳಿಸಿಕೊಂಡ ಕೈಕೆಯು ಕೊರಳಸರವನ್ನು ಮಂಥರೆಗೆ ಬಹುಮಾನ ನೀಡಿ ರಾಮಭರತರಿಬ್ಬರೂ ನನ್ನವರೇ ಎಂದು ಶುಭಸಂದೇಶವನ್ನು ಕೇಳಿ ಆನಂದಿಸುತ್ತಾಳೆ. ಮಂಥರೆಯು ಸರವನ್ನು ಕಿತ್ತೆಸದು ಭಯಂಕರ ಕನಸುಗಳ ವರ್ಣನೆಯನ್ನು ಮಾಡಿ ಕೈಕೆ ಮನಸ್ಸು ಕಲಕುವ ಕಾರ್ಯದಲ್ಲಿ ಯಶಸ್ವಿಯಾಗುತ್ತಾಳೆ. ಸವತಿಮಾತ್ಸರ್ಯವನ್ನು ಹೆಚ್ಚಿಸಿ ರಾಮ ಕೌಸಲ್ಯೆಯ ಮಗನೆಂದು ನೆನಪಿಸುತ್ತಾಳೆ. ಮುಂದೆ ಭರತನಿಗಾಗುವ ಕೇಡನ್ನು ತಡೆಯಲು ಮುಂದಾಗಬೇಕೆಂದು ಕೈಕೆಗೆ ತನಗೆ ಬಿದ್ದ ಘೋರ ಕನಸು ನಿಜವಾಗದಂತೆ ತಡೆಯಲು ಎಚ್ಚರಿಸುತ್ತಾಳೆ. ಬೇಗನೆ ಬುದ್ಧಿ ತಿಳಿಯದಿದ್ದರೆ, ಗತಿಗೆಟ್ಟು ಹಾಳಾಗುತ್ತಿಯೆಂದು ರಾಮನ ಆಳ್ವಿಕೆ ಬಂದರೆ ಕೌಸಲ್ಯೆಗೆ ನೀನು ತೊತ್ತಾಗುತ್ತೀಯ ರಾಮನಿಗೆ ಭರತ ತೊತ್ತಾಗುತ್ತಾನೆ. ಎಲ್ಲರನ್ನೂ ನಂಬಿ ಭರತನ ಜೊತೆ ನೀನು ಹಾಳಾಗುತ್ತಿಯೆಂದು "ಕೊರಗದಿರ್ ಸಂಚು ಮಿಂಚಿದ ಮೇಲೆ!" ಎಂದು ಮಂಥರೆಯು ಕೈಕೆಯ ಮನಸ್ಸಿಗೆ ಗಾಳವನ್ನು ಹಾಕಿಹಿಡಿಯಲು ಪ್ರಯತ್ನಿಸುತ್ತಾಳೆ.

> ಕೇಳುತ್ತೆ, ಕೆಲವೊಳ್ತು ಮೌನಮಿರ್ದಳ್ ಕೈಕೆ,
> ಕೆನ್ನೆಗೈಯಾಗಿ, ಕಂಬನಿದುಂಬಿ, ಕಣ್ಮುಚ್ಚದೆಯೆ
> ಹಾಲ್ಗಲ್ಲ ಗೋಡೆಯನೆ ನೋಡಿ: ಮೂಡಿತು ಮನಕೆ
> ಮಾವನ ಮನೆಯ ದೂರದೊಳಿದ್ದ ತನುಜನ ಮೂರ್ತಿ
> ನೆನೆದು ಮೆಲುಕಾಡಿದಳ್, ನೆರಕೆ ಗರಗಸವಾಗೆ,
> ಮಂಥರೆಯ ಮಾತೆಲ್ಲಮಂ.ಹೃದಯಮುರಿದಂತಾಯ್ತು,
> ದುಃಖಮಿರ್ಮಡಿಸಿದುದು.
>
> (ಶ್ರೀರಾಮಾಯಣದರ್ಶನಂ, ಪು-೬೫)

ಮಾವನ ಮನೆಯಲ್ಲಿದ್ದ ಭರತನ ನೆನೆಪಾಗಿ ಕೈಕೆಯು ಕಂಬನಿ ತುಂಬಿಕೊಂಡಾಗ ಕಾದ ಕಬ್ಬಿಣವನ್ನು ಬಡಿಯುವಂತೆ ಮಂಥರೆಯು 'ಭರತನನ್ನು ರಾಮನಿಗೆ ತೊತ್ತಾಗಿಸುವುದಕ್ಕಿಂತ ಕಾಡಿಗೆ ಕಳಿಸು ತಾನು ಅವನ ಸೇವೆಗೆ ಕಾಡಿಗೆ ಹೋಗುತ್ತೇನೆಂದು ದುಃಖಿಸುತ್ತಾಳೆ'. ಭರತನನ್ನು ಎಡಬಿಡದೆ ಹಿಂಬಾಲಿಸುವ ಶತ್ರುಘ್ನನು ಪಟ್ಟಕ್ಕೆ ವಿಘ್ನವೊಡ್ಡುವನೆಂದೇ ಭರತನೊಡನೆ ಕಳಿಸಿರುವುದಾಗಿ ತಿಳಿಸಿದಾಗ ಕೈಕೆಗೆ ಹೃದಯಮುರಿದಂತೆ ದುಃಖವು ಅಧಿಕವಾಗುತ್ತದೆ. "ಮಂಥರೆ-ಕೈಕೆಯು ಅಭಿನ್ನರು; ರೂಪಭಿನ್ನವಾದರೂ ಸ್ವರೂಪ ಅಭಿನ್ನ; ಆಕಾರ ಪ್ರತ್ಯೇಕವಾದರೂ; ಆತ್ಮ ಅಪ್ರತ್ಯೇಕ. ಆದುದರಿಂದಲೇ ಮಂಥರೆಯ ಎದೆಯಲ್ಲಾದ ಕಂಪನ ಕೈಕೆಯ ಎದೆಯನ್ನು ಕಂಪಿಸುತ್ತದೆ; ಒಂದು ಅನುಭೂತಿ ಮತ್ತೊಂದರ ಅನುಭೂತಿಯಾಗುತ್ತದೆ; ಒಬ್ಬಳ ಬಯಕೆ ಮತ್ತೊಬ್ಬಳ ಬಯಕೆಯಾಗುತ್ತದೆ".[೧೯] ಮಂಥರೆಯ ಮನೋವಾಂಛೆಯು ಕೈಕೆಯ ಹೃದಯದಲ್ಲಿ ಹರಿದು ಮುಂದಿನ ದುರಂತಸಾಗರದ ಅನಾವರಣಕ್ಕೆ ಹೆದ್ದಾರಿಯಾಗಿ ಮಾರ್ಪಡುತ್ತದೆ. ಕೈಕೆಯ ಮನಸ್ಸು ಪೂರ್ಣವಾಗಿ ಮಂಥರೆಯ ವಶವಾಗುತ್ತದೆ. ಕೈಕೆ ಸ್ವಬುದ್ಧಿಯನ್ನು ಕಳೆದುಕೊಳ್ಳುತ್ತಾಳೆ. ಅಯೋಧ್ಯಾ ಜನರ ಸಂಚಿನಲ್ಲಿ ನಾಶವಾಗುತ್ತಿದ್ದ ತನ್ನ ಮಗನ ಬದುಕನ್ನು ರಕ್ಷಿಸಲು ಬಂದ ದೇವಾಂಗನೆಯೇ ಮಂಥರೆ ಎಂದು ಕೈಕೆ ಮಂಥರೆಯನ್ನು ತಬ್ಬಿಕೊಳ್ಳುತ್ತಾಳೆ. ಮಂಥರೆಯನ್ನು ದಾರಿತೋರಿದ 'ಭಾಗ್ಯದೇವತೆ',ತಾಯಿ ಎಂದು ಹೊಸದಾಗಿ ಗರ್ಭಗುಡಿಯ ಮೂರ್ತಿಯನ್ನು ಕಾಣುವಂತೆ ಕೈಕೆ ಭಕ್ತಿಯಿಂದ ಕಾಣುತ್ತಾಳೆ. ಮಂಥರೆಗೆ ತನ್ನ ಶ್ರಮ ಸಾರ್ಥಕವೆನಿಸಿ, ಕೈಕೆಯನ್ನು ದಾಳವಾಗಿ ಮಾರ್ಪಡಿಸುವ ಹುನ್ನಾರ ನಡೆಸುತ್ತಾಳೆ.

----------

೧೯. ಡಾ. ದೇ.ಜವರೇಗೌಡ, ಕುವೆಂಪು ಸಾಹಿತ್ಯ : ಕೆಲವು ಅಧ್ಯಯನಗಳು, ಪು.೧೩೪

"ರಾಮನ ಬಗೆಗಿನ ವಾತ್ಸಲ್ಯತಂತು ಕೈಕೆಯಲ್ಲಿ ತುಸು ಸಡಿಲವಾಗಿದ್ದೇ ತಡ, ತನ್ನ ದಾರಿಯಲ್ಲಿ ಹೆಜ್ಜೆಹಾಕಲು ಅವಳ ಮನಸ್ಸು ಸಿದ್ಧವಾಗಿ ತನ್ನ ಹಿಂದಿನ ಅಚಲತೆಯನ್ನು ಕಳೆದುಕೊಂಡಿತೆಂದು ಅರಿವಾದದ್ದೆ ತಡ, ಮಂಥರೆ ತನ್ನ ಅಸ್ತ್ರವನ್ನು ಮತ್ತಷ್ಟು ಚೂಪಾಗಿ ಮಸೆಯುತ್ತಾಳೆ, ತನ್ನ ಹಿಡಿತವನ್ನು ಮತ್ತಷ್ಟು ಬಿಗಿಗೊಳಿಸುತ್ತಾಳೆ. ತಾನು ಆಕೆಯನ್ನು ಹಾಗೆ ಒತ್ತಾಯಿಸುತ್ತಿರುವುದು ರಾಮ ವಿದ್ವೇಷದಿಂದಲ್ಲವೆಂದೂ, ಆಕೆಯ ಹಾಗೂ ಭರತನ ಮೇಲಿನ ಮಮತೆಯಿಂದ ಮಾತ್ರವೆಂದು ಚತುರತೆಯಿಂದ ವಾದಿಸುತ್ತಾಳೆ".[೨೦] ಈ ಸಂದರ್ಭದಿಂದ ಕೈಕೆಯು ಮಂಥರೆಯ ದಾಳವಾಗುತ್ತಾಳೆ. ಮುಂದಿನ ಕಾರ್ಯವನ್ನು ತಿಳಿದು ನಿರ್ಮಲ ಹೃದಯದಲ್ಲಿ ಕೆಸರನ್ನು ತುಂಬಿಕೊಳ್ಳುವಂತೆ ಮನದಲ್ಲಿ ಮತ್ಸರವನ್ನು ಹಟವನ್ನು ತುಂಬಿಕೊಂಡು ಕಾರ್ಯಸಾಧನೆಗೆ ಕೈಕೆ ಮುಂದಾಗುತ್ತಾಳೆ.

ಮಂಥರೆಯೇ ನೆನಪಿಸಿದಂತೆ ಕೈಕೆಯು ವರಗಳನ್ನು ಇಂದು ಕೇಳಲು ವೇದಿಕೆಯನ್ನು ಸಜ್ಜುಗೊಳಿಸಿಕೊಂಡು ಕೋಪಗೃಹವನ್ನು ಪ್ರವೇಶಿಸಿ ದಶರಥನ ಮುಂದೆ ಗೋಳಾಡಿ ದುಃಖ ಉಕ್ಕಿಸುತ್ತಾಳೆ. ದಶರಥನು ತನ್ನ ಪ್ರೇಮದ ಮಡದಿಯನ್ನು ಸಂತೈಸಲು ಮುಂದಾಗುತ್ತಾನೆ. ಆಗ ಕೈಕೆಯ ಬಾಯಿಂದ ಬಂದ ಮಾತುಗಳಿಗೆ ದಶರಥನು ಮರುಳಾಗದೇ ಇರಲು ಸಾಧ್ಯವಾಗುತ್ತದೆಯೆ?

"ರುಜೆಯಲ್ತು,ಜೀವೇಶ. ಏಕೆನೆಗೆ, ನೀನೆಯಿರೆ,
ಬೇರೆ ಐಸಿರಿ, ನೃಪತಿ? ನಿಂದೆಯಪಮಾನದಿಂ
ಬೆಂದಿಲ್ಲ ಬಗೆ.ನಾಲಗೆಯ ಜಾಣ್ಮೆಗೆನ್ನಾಸೆ
ತೀರಿದಯ್. ಮನವನೊರೆಯೆನೆ ನಿನಗೆ,ಮನದನ್ನ,
ಕೋರ್ದುದಂ ಕೊಡುವೆನೆಂದಾಣೆಯಿಟ್ಟಾಡಿದೊಡೆ,
ಚುಂಬನದ ಜತುಮುದ್ರೆಯೊತ್ತಿ?"

[ಶ್ರೀರಾಮಾಯಣದರ್ಶನಂ, ಪು- ]

ಕೈಕೆಯು ಸಾಮಾನ್ಯ ಸ್ತ್ರೀಯಲ್ಲ, ಬುದ್ಧಿವಂತೆ, ದಶರಥನನ್ನು ಮನವೊಲಿಸುವ ತಂತ್ರವನ್ನು ಚೆನ್ನಾಗಿ ಬಲ್ಲವಳು.ನೀನಿರುವಾಗ ಬೇರೆ ಐಸಿರಿಯ ಅಗತ್ಯವಿಲ್ಲವೆಂದು ದಶರಥನಿಗೆ ನಿವೇದಿಸುವ ಕೈಕೆ, ಬಾಯಿಮಾತಿಗೆ ಹಾಗೆಂದಿದ್ದಾಳೆಯೇ ವಿನಃ ದಶರಥನ ಬಗೆಗಿದ್ದ ಪ್ರೀತಿಯಿಂದಲ್ಲ. ಅದನ್ನರಿಯದ ದಶರಥ ಮಹಾರಾಜ ಕಿರುರಾಣಿಯ ಮೋಹದ ಬಲೆಗೆ ಬಿದ್ದು ಆಡುಮಾತುಗಳು ಬೆರಗುಗೊಳಿಸುವಂಥವು:

"ಪೀಡಿಪೆಯೇಕೆ?
ನಿನಗಿಂ ಮಿಗಿಲ್ ಪ್ರಿಯರೇ, ಪೇಳ್,ನನಗೆ ಮೂಜಗದಿ?
ಪ್ರಾಣಮಂ ಪತ್ತುವಿಟ್ಟಾದೊಡಂ ನಿನ್ನಿಷ್ಟಮಂ
ಸಲಿಪೆನೆಂದಾಣೆಯುಟ್ಟಾಡಿದೆನ್, ಮತ್ತಿದೇನ್?
ಪುರುಷರೊಳ್ ರಾಮನನಗೆಂತತಂತೆ ಪೆಣ್ಗಳೊಳ್
ನೀನಲ್ತೆ. ಕುಸುಮಕೋಮಲೆ, ಪ್ರಿಯತಮಂ! ಮುದ್ದು
ಮಗುವೆನ್ನ ರಘುರಾಮನಾಣೆ, ಪೇಳ್ ಬಯಕೆಯಂ:
ನಿನ್ನಾಶೆ ಸೇರ್ದುದೆಂದರಿ ಕಲ್ಪತರುಮೂಲಮಂ!"

[ಶ್ರೀರಾಮಾಯಣದರ್ಶನಂ, ಪು-೭೧]

-----------

೨೦.ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೨೭೮.

ಮೂರು ಜಗತ್ತಿನಲ್ಲಿ ನಿನಗಿಂತ ಪ್ರಿಯರಾದವರಿಲ್ಲ ನನಗೆ ಪ್ರಾಣವನ್ನು ಹೊತ್ತೆಯಿಟ್ಟಾದರೂ ನಿನ್ನ ಬಯಕೆಯನ್ನು ಸಲ್ಲಿಸುತ್ತೇನೆಂದು ಲೋಕದಲ್ಲಿ ಪುರುಷರಲ್ಲಿ ರಾಮ ಹೇಗೆ ನನಗೆ ಪ್ರಿಯನೋ ಹೆಣ್ಣುಗಳಲ್ಲಿ ನೀನು ಪ್ರಿಯವೆಂದು ಸತ್ಯವನ್ನೇ ನುಡಿಯುತ್ತಾನೆ. ಕೈಕೆಯು ನಿರ್ಮಲ ಮನಸ್ಸಿನವಳೆಂದು, ಕೆಟ್ಟ ಆಲೋಚನೆ ಅವಳಲ್ಲಿ ಬಾರದೆಂದು ಅತಿಯಾದ ಭರವಸೆ ತುಂಬಿಕೊಂಡಿದ್ದ ದಶರಥ ಶ್ರೀರಾಮನ ಮೇಲೆ ಆಣೆ ಮಾಡಿ ಆಕೆಯ ಬಯಕೆಯನ್ನು ಈಡೇರಿಸುವೆನೆಂದು ಹೇಳಿ ಮಂಥರೆಯು ಕೈಕೆಯ ಮೂಲಕ ನಿರ್ಮಿಸಿದ್ದ ಕುತಂತ್ರದ ಬಲೆಗೆ ಬೀಳುತ್ತಾನೆ. ತನ್ನ ಕಣ್ಣುಗಳನ್ನೇ ತಾನು ತಿವಿದುಕೊಳ್ಳುತ್ತಿದ್ದೇನೆಂದು ಅರಿವಾಗುವುದು ಕೈಕೆಯ ಮುಂದಿನ ಮಾತುಗಳನ್ನು ಆಲಿಸಿದ ಮೇಲೆಯೇ. ಆದರೆ ಕಾಲ ಮಿಂಚಿಹೋಗಿ, ವಿಧಿಯ ಆಟವು ಪ್ರಾರಂಭವಾಗುತ್ತದೆ. ದಶರಥನೇ ಎಲ್ಲ ಐಸಿರಿ ಎಂದುಕೊಂಡ ಕೈಕೆ ಬೇಡುವುದು ಭರತನ ಪಟ್ಟಾಭಿಷೇಕ, ರಾಮನ ವನವಾಸ. ರಾಮನನ್ನಲಿದ ದಶರಥನ ಪ್ರಾಣ ಕ್ಷಣವೂ ಉಳಿಯಲಾರದೆಂಬ ಸತ್ಯ ಆಕೆಗೆ ತಿಳಿಯದಿರುವುದೇ ದುರಂತ ಕಥೆ.

" ಧನ್ಯ ದಲ್, ಪ್ರಾಣೇಶ,ನಾನಿಂದು! ಕೇಳ್ದು ನಿನ್ನೀ
ಲೋಕಕಲ್ಯಾಣಕರ ವಚನಮಂ ನಲಿಯುತಿಹರಾ
ನಿರ್ಜರರ್,ಪೋದ ಸಗ್ಗಂ ಮರಳಿ ಕೈಸಾರ್ದವೋಲ್!
ಮುನ್ನಂದು ನೀಂ ಪೇಳ್ದುದಂ ಪ್ರಣಯ ಪ್ರಬಂಧಮಂ!
ನೆನೆವೀವೆನಿಂದು ನನಗಾ ವರದ್ವಯಂಗಳಂ
ನೀಡುವೇಳ್ಕುಂ: ರಾಮಪಟ್ಟಾಭಿಷೇಕಕೆಗೆಯ್ದ
ಸನ್ನಹದಿಂದೆ ಭರತಂಗೆ ಪಟ್ಟಂಗಟ್ಟಿ
ರಾಜ್ಯಮಿದು ನಿಷ್ಕಂಟಕಿತಮಾಗಲೋಸುಗಂ
ಕೌಸಲ್ಯೆಯಾತನಂ ಕಳುಹು ವಿಪಿನಾಂತರಕೆ
ಪದಿನಾಲ್ಕೆ ಬರಿಸಂಬರಂ! ನಾರುಡೆಯನುಟ್ಟು,
ಕೃಷ್ಣಮೃಗ ಚರ್ಮಮಂ ಧರಿಸಿ, ಜಟೆಗಳನಾಂತು
ಬಾಳ್ಗೆ ದೂರರಣ್ಯದೊಳ್!

[ಶ್ರೀರಾಮಾಯಣದರ್ಶನಂ, ಪು–೭೧]

ಕೈಕೆಯು ದಶರಥನನ್ನು ಹೊಗಳಿ ಆತನ ಮನವೊಲಿಸಿಕೊಂಡು ಅಯೋಧ್ಯೆಯ ಸಮಸ್ತವೂ ತನ್ನದಾಗುವಚಿತೆ ಉಪಾಯದಿಂದ ವರಕೇಳುತ್ತಾಳೆ. ರಾಮನ ಪಟ್ಟಾಭಿಷೇಕದ ಸುಸಂದರ್ಭದಿಂದ ಆನಂದದಿಂದಿರುವ ದಶರಥನ ಮನಸ್ಸು ಕ್ಷಣಕಾಲವೂ ಕೆಟ್ಟದರ ಬಗ್ಗೆ ಚಿಂತಿಸದೇ ಪ್ರಾಣವನ್ನು ಕೊಟ್ಟಾದರೂ ಕೈಕೆಯ ಬಯಕೆಯನ್ನು ಸಲ್ಲಿಸುವುದಾಗಿ ರಾಮನ ಮೇಲೆ ಆಣೆಮಾಡಿಸುತ್ತದೆ, ಕೈಕೆಯು ಕೇಳಿದ ಎರಡು ವರಗಳ ಈಡೇರಿಕೆಗೆ ದಶರಥನು ಪ್ರಾಣವನ್ನು ನೀಡಲೇಬೇಕಾಗುತ್ತದೆ. ಭರತನಿಗೆ ಪಟ್ಟಕಟ್ಟುವುದಲ್ಲದೇ ರಾಮನಿಗೆ ರಾಜ್ಯ ನಿಷ್ಕಂಟಕವಾಗಿರಲು ವನವಾಸವನ್ನು ಕೋರುವುದು, ನಾರುಡೆಯನ್ನೇ ಧರಿಸಬೇಕೆಂದು ಹೇಳುವುದು ಆಕೆಯು ಮೊದಲೇ ಮಂಥರೆಯೊಂದಿಗೆ ಮಂತ್ರಾಲೋಚನೆಯನ್ನು ಮಾಡಿ ನಿರ್ಧರಿಸಿದ್ದಾಳೆಂದು ಸ್ಪಷ್ಟವಾಗುತ್ತದೆ.

ದಶರಥನು ಸಿಡಲ ಬಡಿತಕ್ಕೆ ಉರುಳುವ ಬಾಳೆಯ ಸುಳಿಯಂತೆ ನೆಲಕ್ಕುರುಳಿ ಮೂರ್ಛಿತನಾಗುತ್ತಾನೆ. ಕೈಕೆಯ ಶೈತ್ಯೋಪಚಾರಗಳನ್ನು ತಿರಸ್ಕರಿಸಿ ಕುಲಘಾತಿನಿ, ಪಾಪಿ, ನಿಶಾಚರಿ ತೊಲಗೆಂದು ಬೈಯುತ್ತಾನೆ.

"ತೆಗೆ,ತೆಗೆ, ಪುಸಿಯದಿರ್! ಪುಣ್ಯರೂಪದಿಂ
ಪಾಪಮೇ ನುದಿಸುವುದೇ? ಹೊಮ್ಮುವುದೆ ಕೈಕೆಯಿಂ
ಮಂಥರೆಯ ವಿಕೃತ ರೂಪಂ? ಚಿತ್ತ ವಿಭ್ರಾಂತಿ
ದಿಟಮೆನಗೆ!"

[ಶ್ರೀರಾಮಾಯಣದರ್ಶನಂ, ಪು-೭೨]

ದಶರಥನು ಕಯಕೆಯು ಕೋರಿದ ವರಗಳನ್ನು ನಂಬಲು ಸಾಧ್ಯವಾಗುವುದಿಲ್ಲ. ಪುಣ್ಯರೂಪವಾದ ಕೈಕೆಯಿಂದ ಮಂಥರೆಯ ವಿಕೃತರರೂಪ ಕಾಣುವುದಿಲ್ಲ. ಇದು ಚಿತ್ತವಿಭ್ರಾಂತಿ ಎಂದು ದೊರೆ ತನ್ನನ್ನು ತಾನು ನಂಬಲಾರದ ಸ್ಥಿತಿಯಲ್ಲಿ ಪರಿತಪಿಸುತ್ತಾನೆ.

"ರಾಮನನ್ನಲ್ತು,ಕೇಳ್ ಕೈಕೆ,
ನೀನಡವಿಗಟ್ಟತಿಹೆ ನಿನ್ನ ಮಾಂಗಲ್ಯಮಂ
ಭರತರಾಮರ್ಗೆಣಿಸದಿರ್ ಭೇದಮಂ"

[ಶ್ರೀರಾಮಾಯಣದರ್ಶನಂ, ಪು-೭೩]

ದಶರಥ ಮಹಾರಾಜನು ಕೈಕೆಯ ದುರ್ಬೋಧನೆಗೆ ಒಳಗಆಗಿ ಕುಲಗೇಡಿಯಾಗಬೇಡವೆಂದು, ನೀನು ಕಡಿಗಟ್ಟುತ್ತಿರುವುದು ರಾಮನನ್ನಲ್ಲ ನಿನ್ನ ಮಾಂಗಲ್ಯವನ್ನು ಎಂದು ಹೃದಯತಾಪದಿಂದ ದೀನ ಮನಯಾಗುತ್ತಾನೆ. ಕೋಪದಿಂದ ಕುದಿಯುತ್ತಾನೆ. ದಿಕ್ಕುತೋಚದೆ ನೋಯುತ್ತಾನೆ. ರಾಜನ ಈ ಸ್ಥಿತಿ ಕಂಡ ಕೈಕೆಯು ಬೆದರಿ ಪಡುಗುತ್ತಾ ಗದ್ಗದಿಸಿ ಕೈ ಮುಗಿದು ವಾಗ್ದಾನಗಳನ್ನು ಹಿಂತೆಗೆದುಕೊಳ್ಳುವಂತೆ ಬೇಡುವುದು ಆಕೆಯ ಸಹಜ ಹೃದಯವನ್ನು, ಮಮತೆಯನ್ನು ಬಿಂಬಿಸುತ್ತದೆ.

ಪತಿಯ ದುಸ್ಥಿತಿಯನ್ನು ಕಂಡು ಕೈಕೆಯ ಅಂತರಾತ್ಮ ಮಿಡಿದು ಸಂತೈಸಬಯಸುತ್ತದೆ. ನಿನ್ನ ವಾಗ್ದಾನಗಳನ್ನು ಹಿಂತೆಗೆದುಕೊ ನಿನಗೆ ನೋವನ್ನು ನೀಡಿ ನಾನೂ, ನನ್ನ ಮಗನೂ ಸುಖವಾಗಿರಲೂ ಸಾಧ್ಯವೇ? ರಾಮನ ಆಣೆ ಇಟ್ಟದ್ದರಿಂದ ಕೇಳಿದನೇ ಹೊರತು ಅಮಂಗಳವನ್ನು ಬಯಸಿ ಕೇಳಲಿಲ್ಲವೆಂದೂ ಕೈಕೆ ದಶರಥನನ್ನು ಸಮಾಧಾನಗೊಳಿಸಲು ಪ್ರಯತ್ನಿಸುತ್ತಾಳೆ. " ಕೈಕೆಯಾಡುವ ಈ ನುಡಿಗಳೊಂದೊಂದು ಅವಳ ಮನದಾಳದಿಂದ ಪತಿಬಗೆಗಿನ ಸಹಜ ಪ್ರೀತಿ ಕಾಳಜಿಯೊಳಗಿಂದ ಮೂಡಿಬಂದ ಪ್ರಾಮಾಣಿಕ ಅನಿಸಿಕೆಗಳು. ತನ್ನ ಬೇಡಿಕೆ ಪತಿಯನ್ನು ಇಂಥ ಅಸಹನೀಯ ಕರುಣಾಜನಕ ಸ್ಥಿತಿಗೆ ಕೊನೆಗೆ ಮರಣದಂಚಿಗೆ ನೂಕುವುದೆಂದು ಅವಳು ಭಾವಿಸಿರಲಿಲ್ಲ. ಆ ಭಾವನೆ ಮೂಡಿದ ಕೂಡಲೇ ಅವಳ ಸತಿತ್ವ ಎಚ್ಚರಗೊಳ್ಳುತ್ತದೆ. ತಾತ್ಕಲಿಕವಾಗಿ ಸ್ಫೋಟಗೊಂಡಿದ್ದ ತಾಮಸ ಪ್ರವೃತ್ತಿಯನ್ನು ಅವಳಂತರಂಗದ ಸ್ಥಾಯಿಪ್ರವೃತ್ತಿಯಾದ ಸಾತ್ವಿಕತೆ ತುಳಿದು ನಿಲ್ಲಿಸುತ್ತದೆ. ಆದರೆ ಅವಳು ಬಯಸಿದ ಪರಿಣಾಮ ಒಂದು: ಆದ ಪರಿಣಾನ ಮತ್ತೊಂದು. ಕವಿಯೇ ಹೇಳುವಂತೆ ರಾಮನ ವನಗಮನದಿಂದ ಯಾರ ಯಾರ ಪಾಪ ತಾಪ ಶಾಪಗಳು ಅರಿಬೇಕಾಗಿತ್ತೋ. ಯಾವ ಅಮಂಗಳ ಮಂಗಳಮಯವಾಗಬೇಕಿತ್ತೋ? ಕಂಬಂಧ ಮೊರೆಯೊ? ಶಬರಿಯ ಕರೆಯೊ? ರಾಮನ ಆತ್ಮಾಭಿಲಾಷೆಯೋ? ಪಾತ್ರಗಳ ಅಂತರಾಳದಲ್ಲಿ ತನ್ನ ಸೂತ್ರಗಳನ್ನು ನಡೆಯಿಸುವ ಅಂತರ್ಯಾಮಿ ಶಕ್ತಿಯ ವಿಲಾಸವೋ? ಕೈಕೆಯಾಡಿದ ಅಂತಃಕರಣದ ವ್ಯಂಗ್ಯಾಸ್ತ್ರದಂತೆ ಭಾಸವಾಗಿ ಅವನಿಗೆ ಮರ್ಮವೇಧಕವಾಗಿ ಬಿಟ್ಟಿತು".[೨೦] ದಶರಥನು ಕೋಪಗೊಂಡು ಕೈಕೆಗೆ ತನ್ನನ್ನು ವಚನಭ್ರಷ್ಟನನ್ನಾ-

----------

೨೦. ಅದೇ. ಪು. ೨೮೦

ಗಿಸಿ ಹೆಚ್ಚಿನ ಪಾಪಕ್ಕೆ ಗುರಿಯಾಗುವಂತೆ ಮಾಡುವೆಯಾ? ಎಂದು ಕಟುವಾಗಿ ನಿಂದಿಸಿದಾಗ ಕೈಕೆಯು ಕೆರಳಿದ ಹುಲಿಯಂತೆ ವರ್ತಿಸಿ ತನ್ನ ಪಟ್ಟನ್ನು ಬಿಗಿಗೊಳಿಸಿ ಹೃದಯವನ್ನು ಕಠೋರಗೊಳಿಸಿಕೊಳ್ಳುತ್ತಾಳೆ. ನಿಷ್ಕರಿಣಿಯಂತೆ ವರ್ತಿಸಿ ದಶರಥನ ಮನಸ್ಸು ಮತ್ತಷ್ಟು ಕುಗ್ಗಲು ಕಾರಣಳಾಗುತ್ತಾಳೆ. ಕೈಕೆಗೆ ವಿಧಿಸಂಚಿಗೆ ಒಳಗಾಗಿ ಆಡುವ ಮಾತುಗಳು ದಸರಥನ ಹೃದಯವನ್ನು ಇರಿಯುತ್ತವೆ.ಸೌಂದರ್ಯವತಿ ಕೈಕೆಯು ವಿಧಿಯ ಕೈಯಲ್ಲಿ ಝಳಪಿಸುವ ಚಿನ್ನದ ಖಡ್ಗವಾಗಿ ದಶರಥನನ್ನೆ ಆಹುತಿ ತೆಗೆದುಕೊಳ್ಳಲು ಹಂಬಲಿಸುತ್ತದೆ.

" ಲೇಸಾಯ್ತು, ಲೇಸಾಯ್ತು! ತಪ್ಪು
ನಿನ್ನಾದಾಗಿರಲೇತಕೆನ್ನ ನೀಪರಿ ಬಯ್ದು
ವರ್ತಿಸುತಿರ್ಪೆ ಸಾಮಾನ್ಯನೊಲ್,ವನ್ಯನೊಲ್
ಕೋಸಲಾಧೀಶ! ನೀನೆಯೆ ಮೆಚ್ಚಿಕೊಟ್ಟೆ ನನಗಾ
ವರಗಳಂ. ನೀನೊಪ್ಪಿ ಕೇಳೆಂದೊಡಾಂ ಕೇಳ್ದೆನಯ್
ನಿನ್ನ ಗೋಳಿಡುವುದಂ ಕಂಡು ಕೊಳ್ಳೆಂದೆನಾ
ದುರ್ದಾನಮಂ! ಬರಿದೆ ನನ್ನನೇತಕೆ ಬಯ್ವೆ?

[ಶ್ರೀರಾಮಾಯಣದರ್ಶನಂ, ಪು-೭೫]

ಮಹಾಕಾವ್ಯದಲ್ಲಿಯೇ ಕೈಕೆಯು ಸಿಟ್ಟನಿಂದ ಹೂಂಕರಿಸಿರುವುದು ಇದೊಂದೇ ಸಂದರ್ಭಸಿಗುವುದು. ಕೈಕೆ ನಿರ್ಮಲ ಪ್ರೇಮಮಯಿ, ಸಾಧ್ವಿ. ಈಕೆಯ ಬಾಯಿಂದ ಬಂದ ಈ ಮಾತುಗಳು ಆಶ್ಚರ್ಯವೆನಿಸುತ್ತವೆ. ತನ್ನ ಕೈಹಿಡಿದ ಪತಿಗೇ ತಪ್ಪುನಿನ್ನಾದಾಗಿರುವಾಗ ನನ್ನನೇಕೆ ಬಯ್ವೆ? ಎಂದು ಪ್ರಶ್ನಿಸುವ ಕೈಕೆಯು ಭರತನನ್ನು ಉದ್ದೇಶಪೂರ್ವಕವಾಗಿಯೇ ಮಾವನ ಮನೆಗೆ ಕಳುಹಿಸಿ ರಾಮನಿಗೆ ಪಟ್ಟಕಟ್ಟುವ ಹುನ್ನಾರ ಮಾಡಿದ್ದೀರೆಂದು ಕಠೋರವಾಗಿ ನುಡಿಯುತ್ತಾಳೆ. ಈ ಸಂದರ್ಭವನ್ನು ಬಿಟ್ಟರೆ ಮುಂದಿನ ಯಾವ ಸಂದರ್ಭದಲ್ಲಿಯೂ ಕೈಕೆಯ ಬಾಯಿಂದ ಇಷ್ಟು ಕಠೋರವಾದ ಮಾತುಗಳು ಬಂದಿಲ್ಲ. ವಾಲ್ಮೀಕಿಯ ಕೈಕೆಯು ರಾನನ್ನು ಕರೆಸಿ ಕಠೋರವಾಗಿಯೇ ವರ್ತಿಸಿಬಿಡುತ್ತಾಳೆ. ಆದರೆ ಕುವೆಂಪು ಸೃಷ್ಟಿಸಿರುವ ಕೈಕೆ ರಾಮನೊಂದಿಗೆ ಎಂದೂ ಕಠೋರವಾಗಿ ವರ್ತಿಸುವುದಿಲ್ಲ. ಕುವೆಂಪು ಮುಂದಿನ ಎಲ್ಲ ಕೆಲಸಗಳನ್ನೂ ಮಂಥರೆಯ ಮೂಲಕ ಮಾಡಿಸಿದ್ದಾರೆ. ಕೈಕೆಯು ಎಲ್ಲ ತಿರಸ್ಕಾರ ನಿಂದನೆಗೆ ಕಾರಣವಾಗುತ್ತಾಳೆ. " ಶ್ರೀರಾಮನನ್ನು ಅಲ್ಲಿಗೆ ಕರೆತರಲು ಆಜ್ಞೆ ಮಾಡುವವಳಲ್ಲ ಕೈಕೆ, ಆತನನ್ನು ತಾನಾಗಿಯೇ ಹೋಗಿ ಕರೆತರುವವಳು ಮಂಥರೆ. ಮೂರ್ಚಿತ ಪತಿಯ ಸ್ಥಿತಿಗೆ ತಾನು ಕಾರಣಳಾದನೆಂದು ಅಪರಾಧಿ ಪ್ರಜ್ಞೆಯಿಂದ ಎರಡು ಕೈಗಳಿಂದಲೂ ಮುಖಮುಚ್ಚಿ ಅಳುತ್ತಾ ಕುಳಿತವಳು, ಆ ಸಂದರ್ಭಕ್ಕೆ ಕಾರಣವನ್ನು ಶ್ರೀರಾಮನು ಕೇಳಿದಾಗ ಹೇಳಲಾರದೇ ಗದ್ಗದಿಸಿದವಳು ಕೈಕೆ: ವಿಷಯ ನಿವೇದನೆ ಮಾಡುವವಳು ಮಂಥರೆ. ಹೆತ್ತ ತಂದೆ ಪ್ರೀತಿಯ ಪುತ್ರನಿಗೆ ಅಡವಿಗೈದುವ ನಿರೂಪವನ್ನು ಕೊಡುವುದುಂಟೇ, ಅವನ ಇಂಗಿತವರಿತು ತಾನಾಗಿಯೇ ನಡೆಯುವುದೊಳಿತೆಂದು ಸೂಚಿಸುವ ಕಠೋರೆಯಲ್ಲ ಕೈಕೆ: ಹಾಗೆ ಮಾಡಿದವಳು ಮಂಥರೆ. ಕಡೆಗೆ ಸಡಗರದಿಂದ ರಾಮಲಕ್ಷ್ಮಣಸೀತೆಯರಿಗೆ ನಾರು ಮಡಿಯನ್ನು ತಾನಾಗಿಯೇ ತಮದು ಕೊಟ್ಟ ನಿರ್ದಯಿಯಲ್ಲ ಕೈಕೆ: ಹಾಗೆ ಮಾಡಿದವಳೂ ಸಹ ಮಂಥರೆಯೇ".[೨೨] ಕೈಕೆಯು ಎನನ್ನೂ ಮಾಡದಿರುವುದರಿಂದ ಕೈಕೆ ನಿಷ್ಕರುಣೆಯಲ್ಲವೆಂದು ತಿಳಿಯುತ್ತದೆ. ಕೈಕೆಯನ್ನು ಕುವೆಂಪು ದೋಷಗಳಿಂದ ಮುಕ್ತಗೊಳಿಸುವಲ್ಲಿ ಯಶಸ್ವಿಯಾಗಿದ್ದಾರೆ.

----------

೨೨. ಅದೇ. ಪು. ೨೮೧,೮೨

ಶ್ರೀರಾಮನು ಕೈಕೆಯನ್ನು ನಿಮ್ಮ ಆಸೆ ಕೈಗೂಡುವುದೆಂದು ಸಂತೈಸುತ್ತಾನೆ. ಭರತನನ್ನು ವಂಚಿಸುವ ಬುದ್ಧಿಯಿಲ್ಲವೆಂದು ಹಾಗೂ 'ತನ್ನ ಬಯಕೆಯು ನಿಮ್ಮ ಮೂಲಕ ಈಡೇರುತ್ತಿದೆ' ಎಂದು 'ನೀನ್ ಕೇಳ್ದುದಾ ವರಂ ನಾನೇ ಬೇಡಿದುದಲ್ತೆ?'[೨೩] ಎಂದು ಹೇಳುತ್ತಾನೆ. ರಾಮನನ್ನು ಕಂಡ ಭರತನಂತೆಯೇ ಭಾವಿಸಿದ್ದ ಕೈಕೆಗೆ ಮೌನವೇ ಆಧಾರವಾಗುತ್ತದೆ.

"ನಿನ್ನಾಸೆ ಸಾರುತ್ತಿದೆ ನನ್ನ ಕಲ್ಯಾಣಮಂ!
ನೀಂ ತಾಯ್ ದಿಟಂ!"

[ಶ್ರೀರಾಮಾಯಣದರ್ಶನಂ, ಪು–೭೭]

ಶ್ರೀರಾಮನ ಬಾಯಿಂದ ಬರುವ ಈ ಮಾತುಗಳು ಕೈಕೆಯ ಮನದಲ್ಲಿ ಯಾವ ಅಲೆಯನ್ನು ಎಬ್ಬಿಸಿದ್ದವೆಂದು ತಿಳಿಯುವುದಿಲ್ಲ. ಕೈಕೆಯು ಶ್ರೀರಾಮನ ಮನದ ಬಯಕೆಯನ್ನು ಅರಿತು ವರಕೇಳಿರುವುದರಿಂದ ಆಕೆ ನಿಜವಾದ ತಾಯಿ ಎಂದು ರಾಮನೇ ಮನಃಪೂರ್ವಕವಾಗಿ ಒಪ್ಪಿಕೊಳ್ಳುವುದರಂದಲೇ ಕೈಕೆಯ ಮೇಲಿರುವ ಕಳಂಕವೂ ಕೊಂಚಮಟ್ಟಿಗೆ ಕಡಿಮೆಯಾಗುತ್ತದೆ.

ರಾಮನು ಅಯೋಧ್ಯೆಯಿಂದ ನಿರ್ಗಮಿಸಿದ ಮೇಲೆ ದಶರಥ ಮಹಾರಾಜನ ಸ್ಥಿತಿಯು ಚಿಂತಾಜನಕವಾಗಿ ಆತನು ಮತ್ತೆ ಮತ್ತೆ ಮೂರ್ಚೆಯಲ್ಲಿ ಬೀಳುತ್ತಾನೆ. ಉಪಚರಿಸಲು ಮುಂದಾಗುವಂಥ ಕೈಕೆಗೆ ಸಿಗುವುದು ದಶರಥನ ಬೈಗುಳ ಮತ್ತು ಉಗುಳು.

" ಬಳಿಸಾರದಿರ್, ಪಾಪಿ!
ಕಣ್ಬೊಲದೊಳಿರದೆ ಸಾಯ್! ತೊಲಗು! ನೀನಿನ್ನೆನಗೆ
ಸತಿಯಲ್ಲ. ನಿನಗಾಂ ಪತಿಯುಮಲ್ಲ, ತರ್ಪಣಂ
ಕೊಟ್ಟೆನಿದೊ ನೀರೆಳ್ಳು ಕೂಳ್!"

[ಶ್ರೀರಾಮಾಯಣದರ್ಶನಂ, ಪು–೭೧]

ಎನ್ನುತ್ತಾ ಧೂಳನ್ನು ಕೈಯಿಂದ ಬಾಚಿ ಅವಳೆಡೆಗೆ ತೂರುತ್ತಾನೆ. ಬಯಲನ್ನು ನೋಡಿ ಕೈಕೆಯನ್ನು ಕಂಡಂತೆ ಉಗಿಯುತ್ತಾನೆ. ಕೈಕೆಯನ್ನು ಕರೆಸಿ ಹರಿವಾಣವನ್ನು ಆಕೆಯ ಮುಖದ ಮೇಲೆ ಎಸೆಯುತ್ತಾನೆ. ಪಾಪಿ ಪಿಶಾಚಿನಿ ಎಂದು, ನನ್ನಿಂದ ದೂರವಾಗಿ ಸಾಯಿ ಎಂದು ಸಂಬಂಧವೇ ಬೇಡವೆಂದು ತರ್ಪಣವನ್ನು ಕೊಟ್ಟೆನೆಂದು ಹೇಳುತ್ತಾನೆ. ಈ ಎಲ್ಲವನ್ನೂ ಕೈಕೆ ಮೌನವಾಗಿಯೇ ಸಹಿಸುತ್ತಾಳೆ. ಕೈಕೆಯು ದಶರಥನ ಮರಣದಿಂದ ನಿರ್ಜನೆ ನಿರಾಭರಣೆಯಾಗಿ ಕುಗ್ಗಿದ ಮನಸ್ಕಳಾಗಿ ಅಯೋಧ್ಯಾ ಜನರ ನಿಂದನೆಯನ್ನುಣ್ಣುತ್ತಾ ಕಂದನಿಗಾಗಿ ಕಾತರಿಸುತ್ತಾಳೆ. ಕಂದನನ್ನು ಅಪ್ಪಿ ಮುದ್ದಾಡುವ ತಾಯಿಯು ಕಂದನನ್ನೇ ಕ್ಷಮೆ ಕೇಳುವ ಮಟ್ಟಕ್ಕೆ, ದಯೆಯಾಚಿಸುವ ಮಟ್ಟಕ್ಕೆ ಇಳಿಯುತ್ತಾಳೆ. 'ಮನ್ನಿಸೆನ್ನನ್ ಮಗನೆ: ಪಾಪಿಯೆನ್!', 'ವರನೆನ್ನ ಭಾಗಕ್ಕೆ ಶಾಪವಾದುದೊ ಕಂದ'[೨೪] ಎಂದು ನೈಜಸಂಗತಿಯನ್ನು ಕೈಕೆ ಒಪ್ಪಿಕೊಂಡು ಉನ್ನತಿಯನ್ನು ಬಯಸುತ್ತಾಳೆ.

----------

೨೩. ಕುವೆಂಪು, ಶ್ರೀರಾಮಾಯಣದರ್ಶನಂ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು ೨, ಎರಡನೇ ಆವೃತ್ತಿ೨೦೦೪, ಪು.೭೭.
೨೪. ಅದೇ. ಪು.೧೦೯.

ಭಾಸ ಮಹಾಕವಿಯು ಪ್ರತಿಮಾ ನಾಟಕದಲ್ಲಿ ' ಪ್ರತಿಮಾಗೃಹ ' ದ ಮೂಲಕ ಭರತನಿಗೆ ದಶರಥನ ಸಾವಿನ ಸುದ್ದಿಯನ್ನು ತಿಳಿಯುವಂತೆ ಚಿತ್ರಿಸಿದ್ದಾನೆ. ಆದರೆ ಈ ಕಾವ್ಯದಲ್ಲಿ ಕುವೆಂಪು ಅವರು ಕೈಕೆಯ ಮೂಲಕವೇ ಭರತನಿಗೆ ಈ ವಿಷಯವು ತಿಳಿಯುವಂತೆ ಚಿತ್ರಿಸಿದ್ದಾರೆ. ಕೈಕೆಯು ನಿರೀಕ್ಷಿಸದಿದ್ದ ಪರಿಣಾಮಗಳು ಭರತನ ಮೇಲಾಗುತ್ತವೆ. ಭರತನು ಹಾವು ಮುಟ್ಟಿದವನಂತೆ ದೂರಸರಿಯುತ್ತಾನೆ, ತಾಯಿಯ ಮಾತುಗಳಿಂದ ಜುಗುಪ್ಸೆ, ತಿರಸ್ಕಾರಗಳು ಉಂಟಾಗಿ ಭರತನಾಡುವಾ ಮಾತುಗಳು ಕೈಕೆಯ ಮನವನ್ನು ಇರಿಯುತ್ತವೆ.

"ಪೆತ್ತಂದೆ ಕೊರಳಂ ಮುರಿಯದೇಕೆ
ಕಾಯ್ದೆ ನೀನೀ ಪೊಳ್ತುಬರೆಗಂ? ಕುಮಾರನಂ
ಪಡೆದುಂ ನಿನಗೆ ಬಂಜೆತನಮೊದವಿದಂತಾಯ್ತೆ,
ಪೇಳ್ ಭರತಮಾತೆ? ನಿನಗನ್ಯನೆ ರಘುದ್ವಹಂ?
ರಾಮನಂ, ದಶರಥಪ್ರಾಣನಂ, ಕಾನನಕೆ
ನೂಂಕಿ ವೈಧವ್ಯದಿವಮಂ ಪಡೆದನೀನಲ್ತೆ
ಧರೆಗೆ ಮೇಣ್‌ಮಗನಾಥತ್ವಮಂ? ಬದುಕೆನಗೆ
ಸಾವಿಗೆಣೆ ಅಣ್ಣದೇವನನುಳಿದು: ಪಾಳ್ ಮಣ್ಣು ಈ
ಕೀಳ್ ನೆಲದಸಿರಿ!"

[ಶ್ರೀರಾಮಾಯಣದರ್ಶನಂ, ಪು.೧೧೧,೧೧೨]

ಕೈಕೆಯು ತಾನು ಹೆತ್ತ ಮಗನ ಮನದ ಆಸೆಯನ್ನು ತಿಳಿದಿರಲಿಲ್ಲವೆಂಬುದೇ ಆಶ್ಚರ್ಯದ ಸಂಗತಿ. ಕುಮಾರನನ್ನು ಪಡೆದೂ ರಾಮನನ್ನು ನಿರಾಕರಿಸಿರುವುದರಿಂದ ನಿನಗೆ ಬಂಜೆರತನವೇ ಒದಗಿದಂತಾಯಿತು; ರಾಮನು ದಶರಥನ ಪ್ರಾಣವಾಗಿದ್ದ ಆತನನ್ನು ಕಾಡಿಗೆ ಕಳುಹಿಸಿ ವೈಧವ್ಯವನ್ನು ಪಡೆದೆ ಎಂದು ಅಣ್ಣನಿಲ್ಲದ ಈ ಧರೆಯು ಪಳ್ ಮಣ್ಣು ಈ ಸಿರಿ ತನಗೆ ಬೇಡವೆಂದು ಎಲ್ಲವನ್ನು ಬಿಟ್ಟು ರಾಮನನ್ನು ಹಡುಕಿ ಕರೆತರಲು ಮುಂದಾಗುತ್ತಾನೆ. ಎಲ್ಲರ ನಿಂದನೆ ತಿರಸ್ಕಾರಗಳನ್ನು ಸಹಿಸಿ ನುಂಗಿಕೊಂಡು ಭರತನಿಗಾಗಿ ಹಂಬಲಿಸಿದ ಕೈಕೆ ಭರತನ ತಿರಸ್ಕಾರದ ನಡಿಗಳನ್ನು ತಡೆಯಲಾರದೇ ಭರತನ ಕಾಲಿಡಿದು ತನ್ನನ್ನು ಕೈಬಿಡಬಾರದೆಂದು ಎಲ್ಲರೂ ತಿರಸ್ಕರಿಸಿದರೂ ನೀನು ನನ್ನನ್ನು ಶೂನ್ಯಕ್ಕೆ ನೂಕಬೇಡೆಂದೂ ಗೋಗರೆಯುತ್ತಾಳೆ. ತಾಯಿಯ ದೈನ್ಯಸ್ಥಿತಿಗೆ ಮರುಗಿ ಭರತನು ತಾಯಿಯ ಮೇಲಿನ ಅಪವಾದ ನಿವಾರಣೆಗೆ ಪಣತೊಟ್ಟು ನಿಲ್ಲುತ್ತಾನೆ. ಕೌಸಲ್ಯೆಯು ರಾಮನಂತೆ ಭರತನನ್ನು ಸ್ವೀಕರಿಸಿದಾಗ ನಾಚುತ್ತಾನೆ: ತಪ್ಪಿದಸ್ಥನಂತಾಗುವುದನ್ನು ಕಂಡ ತಾಯಿ ಕೌಸಲ್ಯೆ ಕೈಕೆಯದೇನೂ ತಪ್ಪಿಲ್ಲವೆಂದು,ದುರುಳವಿಧಿಯ ಆಟವೆಂದು ಹೇಳಿ
ಸಂತೈಸುವುದನ್ನು ಕಾಣಬಹುದು.

ಭರತನ ಕಟು ತಿರಸ್ಕಾರದಿಂದ ಸಿಡಿಲೆರಗಿದಂತಾದ ಕೈಕೆಯು ಮಗನ ಕಾಲ್ವಿಡಿದು ತನ್ನನ್ನು ದೂರಮಾಡಬಾರದೆಂದು ಬೇಡುತ್ತಾಳೆ. ತಾಯಿಯ ದೀನಾವಸ್ಥೆಯನ್ನು ಕಂಡ ಭರತನು ರಾಮನ ತಾಯಿಗೆ ಕೇಡುಂಟೆ? ಎಂದು ಸಮಾಧಾನಪಡಿಸುತ್ತಾನೆ. ತನ್ನ ತಾಯಿಗಂಟಿದ ಕಳಂಕವನ್ನು ತಾನೇ ತೊಳೆಯಲು ಮುಂದಾಗುತ್ತಾನೆ. ತಾಯಿಯ ದುಃಖವನ್ನು ಹೋಗಲಾಡಿಸಿ ಸಮಾಧನ ಪಡಿಸಲು ಭರತಾಡುವ ಮಾತುಗಳು ಆತನ ಹಿರಿತನಕ್ಕೆ ಸಾಕ್ಷಿಯಾಗಿ ಮೂಡಿಬಂದಿವೆ:

" ಪಾಪಿಗುದ್ಧಾರಮಿಹುದೌ
ಸೃಷ್ಟಿಯ ಮಹದ್‌ವ್ಯೂಹ ರಚನೆಯೊಳ್, ಕೇಳ್, ತಾಯಿ:
ಬೆರಳಿಚದ ಕೂರ್‍ಮೊನೆಯ ಮಿಡಿವ ಹಿಂಸೆಗೆ ತಂತಿತಾಂ
ಬೀಣೆಯಿಂಚರವೀಯುವಂತೆ, ನೀನುಗುರಾಗಲಾ
ವೈಣಿಕ ವಿಧಿಯ ಕೈಗೆ, ಪೂಣ್ಮೆದತ್ತಿಂಪಾಯ್ತು ಮೇಣ್
ಭಗವದ್ ರಸಧಿಯಾಯ್ತು ರಾಮಾಯಣ ಬೃಹದ್‌ಗೀತೆ!"

[ಶ್ರೀರಾಮಾಯಣದರ್ಶನಂ, ಪು-೧೧೩]

ಎದೆಯ ಕುದಿಬೇನೆಯಿಂದ ಮನಸ್ಸು ಮಡಿಯಾಯಿತು. ಪಾಪವು ಪಶ್ಚಾತ್ತಾಪದಿಂದ ಸೀದು ಹೋಗುತ್ತದೆ. ರಾಮನ ತಮ್ಮನ ತಾಯಿಗೆ ಎಂದೂ ಕೇಡಾಗದೆಂದು ಸಂತೈಸಿ 'ಪಾಪಿಗೂ ಸೃಷ್ಟಿಯ ರಚನೆಯಲ್ಲಿ ಉದ್ಧಾರವಿದೆ' ಎಂದೂ, ಉಗುರುಮೊನೆಯಿಂದ ಮಿಡಿದರೂ ಇಂಪಾದ ದನಿಕೊಡುವ ವೀಣೆಯಂತೆ ವಿಧಿ ಎಂಬ ವೈಣಿಕನ ಕೈಗೆ ನೀನು ಮಿಡಿವ ಕೂರ್‍ಮನೆಯಾದರೂ ಅದರಿಂದ ರಾಮಾಯಣ ಬೃಹದ್ ಗೀತೆ ಹೊರಹೊಮ್ಮಿ ಧರೆಗಿಂಪಾಗಿ ಭಗವದ್ ಸಾಗರ ನಿರ್ಮಾಣವಾಯಿತೆಂದು ತಾಯನ್ನು ಸಮಾಧಾನಗೊಳಿಸುತ್ತಾನೆ.

ಭರತನು ರಾಮನನ್ನು ಕರೆತರಲು ಅರಣ್ಯಕ್ಕೆ ಹೋದಾಗ ಕೌಸಲ್ಯೆ ಸುಮಿತ್ರೆಯ ಜೊತೆ ಕೈಕೆಯೂ ಹೋಗುತ್ತಾಳೆ. ಆಕೆಯು ರಾಮನನ್ನು ನೋಡಿದಾಗ ತಪ್ಪಿತಸ್ಥಳಂತೆ ದೂರನಿಲ್ಲುತ್ತಾಳೆ. ರಾಮನು ಕೌಸಲ್ಯೆ ಸುಮಿತ್ರೆಗೆ ವಂದಿಸಿದ ನಂತರ ಕೈಕೆಗೆ ನಮಸ್ಕರಿಸುತ್ತಾನೆ. ಆ ಸಂದರ್ಭದಲ್ಲಿ ಕೈಕೆ ರಾಮ ಪಾದಗಳ ಮೇಲೆ ಕುಸಿದು ತನ್ನ ತಪ್ಪಿಗೆ ಪ್ರಾಯಶ್ಚಿತ್ತವನ್ನು ಬಯಸಿದಂತೆ ಮೌನವಾಗಿ ರೋಧಿಸುತ್ತಾಳೆ. ರಾಮ ಆಕೆಯನ್ನು ಪ್ರೀತಿಯಿಂದಲೇ ಹಿಡಿದೆತ್ತಿ ಸಮಾಧಾನಪಡಿಸುತ್ತಾನೆ.

ರಾಮನ ಪ್ರೇಮಹಸ್ತದ ಸ್ಪರ್ಶದಿಂದ ಕೈಕೆಯು ಸ್ವಲ್ಪಮಟ್ಟಿನ ಶಾಂತತೆಯನ್ನು ಮನಸ್ಸಿಗೆ ತಂದುಕೊಳ್ಳುತ್ತಾಳೆ. ಆದರೂ ತನ್ನ ತಪ್ಪಿಗೆ ಸದಾ ಮರುಗಿ ಜೀವನಪರ್ಯಂತ ಅಯೋಧ್ಯೆಯಲ್ಲಿದ್ದರೂ ವನವಾಸವನ್ನು ಅನುಭವಿಸುವ ಸ್ಥಿತಿ ಕೈಕೆಯದಾಗುತ್ತದೆ. ಅಯೋಧ್ಯೆಗೆ ರಾಮನನ್ನು ಕರೆದುಕೊಂಡು ಹೋಗಲು ಬಮದ ತಾಯಂದಿರೂ, ಸಹೋದರರೂ, ಪುರಜನರನ್ನು ಶ್ರೀರಾಮನು ಕೊಡು ಸಂತೋಷಗೊಂಡರೂ ಅವರೆಲ್ಲರ ದುಃಖಕ್ಕೆ ಮಿಡಿದು, ನಾನು ನಿಮ್ಮೆಲ್ಲರ ಕರುಣೆಯ ಶಿಶು, ನಿಮ್ಮೆಲ್ಲರ ಆರ್ಶೀವಾದದಿಂದ ನಾನು ಸುಕ್ಷೇಮಿ, ತಂದೆಯ ಮರಣ, ತಾಯಿಯ ಶೋಕಕ್ಕೆ ಭರತನ ಪ್ರೇಮಕ್ಕೆ ಮಣಿದು ಎಲ್ಲರನ್ನು ಸಮಾಧಾನಪಡಿಸಲು ನುಡಿಯುವ ವಚನಗಳು ಕೈಕೆಯ ಕಳಂಕವನ್ನು ತೊಳೆದು ಪರಿಶುದ್ಧತೆಯನ್ನು ಲೋಕಕ್ಕೆ ಸಾರುವಂತಿವೆ:

ಕುಬ್ಜೆ ಮಂಥರೆ ಬರಿಯ ಹುಲುನೆವಂ: ಮೂಡುವುದೇ
ಲೋಕಲಾವಣ್ಯನಿಧಿ ಮಾತೆ ಕೈಕೆಯ ಮನದಿ
ಕುಚರ ಬುದ್ಧಿಯ ಕುರೂಪಂ? ಪೊಣ್ಮುವುದೆವಿಕೃತಿ
ಸೌಂದರ್ಯದಿಂ! ಚೆಲ್ವಿನಭಿಲಾಷೆ ತಾನೇಗಳುಂ
ಚೆಲ್ವಿಂಗೆತಾಯ್. ಧರ್ಮದೇವತಾಕ್ರೌರ್ಯಕ್ಕೆ
ಕರುಣೆಯಲ್ಲದೆ ಬೇರೆ ಗರಿಯಿಹುದೆ? ಕಿರಿಯ ತಾಯ್
ನಿಯತಿ ಹಸ್ತದೊಳೊಂದು ಕೈದುತಾಂ. ಕೀರ್ತಿಯಂ
ಮೇಣ್ ಜನಪ್ರೀತಿಯಂ ತೆತ್ತಾಕೆ ತಾಂ ಧನ್ಯೆ;
ದೇವ ಸನ್ಮಾನ್ಯೆ: ಮೆರೆವುದು ತುದಿಯೊಳನನ್ನಿ!"

[ಶ್ರೀರಾಮಾಯಣದರ್ಶನಂ, ಪು-೧೭೩]

ಮಂಥರೆ ಒಂದು ಹುಲುನೆವ, ಕೈಕೆ ಲಾವಣ್ಯನಿಧಿ, ಸೌಂದರ್ಯದಿಂದ ಕುರೂಪ ಹೊರಹೊಮ್ಮದು, ಧರ್ಮದೇವತೆ ನಡೆಸಿರುವ ಆಟಕ್ಕೆ ಕರುಣೆಯ ಗುರಿ ಇದೆ. ಕಿರಿಯ ತಾಯಿ ವಿಧಿಯ ಹಸ್ತದ ಆಯುಧವಾದರು. ಕೀರ್ತಿಯನ್ನು ಜನಪ್ರೀತಿಯನ್ನು ತನಗೆ ಒದಗಿಸಿದ ದೇವತೆ, ಸನ್ಮಾನ್ಯೆ. ಆ ಸತ್ಯವು ಮುಂದೆ ಮೆರೆಯುತ್ತದೆಂದು ಅಯೋಧ್ಯಾ ಜನರಿಗೆ ರಾಮನೇ ಹೇಳುವುದರಿಂದ ಕೈಕೆಯ ಮೇಲಿರುವ ಆಪಾದನೆಗಳು ದೂರವಾಗಿ ಕೈಕೆಯು ಲೋಕಪೂಜ್ಯಳಾಗುತ್ತಾಳೆ. "ಈ ಎಲ್ಲಾ ಮಾತುಗಳು ಸಂದರ್ಭಗಳು ಮೂಲದಲ್ಲಿ ಕೈಕೆಗಂಟಿದ ಕಳಂಕವನ್ನು ತೊಡೆಯುವ ಸಾಮರ್ಥ್ಯಹೊಂದಿರುವುದು ಮಾತ್ರವಲ್ಲ, ಆಕೆ ಎಲ್ಲರ ಆತ್ಮೋದ್ಧಾರಕ್ಕೆ ಕೀರ್ತಿವರ್ಧನಕ್ಕೆ ಮುಖ್ಯ ಮತ್ತು ಮೂಲಕಾರಣಳಾಗಿದ್ದಾಳೆ. ತನ್ನ ಲೌಕಿಕ ತೇಜವನ್ನು ಮುಸುಳಿಸಿಕೊಂಡು ಉಳಿದವರ ತೇಜಸ್ಸನ್ನು ಜಗದ್ ವಂದ್ಯವಾಗಿ ಪ್ರಕಾಶಿಸಿದ್ದಾಳೆ ಎಂಬುದನ್ನು ನಿರ್ವಿವಾದವಾಗಿ ಸಾಬೀತುಗೊಳಿಸುತ್ತದೆ. ಅತ್ಯಂತ ಸಂಕಟದ ಸಮಯದಲ್ಲಿ ಮಾನವ ಸಹಜ ದೌರ್ಬಲ್ಯದಿಂದ ಒಮ್ಮೊಮ್ಮೆ ರಾಮಲಕ್ಷ್ಮಣರು ಆಕೆಯ ಬಗ್ಗೆ ಒಂದೆರಡು ನಿಂದೆಯ ನುಡಿಗಳನ್ನಾಡಿದರೂ, ಅವರ ಮನದಲ್ಲಿ ಸ್ಥಾಯಿಯಾಗಿರುವುದು ಆಕೆಯನ್ನು ಕುರಿತಾದ ಗೌರವ ಮತ್ತು ಕೃತಜ್ಞತಾ ಭಾವನೆಗಳು ಮಾತ್ರ".[೨೩] ರಾಮನು ಕೌಸಲ್ಯೆಯಂತೆ ಕೈಕೆಯನ್ನು ಗೌರವಿಸುತ್ತಾನೆ. ಆಕೆಯೆ ತನ್ನ ಮನಸ್ಸನ್ನು ಅರಿತು ನಡೆದ ನಿಜವಾದ ತಾಯಿ, ಆಕೆಯಿಂದ ನನಗೆ ಕೀರ್ತಿ, ಮನ್ನಣೆ ದೊರೆಯಿತ್ತೆಂದು ಪೂಜಿಸುತ್ತಾನೆ. ಹದಿನಾಲ್ಕು ವರ್ಷ ಚಿಂತೆಯ ಅಗ್ನಿಯಲ್ಲಿ ಬೆಂದವಳು ಕೈಕೆ. ರಾಮನಿಲ್ಲದ ಅಯೋಧ್ಯೆ, ತಪೋನಿರತನಾಗಿರುವ ಭರತ, ತಪಸ್ವಿನಿಯರಂತಿರುವ ಸೊಸೆಯರು, ಎಲ್ಲಕ್ಕೂ ತಾನೇ ಕಾರಣಳೆಂದು ಬೇಯುವ ಮನಸ್ಸಿನೊಂದಿಗೆ ಜೀವ ಹಿಡಿದಿರುತ್ತಾಳೆ. ಕೈಕೆಯ ಈ ಸ್ಥಿತಿಯ ಬಗ್ಗೆ ತಿಳಿಯುವುದು ಸೀತೆ, ರಾಮಲಕ್ಷ್ಮಣರು ಅಯೋಧ್ಯೆಗೆ ಮರಳುತ್ತಿದ್ದಾರೆಂದು: ಎಲ್ಲರೂ ಅವರ ಸ್ವಾಗತಕ್ಕೆ ಅಣಿಯಾಗುತ್ತಿದ್ದ ಸಂದರ್ಭದಲ್ಲಿಯೇ. ಕೌಸಲ್ಯೆಯೇ ಕೈಕೆಯನ್ನು ನಂದಿಗ್ರಾಮಕ್ಕೆ ಕರೆದೊಯ್ಯುವ ಸನ್ನಾಹದಲ್ಲಿದಾರೆಂದು ಊರ್ಮಿಳೆಗೆ ತಿಳಿಸುವ ಸುಮಿತ್ರೆ ಆಡುವ ಮಾತುಗಳು ಧ್ವನಿಪೂರ್ಣವಾಗಿವೆ:

" ಊರ್ಮಿಳೆ,ನಮ್ಮ ಸಂಕಟಕಿಂದು ಬಂದುದು
ವಿರಾಮಮಾ ಕೈಕೆಯ ಮನೋವ್ಯಥೆಗೆ ಪೇಳೆಂದು
ಬರ್ಪುದೊ ಪರಿಸಮಾಪ್ತಿ? ಬಾ ನಡೆವ ಮಾತೆಯಂ
ತಣಿಸಿ ಸಂತೈಸಿ ಕರೆದೊಯ್ವಮಾ ರಘುರಾಮ
ಮೇಣ್ ಭರತ ಸಂದರ್ಶನದ ಪುಣ್ಯದರ್ಶನಕೆ!"

[ಶ್ರೀರಾಮಾಯಣದರ್ಶನಂ, ಪು-೧೧೧-೧೧೨]

ಸುಮಿತ್ರೆಯು ನಮ್ಮ ಸಂಕಟಕೆ ಇಂದು ವಿರಾಮಬಿದ್ದಿದೆ,ಆದರೆ ಕೈಕೆಯ ವ್ಯಥೆಗೆ ಪರಿಸಮಾಪ್ತಿ ಎಂದಾಗುತ್ತದೆಯೋ? ಎಂದು ಊರ್ಮಿಳೆಗೆ ತಿಳಿಸಿ ಕೈಕೆಯನ್ನು ಭರತ- ರಾಮರ ಸಂದರ್ಶನಕ್ಕೆ ಕರೆದೊಯ್ಯಲು ಬರುತ್ತಾರೆ. ಕೃಶವಾದ ದೇಹ, ಮಲಿನ ವಸ್ತ್ರ, ಶೋಕದ ಶಿಲಾಪ್ರತಿಮೆಯಂತಿರುವ ಕೈಕೆಯನ್ನು ಕಂಡ ಊರ್ಮಿಳೆಯು ಆಕೆಯನ್ನು ಅಪ್ಪಿ ನಿಮ್ಮ ದುಃಖದ ಮೇರೆಯನ್ನು ನಾನು ಅರಿಯಲಾರೆ ಚಿಕ್ಕವಳು, ನಮಗಾಗಿ ನಿಮ್ಮ ಮಕ್ಕಳಿಗಾಗಿ ನಿಮ್ಮ ಹೃದಯ ತಾಪವನ್ನು ನಿವಾರಿಸಿಕೊಂಡು ನಮ್ಮನೆಲ್ಲ ಆಶೀರ್ವಾದಿಸಿ ಎಂದು ಬೇಡುತ್ತಾಳೆ. ಎಲ್ಲರೊಂದಿಗೆ ಕೈಕೆಯನ್ನು ನಂದಿಗ್ರಾಮಕ್ಕೆ ಕರೆದೊಯ್ಯುತ್ತಾಳೆ.

-----------

೨೩. ಕುವೆಂಪು, ಶ್ರೀರಾಮಾಯಣದರ್ಶನಂ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು ೨, ಎರಡನೇ ಆವೃತ್ತಿ೨೦೦೪, ಪು.೭೭.

ಕಾನನದಲ್ಲಿ ಪೂರ್ಣವಿಕಾಸವನ್ನು ಹೊಂದಿ, ಅಯೋಧ್ಯೆಗೆ ಹಿಂತಿರಿಗಿದ ಶ್ರೀರಾಮನನ್ನು ಕಂಡು ರಾಮಮಹಿಮೆಯ ವಿಕಾಸಕ್ಕೆ ಕಾರಣಳಾದೆನೆಂದು ಮಾನಸಪುತ್ರನಾದ ರಾಮನಲ್ಲಿಗೆ ನಡೆಯುತ್ತಾಳೆ ಕೈಕೆ:

"ಮುನ್ನಮಿರ್ದ್ದರ್ದೆಯ
ಪಾಪಭಾವದ ಬಾರಮನಿತುಂ ಕಳಲ್ದುವೋಲ್
ತನ್ನಾತ್ಮಕೊಯ್ಕನೆಯೆ ನವಪುಣ್ಯ ಚೇತನಂ
ಕಾಂತಿಬುಗ್ಗೆಯ ತೆರದಿ ಚಿಮ್ಮಿ ಭರತನತಾಯಿ
ಕೈಕೆ ರಾಮನ ಮಹಾಮಹಿಮೆಯ ವಿಕಾಸಕೆ
ತಾನೆ ಕಾರಣಳೆಂದು ಜನಮನಭ್ರಾಂತಿಯಿಂ
ಬಿಡಿತೆಗೊಂಡಾ ಕೈಕೆ ನಡೆದಳತ್ತಿ ಶಾಂತಿಯಿಂ
ಶ್ರೀರಾಮನೆಡೆಗೆ!"

[ಶ್ರೀರಾಮಾಯಣದರ್ಶನಂ, ಪು-೮೬೩]

ಎಲ್ಲ ಪಾಪಭಾವವನ್ನು ಕಳೆದುಕೊಂಡು ಹೊಸಪುಣ್ಯಗಳಿಸಿದ ಚೈತನ್ಯಮೂರ್ತಿಯಂತೆ, ಕಾಂತಿಯ ಬುಗ್ಗೆಚಿಮ್ಮಿ ರಾಮನ ಸಾಮಿಪ್ಯಕ್ಕೆ ಹಂಬಲಿಸಿ; ರಾಮನ ಮಹಾಮಹಿಮೆಯ ವಿಕಾಸಕ್ಕೆ ತಾನೇ ಕಾರಣಳೆಂದು ಶಾಂತಿಯಿಂದ ಬಳಿಸಾರಿದ ಕೈಕೆಗೆ ನಮಸ್ಕರಿಸಿದ ರಾಮನ ಆತ್ಮವನ್ನು ಹೆತ್ತವಳು ತಾನೆಂಬತೆ ಹರಿಸಿ ಆಶೀರ್ವಾದಿಸುತ್ತಾಳೆ ಕೈಕೆ. ವಾಲ್ಮೀಕಿ ನೀಡದಿದ್ದ ಮುಕ್ತಿ; ಕೈಕೆಗೆ ಕುವೆಂಪು ಅವರಿಂದ ದೊರೆತಿದೆ. ಕುವೆಂಪು ಕೈಕೆಯ ಮನೋವ್ಯಥೆಗೆ ಉತ್ತಮ ಮುಕ್ತಿಯನ್ನು ನೀಡಿದ್ದಾರೆ.ಕೈಕೆಯ ಪಾತ್ರವನ್ನು ಕಳಂಕರಹಿತ ಉದಾತ್ತ ಪಾತ್ರವನ್ನಾಗಿ ಮಾಡಿದ್ದಾರೆ.

**೪. ಸೀತೆ**

ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣಿನ ಪಾತಿವ್ರತ್ಯದ ಪ್ರತಿರೂಪವೇ ಸೀತೆ. ಈಕೆ ಭಾರತೀಯ ಸಂಸ್ಕೃತಿಯ ಎಲ್ಲ ಮಹಿಳೆಯರ ಆದರ್ಶ. ಸೀತೆ ಸಾಧ್ವಿ, ಪತಿಯನ್ನು ಅರಿತು ನಡೆಯುವ ಪತಿವ್ರತಾಶಿರೋಮಣಿ. ತಂದೆ ತಾಯಿಗೆ ಒಳ್ಳೆಯ ಮಗಳು,ಮಾವ ಅತ್ತೆಯಂದಿರ ಮುದ್ದಿನ ಸೊಸೆ, ಮಿಥಿಲೆ ಮತ್ತು ಅಯೋಧ್ಯಾ ಜನರ ಕಣ್ಮಣಿ. ಎಲ್ಲರೊಂದಿಗೆ ಅನ್ಯೋನ್ಯವಾಗಿ ವರ್ತಿಸುವ ಈಕೆ ಅಪ್ರಾಕೃತಳಾದ ಕಾರಣ ಶಿವಧನುಸ್ಸಿನ ಪಣದ ಮೂಲಕ ಶ್ರೀರಾಮನ್ನು ವರಿಸುತ್ತಾಳೆ. ರಾಮನ ವನವಾಸ ಪ್ರಾಪ್ತವಾದಾಗ ವನವಾಸಕ್ಕೆ ರಾಮನ ನೆರಳಿನಂತೆ ಹಿಂಬಾಲಿಸುತ್ತಾಳೆ. ರಾಮನ ಜೊತೆ ಇರುವುದರಿಂದ ಕಾಡೇ ಅಯೋಧ್ಯೆ ಎನಿಸುತ್ತದೆ. ಕಾಡುಮೇಡು ಅಲೆಯುವಾಗ ಋಷಿ ಪತ್ನಿಯರಿಂದ ಪತಿವ್ರತಾ ಧರ್ಮದ ಉಪದೇಶ ಪಡೆದಿರುವ ಈಕೆಯು ರಾವಣನು ಕದ್ದೊಯಿದಾಗ ತನ್ನ ಪಾತಿವ್ರತ್ಯವನ್ನು ಕಾಯ್ದುಕೊಂಡು ಲೋಕಪ್ರಸಿದ್ಧಳಾಗುತ್ತಾಳೆ. ವಾಲ್ಮೀಕಿ ಮಹರ್ಷಿಯು ರೂಪಿಸಿದ ಅನುಪಮಸುಂದರ ಪುಣ್ಯ ಕಲಾಕೃತಿಯಾದ ಸೀತೆಗೆ ಮತ್ತಷ್ಟು ಹೆಚ್ಚಿನಕುಸುರಿಯನ್ನು ನೀಡಿ ವ್ಯಕ್ತಿತ್ವವನ್ನು ಸಂವರ್ಧಿಸುವ ಮೂಲಕ ಕುವೆಂಪು ಉದಾತ್ತೀಕರಿಸಿ ಚಿತ್ರಸಿದ್ದಾರೆ. ರಾವಣನ ಮನಃಪರಿವರ್ತನೆಗೆ ಕಾರಣವಾದ ಸೀತೆಯು ಮುಂದೆ ರಾವಣನ ಮಾತೆಯ ಸ್ಥಾನ ಪಡೆದು ಆತನನ್ನು ಆಶಿರ್ವಾದಿಸುತ್ತಾಳೆಂದು ರಾವಣನಿಗೇ ದರ್ಶನಾನುಭವ ನೀಡುವ ಮೂಲಕ ರಾವಣನ ಪಾತ್ರವನ್ನು ಉದ್ಧಾರಮಾಡಿ ಆತ ಆತ್ಮವು ಪವಿತ್ರವಾಗುವಂತೆ ಮಾಡಿದ ಶಕ್ತಿದೇವತೆ ಸೀತಾಮಾತೆ. ಶ್ರೀರಾಮನ ಮೈಮನಸ್ಸಿನಲ್ಲಿ ಪ್ರವಹಿಸಿ ಎಲ್ಲ ವಿಜಯಗಳಿಗೆ ಕಾರಣವಾದ ಚಿತ್‌ಶಕ್ತಿ, ಸ್ಫೂರ್ತಿ ಸೀತೆ.

"ರಾಮಾಯಣ ದರ್ಶನದ ಸೀತೆ ಜನಕರಾಜನಿಗೆ ನೇಗಿಲಗೆರೆಯಲ್ಲಿ ದೊರೆತ ಕೇವಲ ಹೆಣ್ಣಲ್ಲ; ಅವಳು ಪ್ರಕೃತಿರೂಪಿಣಿ, ಚೈತ್ಯಸಂಪ್ರಜ್ಞೆ".[೨೬] ಸೀತೆ ಅಸಮಾನ್ಯಳಾಗಿ ಹುಟ್ಟಿದರೂ ಸಾಮಾನ್ಯಳಂತೆ ಬಾಲ್ಯವನ್ನು ಯೌವನವನ್ನು ಅರಮನೆಯಲ್ಲಿ ಕಳೆದು ಶ್ರೀರಾಮನನ್ನು ವರಿಸಿ ಅಯೋಧ್ಯೆಗೆ ಬರುತ್ತಾಳೆ. ಸೀತೆ, ರಾಮರ ಹುಟ್ಟು ಲೋಕಕಲ್ಯಾಣಕ್ಕಾಗಿಯೇ ಎಂಬುದು ಮುಂದಿನ ಎಲ್ಲ ಘಟನೆಗಳಿಂದ ಅರಿವಾಗುತ್ತದೆ. ವಾಲ್ಮೀಕಿಯು ದೈವಾಂಶ ಸಂಭೂತನಾದ ಇವರು ಅವತಾರಿಗಳೆಂದು ಚಿತ್ರಸುತ್ತಾರೆ; ಆದರೆ ಕುವೆಂಪು ಅವರು ಸಾಮಾನ್ಯರಂತೆ ಬೆಳೆದು ದೈವದ ಅಂಶವನ್ನು ಮೈಗೂಡಿಸಿಕೊಂಡು ಮಾನವತೆಯಿಂದ ದೈವತ್ವಕ್ಕೆ ನಡೆದ ಮಹಾನುಭಾವರಂತೆ ಚಿತ್ರಸಿದ್ದಾರೆ. ಆದ್ದರಿಂದಲೇ ಕುವೆಂಪು ಮಹಾಕಾವ್ಯ ಪ್ರಾರಂಭದಲ್ಲಿ ನಮ್ಮ ಗುರುವಿಗೆ ಕಾವ್ಯವನ್ನು ಸಮರ್ಪಿಸುವಾಗಲೇ ಕಾವ್ಯದ ಶಕ್ತಿಸ್ವರೂಪಿಣಿಯಾಗಿ ಕಾವ್ಯದ ಕೇಂದ್ರ ಬಿಂದುವಾಗಿ ಸೀತೆಯನ್ನು ಚಿತ್ರಿಸಿದ್ದಾರೆ.

ಶ್ರೀರಾಮನಾ ಲೋಕದಿಂದವತರಿಸಿ ಬಂದು
ಈ ಲೋಕಸಂಭವೆಯನೆಮ್ಮ ಭೂಜಾತೆಯಂ
ಸೀತೆಯಂ ವರಿಸುತಾಕೆಯ ನೆವದಿ ಮೃಚ್ಛಕ್ತಿಯಂ;
ಮರ್ಧಿಸುತೆ, ಸಂವರ್ಧಿಸಿರ್ಪವೋಲ್ ಚಿಚ್ಛಕ್ತಿಯಂ
ರಾವಣಾವಿದ್ಯೆಯೀ ನಮ್ಮ ಮರ್ತ್ಯ ಪ್ರಜ್ಞೆತಾಂ
ತನ್ನ ತಮದಿಂ ಮುಕ್ತವಪ್ಪುದು, ದಿಟಂ, ನಿಮ್ಮ
ದೀಪ್ಯ ದೈವೀ ಪ್ರಜ್ಞೆಯಮೃತ ಗೋಪುರಕೇರ್ವವೋಲ್!
[ಶ್ರೀರಾಮಾಯಣದರ್ಶನಂ-ಶ್ರೀ ವೆಂಕಣ್ಣಯ್ಯನವರಿಗೆ]

-----------

೨೬. ಕುವೆಂಪು, ಶ್ರೀರಾಮಾಯಣದರ್ಶನಂ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು ೨, ಎರಡನೇ ಆವೃತ್ತಿ೨೦೦೪, ಪು. ೩೩೬

ಪ್ರಕೃತಿ – ಪುರುಷರ ಸಮಾಗಮದ ಸೆವದಲ್ಲಿ ಅಂಧಕಾರ, ಅವಿದ್ಯೆಯನ್ನು ತೊಡೆದುಹಾಕುವಂತೆ; ಶ್ರೀರಾಮನು ಅವತರಿಸಿ ಬಂದು ಭೂಜಾತೆಯದ ಸೀತೆಯನ್ನು ವರಿಸಿ, ಆಕೆಯ ಸೆವದಿಂದ ಮೃಚ್ಛಕ್ತಿಯನ್ನು ಮರ್ಧಿಸಿ; ಚಿಚ್ಛಕ್ತಿಯನ್ನು ವರ್ಧಿಸುವಂತೆ ಮಾಡಿದ್ದಾನೆ. ರಾವಣಾವಿದ್ಯೆಯ ಮರ್ತ್ಯಪ್ರಜ್ಞೆಯು ತನ್ನತಮದಿಂದ ಮುಕ್ತಗೊಳ್ಳವಂತೆ, ದೀಪ್ಯ ದೈವೀಪ್ರಜ್ಞೆಯು ಅಮೃತ ಗೋಪುರಕ್ಕೇರುವಂತೆ ಮಹಾಕಾವ್ಯವು ಅವತರಿಸಿದೆ. "ಜಡಕ್ಕೆ ಬಂಧಿಸಲ್ಪಟ್ಟಿರವ ಚೇತನದ ಪ್ರತಿಮೆಯಾದ ಸೀತೆಯು ಚಿಚ್ಛಕ್ತಿಯ ಇನ್ನೊಂದುಮುಖ ಅದೇ ಚಿಚ್ಛಕ್ತಿ ಇನ್ನೊಂದುಮುಖ ರಾಮ. ಶುದ್ಧ ಪರಾತ್ಪರಮ ಶಕ್ತಿಯು ಕ್ರಿಯಾತ್ಮಕ ಸ್ವರೂಪ ಹೋದಿದರೆ ಪ್ರಕೃತಿಯಾಗುತ್ತದೆ. ಅದೇ ನಿಷ್ಕ್ರಿಯಾತ್ಮಕ ಪ್ರಭುವಾದರೆ ಪುರುಷನಾಗುತ್ತಾದೆ. ಸೀತೆ ಪ್ರಕೃತಿ ಸ್ವರೂಪಿಣಿ. ಶ್ರೀರಾಮ ಪುರುಷರೂಪಿ. ಪ್ರಕೃತಿ ಪುರುಷನೊಡನೆ ಒಂದಾಗಲು ಮಾಡುವ ಪ್ರಯತ್ನವೇ ಸಾಧನೆ".[೨೭] ಸೀತಾ ರಾಮರ ಸಂಬಂಧ ಕೇವಲ ಲೌಕಿಕವಾದುದಲ್ಲ; ಅವರಿಬ್ಬರ ಸಂಬಂಧದ ಆಳ,ಅಗಲ ವಿಶಾಲವಾದ ಜಗತ್ತನ್ನೇ ವ್ಯಾಪಿಸಿ ಲೋಕಕಲ್ಯಾಣವನ್ನು ಸಾರುತ್ತದ್ದೆಂದು ಸಂದರ್ಭಗಳ ಸೂಕ್ಷ್ಮತೆ ಯ ಅರಿವು ಮೂಡುತ್ತದೆ.

ರಾಮಲಕ್ಷ್ಮಣರು ವಿಶ್ವಾಮಿತ್ರ ಮುನಿಯ ಯಾಗ ಪೂರ್ಣವಾದಾಗ ಜನಕರಾಜನ ಮಹಾಕ್ರತುವಿನ ವಾರ್ತೆಯು ಬರುತ್ತದೆ. ವಿಶ್ವಾಮಿತ್ರ ಮಹರ್ಷಿಯು ಮಿಥಿಲೆಯಲ್ಲಿರುವ ಹರಧನುಸ್ಸಿನ ವಿಚಾರವನ್ನು ತಿಳಿಸಿದಾಗ ಶಿವಶಕ್ತಿಯೇ ತನ್ನಲ್ಲಿಗೆ ಸಂಚರಿಸಿದಂತೆ ರಾಮನು ಪುಲಕಿತನಾಗುತ್ತಾನೆ. ಇದನ್ನು ಮುಂದಿನ ಶುಭಕಾರ್ಯ ಜರುಗುವ ಸಂಕೇತವಾಗಿ ಮಾಡಿರುವ ಮಹಾಕವಿ ನುಡಿಯುವ ಮಾತುಗಳು ಧ್ವನಿಪೂರ್ಣವಾಗಿವೆ:

ತನ್ನ ಹೃದಯೇಶ್ವರಿಯನನ್ಯ
ಕಾಪುರುಷರಿಂ ಪೊರೆವ ಹರಕೃಪಾರೂಪಿಯೇಂ
ಚಾಪಮಾತ್ರಮೆ ಪೇಳ್? ಶವೇಚ್ಛಾಪ್ರನಾಳಿಯೆದಿಟಂ!

[ಶ್ರೀರಾಮಾಯಣದರ್ಶನಂ, ಪು–೩೩]

"ರಾಮ ಸೀತೆಯರ ಸಂಬಂಧ ಸಾಂಪ್ರದಾಯಿಕವಾದ ಪ್ರಾಕೃತಿಕವಾದ ವರ್ತಮಾನ ಸಂಬಂಧವಲ್ಲ. ಅದು ಗೂಢವಾದದ್ದು ಅಪ್ರಾಕೃತವಾದದ್ದು, ಅನಾದಿಯಾದದ್ದು ಅವಿಭಾಜ್ಯವಾದದ್ದು ಗಹನೋದ್ದೇಶಭರಿತವಾದದ್ದು ಎಂಬುದನ್ನು ಇದು ಸೂಚಿಸುತ್ತದೆ".[೨೮] ವಿಶ್ವಾಮಿತ್ರ ಮಹರ್ಷಿಯು ರಾಮಲಕ್ಷ್ಮಣರನ್ನು ಮಿಥಿಲೆಗೆ ಕರೆದುತಂದು ಜನಕರಾಜನಿಗೆ ಪರಿಚಯಿಸುತ್ತಾರೆ. ರಾಮಲಕ್ಷ್ಮಣರು ಅರಮನೆಯ ತೋಟದಲ್ಲಿ ವಿಶ್ರಾಂತಿ ಪಡೆಯುವಾಗ ತಂಗಿಯೊಡನೆ ಬಂದ ಸೀತೆ ರಾಮನ ರೂಪಿಗೆ ಬೆರಗಾಗಿ ನಿಲ್ಲುತ್ತಾಳೆ. ರಾಮನನ್ನು ಮೊದಲಭಾರಿಗೆ ಪ್ರತ್ಯಕ್ಷವಾಗಿ ಕಂಡರೂ, ಆ ಬೇಟಿ ಮೊದಲೆನಿಸದು ಕಾರಣ ಆಕೆಯ ಮನದಲ್ಲಿದ್ದ ಪುರುಷರೂಪ ಕಣ್ಮುಂದೆ ನಿಂತಂತೆ ಭಾಸವಾಗುತ್ತದಷ್ಟೆ ಜನಕಜಾತೆಯ ಕನಸಿನಲ್ಲಿ ನಿತ್ಯವೂ ಬರುತ್ತಿದ್ದ ನೀಲದೇಹಿ ಶ್ರೀರಾಮ. ಆತನನ್ನು ಕಂಡು ಬೆರಗಾದ ಸೀತೆಗೆ ತನ್ನ ಮನೋರಾಗದ ಪ್ರತಿಬಿಂಬವಾದ ರಾಮನನ್ನು ವರಿಸುವ ಆಸೆ ಮೊಳಕೆಯೊಡೆಯುತ್ತದೆ. ನೆನಪಿನೊಡನೆ ಆಕೆಯ ಮನಸ್ಸು ಕೆರಳಿ, ಆವೇಶ ಉಕ್ಕಿ, ಕಂಬನಿಮಿಡಿದು, ನಿಡುಸುಯ್ದು ನಿಲ್ಲಲಾಗದೆ ಅರಮನೆಗೆ ನಡೆಯುತ್ತಾಳೆ. ಇದೆಲ್ಲವನ್ನೂ ಗಮನಿಸಿದ ಚತುರೆ ಊರ್ಮಿಳೆ. ಅಕ್ಕನ ಈ ಸ್ಥಿತಿಗೆ ಕಾರಣವನ್ನು ತಿಳಿದು ಸಂತೈಸುವ ಕೆಲಸದಲ್ಲಿ ತೊಡಗಿದವಳು

----------

೨೭. ಕೊ. ಚನ್ನಬಸಪ್ಪ, ಗಂಗೋತ್ರಿ, ಪು.೨೩೨

೨೮. ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೭. ಪು.೨೩೮

ಊರ್ಮಿಳೆ. ಸೀತೆ ಊರ್ಮಿಳೆಯರ ನಡುವಿನ ಬಾಂದವ್ಯದ ಪರಿ ಅರಿಯುವುದು ಈ ಸನ್ನಿವೇಶದಲ್ಲಿಯೇ. ಎಲ್ಲ ಸಮಯದಲ್ಲಿ ಅಕ್ಕನಿಗೆ ಬೆಂಬಲವಾಗಿ ನಿಲ್ಲುವ ಊರ್ಮಿಳೆಯು ಮುಂದೆ ರಾಮ ಲಕ್ಷ್ಮಣ ಸೀತೆಗೆ ಶ್ರೀರಕ್ಷೆಯಾಗಿ ತಪಸ್ಸನ್ನಾಚರಿಸುವ ದಿಟ್ಟೆ, ಊರ್ಮಿಳೆ ಸೀತೆಯ ಮನಸ್ಸನ್ನು ಸಂಪೂರ್ಣವಾಗಿ ಅರಿತವಳು, ಸೀತೆ ಕೂಡ ಊರ್ಮಿಳೆಯ ಅಂತರಂಗ ಬಲ್ಲವಳಾಗಿದ್ದಳು. ಆದ್ದರಿಂದಲೇ ತನ್ನ ಮನಸ್ಸಿನಲ್ಲಾಗುವ ಎಲ್ಲ ರಾಗಾನುರಾಗವನ್ನು ಪ್ರೀತಿಯ ತಂಗಿಯಲ್ಲಿ ಹೇಳುತ್ತಾಳೆ:

ಬಾಲ್ಯದಿಂ, ಕೇಳ್,
ನನಗರ್ಥವಾಗದೊಂದನುಭವಂ ತಾಂ ನಿಚ್ಚಮುಂ
ಬಂದೆನ್ನನೊಳಕೊಳ್ವುದನ್: ಗಗನ ಮಂಡಲಮೆ
ಬಂದೆನ್ನ ಮೆಯ್ಯಪ್ಪುತೆರ್ದೆಯೊಳಗೆಸೇರ್ವಂತೆ;
ಕಡಲುಕ್ಕಿ ಮೇರೆ ಮೀರುತೆ ಪಾಯ್ದು ಮುಳುಗಿಸಲ್
ನಾನೆ ಕಡಳೊಡತಿಯಪ್ಪೆ; ಪೃಥಿವಿಯು ಕರಗಿ
ಪೆಣ್ ಪಸುಳೆಯಾಗುತ್ತನ್ನಯ ತೊಡೆಯ ತೊಟ್ಟಿಲೊಳ್
ನಲಿವಂತೆ; ತೊರೆ ಬನಂ ಭೂಮಿ ಬಾನ್ ಗಿರಿಪಂಕ್ತಿ
ಪಗಲಿರುಳು ಚುಕ್ಕಿ ತಿಂಗಳ್ ನೇಸರೆಲ್ಲಮುಂ
ಮೆಯ್ಯಾಗುತಾಂ ತ್ರೈಭುವನ ಲಕ್ಷ್ಮಿಯಪ್ಪಂತೆ.
[ಶ್ರೀರಾಮಾಯಣದರ್ಶನಂ, ಪು-೪೬]



ಗಗನ ಮಂಡಲಮೆ ಮೈಯನ್ನು ತಬ್ಬಿ ಎದೆಯನ್ನು ಹೋಗುವಂತೆ, ಸಮುದ್ರ ಉಕ್ಕಿ ಮುಳುಗಿಸಿದಾಗ ಅದಕ್ಕೆ ರಾಣಿಯಾದಂತೆ, ಭೂಮಿಯು ಕರಗಿ ಹಸುಳೆಯಾಗಿ ತೊಡೆಯಲ್ಲಿ ನಲಿಯುವಂತೆ ಹಗಲಿರುಳು ಚುಕ್ಕಿ ಬಾನ್ ತೊರೆ ತಿಂಗಳ್ ಎಲ್ಲ ತನ್ನ ಮೈಸೇರಿ ತ್ರಿಭುವ ಲಕ್ಷ್ಮಿಯಾದಂತೆ ಕನಸಿನಲ್ಲಿ ದಿನವೂ ಅನುಭವವಾಗುವುದನ್ನು ಹಾಗೂ ದಶಾನನು ಚಾಪವನ್ನು ಮುರಿಯಲು ಬಂದ ದಿನ ನೀಲಮೇಘ ಶ್ಯಾಮಮೂರ್ತಿಯನ್ನು ಕಂಡೆನೆಂದೂ ಸೀತೆ ಊರ್ಮಿಳೆಗೆ ವಿವರಿಸುತ್ತಾಳೆ. ಈ ಎಲ್ಲ ಅನುಭವಗಳು ಆಕೆ ಅಪ್ರಾಕೃತಳು, ದೈವಸ್ವರೂಪಿ ಎಂದು ತಿಳಿಸುತ್ತದೆ. ಕೆಳದಿಯರು ತೋಟದಲ್ಲಿ ಕಂಡವನು ದಶರಥಪುತ್ರ ರಾಮನೆಂದೂ, ಅಯೋಧ್ಯೆಯ ಸ್ವಾಮಿಯೆಂದು, ಬಿಲ್ಮುರಿದರೆ ಸೀತೆಯ ಇನಿಯನಾಗುವನೆಂದೂ, ನಾಳೆಯೇ ಅವನ ಬಲ ಪರೀಕ್ಷೆ ಎಂದು ತಿಳಿಸುತ್ತಾರೆ. ಸೀತೆಯು ದಿಕ್ಕು ತೋರದವಳಂತೆ ಕುಳಿತಾಗ ಬಯಕೆಯನ್ನು ಸಾಕ್ಷಾತ್ಕರಿಸಿಕೊಳ್ಳುವ ಮಾರ್ಗತೋರುವವಳು ಊರ್ಮಿಳೆ. 'ಬಿಲ್ ಬಾಗುವಂತೆ ಪಾರ್ವತಿಯನ್ನು ಪ್ರಾರ್ಥಿಸೋಣ, ಶಿವನ ಸೋಲು ದಿಟ' ಎಂದು ಕಾರ್ಯೋನ್ಮುಖಳಾಗಿ ಸೀತೆಯ ಸುಖಕ್ಕೆ ಕಾತರಿಸುವವಳು ಊರ್ಮಿಳೆ.

ಹಿಂದೆ ರಾವಣನೆಂದು ಬಂದಾಗಳ್ 'ಓ ಧನುವೆ
ಕಾಪಾಡು ಬಾಲೆಯಂ; ಕೈಮುಗಿವೆ ಕಾಲ್ಗೆರಗಿ;
ಮುರಿಯದಿರ್; ಬಾಗದಿರ್; ಸುರಮೇರು ಭಾರದಿಂ
ಧೈತ್ಯನೆತ್ತದ ತೆರದಿ ಭಾರಗೊಂಡುಬಲೆಯಂ
'ಪೊರೆ'- ಎಂದೆರೆದ ತರುಣಿ ತಾನಿಂದು- 'ಹಗುರಾಗು
ಗರಿಯಂತೆ; ಬಾಗು ಬಳ್ಳಿಯ ತೆರದಿ; ರಾಮಂಗೆ
ಮುರಿದು ಬೀಳ್, ಓ ಧನುವೆ! ಎಂದು ಪರಿಪರಿಯಿಂದೆ
ಬಿನ್ನಹಂಗೈದಳೆನೆ,

[ಶ್ರೀರಾಮಾಯಣದರ್ಶನಂ, ಪು-೪೬]

ಮಹಾಕವಿಯು ಸ್ತುತಿ ನಿಂದೆಗಳೆಲ್ಲವೂ ಸಮಯವರ್ತಗಳೆಂದು ಸೀತೆಯು ರಾವಣನಿಗೆ ದೇವ ಪರ್ವತದಂತೆ ಭಾರವಾಗಿ ಎತ್ತಲಾಗದಂತೆ ಮಾಡಿ ಅಬಲೆಯನ್ನು ಕಾಪಾಡು ಎಂದವಳು; ರಾಮನಿಗೆ ಹಗುರಾಗಿ ಗರಿಯಂತೆ ಬಾಗು ಮುರಿದು ಬೀಳು ಎಂದು ಬೇಡೆತ್ತಾಳೆಂದು ಚಿತ್ರಿಸಿದ್ದಾರೆ. ಸೀತೆಯು ಸಾಮಾನ್ಯ ಸ್ತ್ರೀಯಲ್ಲದಿದ್ದರೂ ಲೋಕವ್ಯವಹಾರವನ್ನು ಮೀರಲಾಗದೆಂದೇ ಚಿತ್ರಿಸಿದ್ದಾರೆ. ಮನದಲ್ಲಿ ಸ್ಥಾಪಿತಗೊಂಡ ಮೂರ್ತಿಯನ್ನು ಪಡೆಯಲು ಸೀತೆಯು ಪಾರ್ವತಿಯ ಮೊರೆಹೋಗುತ್ತಾಳೆ. ಶಿವನ್ನು ಪ್ರಾರ್ಥಿಸುತ್ತಾಳೆ. ತನ್ನ ಬಯಕೆಯ ಈಡೇರಿಕೆಗೆ ಹಗಳಿರುಳೆನ್ನದೆ ವ್ರತವನ್ನಾಚರಿಸುತ್ತಾಳೆ.

" ರಾಮನ ಬಲಕೆ ತನ್ನ
ಪ್ರೇಮದ ಬಲವನೀಯಲೆಂದು ಭೂಜಾತೆ ಗಿರಿಜೇಶನಂ
ಪೂಜಿಸಿದಳಾ ರಾತ್ರಿ ನಿದ್ದೆ ನೈವೇದ್ಯಮಂ
ನೀಡಿ,

[ಶ್ರೀರಾಮಾಯಣದರ್ಶನಂ, ಪು-೪೬]

ರಾಮನು ಪರಾಕ್ರಮಿ ಆತನ ಬಲಕ್ಕೆ, ತನ್ನ ಪ್ರೇಮದ ಬಲವನ್ನು ನೀಡಲು ವ್ರತವನ್ನು ಕೈಗೊಂಡು ಭೂಜಾತೆಯು ನಿದ್ದೆಯನ್ನೇ ನೈವೇದ್ಯ ನೀಡಿ ತನ್ನ ಪ್ರಾರ್ಥನೆಯು ಯಶಸ್ವಿಯಾಗುವಂತೆ ಮಾಡುತ್ತಾಳೆ. " ಸೀತೆ ತಪಸ್ಸು ವಾಸ್ತವವಾಗಿ ಇಲ್ಲಿಂದಲೇ ಆರಂಭವಾಗುತ್ತದೆ. ಇದು ಮಾತ್ರವಲ್ಲದೆ ರಾಮನ ಮುಂದಿನ ಎಲ್ಲ ಸಾಧನೆಗಳಿಗೂ ಸೀತೆ ಜೀವಶಕ್ತಿಯಾಗುತ್ತಾಳೆ; ರಾಮ ಅವಳ ಮನದ ಸ್ಥೈರ್ಯವಾಗಿ ಅವಳನ್ನು ಉದ್ಧರಿಸುತ್ತಾನೆ ಎಂಬುದೂ ಇಲ್ಲಿಯೇ ಸೂಚಿತವಾಗುತ್ತಾದೆ. ಈ ಆರಂಭವೇ ಈ ಕೃತಿಯ ಸೀತಾಪಾತ್ರದ ಅನನ್ಯಯ ವೈಶಿಷ್ಟ್ಯಕ್ಕೆ ತೋರ್ಬೆರಳಾಗುತ್ತದೆ".[೨೯] ಸೀತೆಯ ಬಯಕೆಯಂತೆ ಹರ ಧನಸ್ಸು ರಾಮನಿಗೆ ಬಾಗುತ್ತದೆ. ಸೀತೆಯಿಂದ ರಾಮನ ಕೊರಳಿಗೆ ವಿಜಯಮಾಲೆ ಅರ್ಪಿತವಾಗುತ್ತದೆ. ಎಲ್ಲರ ಸಮ್ಮುಖದಲ್ಲಿ ಸೀತಾರಾಮರೂ ಸತಿಪತಿಗಳಾಗುತ್ತಾರೆ. ಅವರ ಸಂಬಂಧ ಲೋಕವ್ಯವಹಾರದಂತೆ ಬೆಸೆದರೂ, ಅಲೌಕಿಕವಾದ ಶಕ್ತಿಯು ಅವರಿಬ್ಬರನ್ನೂ ಬೆಸೆದಿತ್ತೆಂದು ಸೂಚ್ಯವಾಗಿ ತಿಳಿದುಬರುತ್ತದೆ.

ಕುವೆಂಪು ಅವರು ರಾಮ-ಸೀತೆಯ ದಾಂಪತ್ಯ ಜೀವನ ವಿವರಗಳನ್ನು ಸೊಗಸಾಗಿ ನೀಡಿದ್ದಾರೆ. ಅವರಿಬ್ಬರ ಅನುರೂಪ ವರ್ತನೆಯನ್ನು, ದಾಂಪತ್ಯದ ರಸಘಟ್ಟವನ್ನು ಅಲ್ಲಲ್ಲಿ ಕಟ್ಟಿಕೊಟ್ಟಿದ್ದಾರೆ. " ಕುವೆಂಪು ಸಂಕ್ಷಿಪ್ತವಾಗಿಯಾದರೂ ಉಜ್ವಲವಾಗಿ ರಾಮಸೀತೆಯರ ನವದಾಂಪತ್ಯದ ಹೃನ್ಮೋಹಕ ಚಿತ್ರವನ್ನು ಕೊಡುತ್ತಾರೆ; ಆ ಮೂಲಕ ಅವರಿಬ್ಬರ ಮೈಮನಗಳೆರಡೂ ಹೇಗೆ ಅವಿಭಾಜ್ಯವಾಗಿ ಆದರ್ಶವಾಗಿ ಅಸ್ಪಾದ್ಯದೃಶ್ಯವಾಗಿ ಬೆರೆತುಕೊಂಡು ಒಂದೇ ಆಗಿದ್ದವೆಂಬುದನ್ನು ಧ್ವನಿಸಿ ಮುಂದಿನ ಅವರ ಚಾರಿತ್ರ್ಯ ಸೌಧಕ್ಕೆ ಭದ್ರಬುನಾದಿಯನ್ನು ನಿರ್ಮಿಸುತ್ತಾರೆ".[೩೦]

----------

೨೯. ಡಾ. ಎಚ್.ಜಿ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೨೩೯

೩೦. ಅದೇ ಪು.೩೪೦

ತಿಂಗಳ್ಗೆ ತೇನೆಯೊಲಿವಂತೆ ಸೀತಾಕಾಂತೆ
ತೇಲಾಡಿದಳು ತನ್ನ ರಮಣನಾನಂದಕ್ಕೆ
ತನ್ನೆಲ್ಲಮಂ ನಲಿದು ನೈವೇದ್ಯಮಂ ನೀಡಿ
ತನ್ನ ತನವನೆ ಸೊನ್ನೆಮಾಡಿ,

[ಶ್ರೀರಾಮಾಯಣದರ್ಶನಂ, ಪು-೫೬]

ಸೀತೆಯು ತನೆಲ್ಲವನ್ನು ರಾಮನಿಗರ್ಪಿಸಿ, ತನ್ನತನವನ್ನು ಸೊನ್ನೆಮಾಡಿ, ರಾಮನಲ್ಲಿ ತನ್ನೆಲ್ಲವನ್ನು ಕಾಣುತ್ತಾಳೆ. ಪರಿಶುದ್ಧವಾದ ಪ್ರೇಮ, ಒಲುಮೆ, ಸ್ನೇಹ, ತ್ಯಾಗ, ಸಮರ್ಪಣಭಾವಗಳು ಭದ್ರವಾಗಿ ಬೇರೂರಿ ಮುಂದಿನ ಘಟನಾವಳಿಗಳ ಏಳುಬೀಳಿನಲ್ಲಿಯೂ ಸಚ್ಚಾರಿತ್ರ್ಯದ ನಿರ್ಮಾಣಕ್ಕೆ ಕಾರಣವಾಗುತ್ತದೆ.

"ಶ್ರೀರಾಮ ಪ್ರೇಮದೊಡೆ ಕಂಡಳ್ ಜನಕಜಾತೆ
ಜೀವನದ ಪರಮ ಪುಷಾರ್ಥಮಂ, ಮೇಣಖಿಳ
ಸೃಷ್ಟಿಲೀಲಾ ಮಹೋದ್ದೇಶಮಂ.

[ಶ್ರೀರಾಮಾಯಣದರ್ಶನಂ, ಪು-೪೭]

"ಶ್ರೀರಾಮ ಪ್ರೇಮ ಅವಳ ವ್ಯಷ್ಠಿ ಜೀವನದ ಪರಮ ಸಂತೃಪ್ತಿಯ ಪರಮಸಿದ್ಧಿ ಎಂದು ಮಾತ್ರ ಅವಳು ತಿಳಿಯಲಿಲ್ಲ: ಆ ಪ್ರೇಮ ಅವ್ಯಾಪ್ತವಾಗಿ ಕೇವಲ , ವ್ಯಕ್ತಿನಿಷ್ಟವಾಗಿರದೆ ಸೃಷ್ಟಿಲೀಲೆಯ ಮಹೋದ್ದೇಶವನ್ನು ಪೂರೈಸುವ ಪರಮವಿಸ್ತಾರವೂ ಉನ್ನತವೂ ಉದ್ಧಾರಕವೂ ಆದ ದಿವ್ಯಮಂಗಳ ಪ್ರೇಮವೆಂಬುದನ್ನು ಅವಳು ಅರಿತ್ತಿದ್ದಳು ಎಂಬುದನ್ನು ಇದು ಸೂಚುಸುತ್ತದೆ. ಆದ್ದರಿಂದ ಸೀತಾರಾಮ ವಿವಾಹ ಮತ್ತು ಪ್ರೇಮಗಳು ಕೇವಲ ಒಂದು ಕುಟುಂಬದ ವಂಶವನ್ನು ಕೀರ್ತಿಯನ್ನು ವಿಸ್ತರಿಸುವ ಸೀಮಿತೋದ್ದೇಶದ ಫಲವಲ್ಲ; ಇಡೀ ಲೋಕದ ಸದ್ಗುಣಗಳನ್ನು ಸಂವರ್ಧಿಸುವ, ಅದರ ಅಂತಃಸತ್ವವನ್ನು ಉದ್ಬೋಧಿಸುವ ಉತ್ಕರ್ಷಿಸುವ ವಿಶ್ವಪ್ರೇಮದ ಸಂಕೇತ ಎನ್ನುವ ದರ್ಶವನ್ನು ಆದಿಯಿಂದಲೂ ಸೂಕ್ಷ್ಮವಾಗಿ ಸತ್ವಪೂರ್ಣವಾಗಿ ಪರಿಣಾಮಕಾರಿಯಾಗಿ ಕಟ್ಟುತ್ತಾರೆ ಕವಿ".[೩೧]

ಪ್ರಿಯನ ಪಟ್ಟಾಭಿಷೇಕದ ಉತ್ಸವದ ಸಂದರ್ಭ ತಲ್ಲೀನವಾಗಿದ್ದ ಸೀತೆಗೆ, ಪ್ರಿಯನಿಗೆ ವನವಾಸ ಪ್ರಾಪ್ತಾವಾಗಿದೆ ಎಂದು ತಿಳಿದಾಗ ಕೋಪಗೊಳ್ಳುವುದಿಲ್ಲ, ದುಃಖಿಸುವುದಿಲ್ಲ. ಪಿತೃವಾಕ್ಯ ಪರಿಪಾಲನೆಗೆ ನಡೆಯುತ್ತಿರುವ ಪತಿಯನ್ನು ಸಹಧರ್ಮಿಣಿಯಾದ ನಾನು ಅನುಸರಿಸುವುದೇ ತನ್ನ ಧರ್ಮವೆಂದು ತಿಳಿದುಕೊಂಡು ರಾಮನೊಂದಿಗೆ ಕಾಡಿಗೆ ನಡೆಯಲು ಸಿದ್ಧವಾಗುತ್ತಾಳೆ. ರಾಮನೊಂದಿಗೆ ಸೀತೆಯಾಡುವ ನುಡಿಗಳು ಸ್ತ್ರೀಕುಲದ ಹಿರಿಮೆಯನ್ನು ಎತ್ತಿತೋರಿಸುವಂತಹವುಗಳಾಗಿವೆ.

"ನಿನ್ನನಲ್ಲದೆ, ನಲ್ಲ, ಕೋಸಲನೆಲವನಲ್ಲ
ನಾನೊಲ್ದುದಂದು. ಮೇಣಿಂದಿಗುಂ ಮನೆಯೆನಗೆ

----------

೩೧. ಅದೇ ಪು. ೨೪೦

ರಮಣನೆರ್ದೆಯನಲ್ಲದೆಯೆ ಮಾವನರಮನೆಯಲ್ತು.
ನೀನಿರಲ್ಕೆನ್ನೊಡನೆ ನಾಡಾದರೆಂತಂತೆ
ಕಾಡಾದೊಡಂ ಸುಖಿಯೆ ನಾಂ. ದುಃಖಿ ನಿನಗಾಗಿ.
ನಿನ್ನ ನೋವಿಂಗಳಲ್ಕೆಯೆ ಹೊರತೆನಗೆ ಬೇರೆ
ಸಂಕಟದ ಸೋಂಕೆಲ್ಲಿ?"

[ಶ್ರೀರಾಮಾಯಣದರ್ಶನಂ, ಪು-೮೯]

ಸೀತೆಯು ರಾಮನನ್ನು ಒಲಿದು ಬಂದೆನ್ನಲ್ಲದೆ ಅಯೋಧ್ಯೆಯ ಸಿರಿಯನ್ನು ಅಲ್ಲವೆಂದು, ಮನೆ ಎಂಬುದು ಸೀತೆಗೆ ರಾಮನ ಹೃದಯವೇ ಹೊರತು ಮಾವನ ಅರಮನೆಯಲ್ಲವೆಂದು ರಾಮನು ಸೀತೆಯೊಡನಿದ್ದರೆ ಅದು ಕಾಡಾದರೂ ನಾಡಿನಂತೆಯೇ ಸುಖವಾಗಿರುತ್ತದೆಂದೂ; ತನಗಾಗಿ ದುಃಖವಿಲ್ಲ ನಿಮಗೆ ಒದಗಿದ ನೋವಿಗಾಗಿ ಸಂಕಟವಾಗಿದೆಯಷ್ಟೆ ಎಂದು ಹೇಳುತ್ತಾಳೆ. ರಾಮನು ಸೀತೆಯ ಮನಸ್ಸನ್ನು ಸಂಪೂರ್ಣ ಅರಿತವನಾದರೂ, ಆಕೆಯ ಅಚಲ ನಿರ್ಧಾರ ತಿಳಿದವನಾದರೂ ವನವಾಸವು ರಾಮನಿಗಷ್ಟೆ, ಉಳಿದವರಿಗಲ್ಲವೆಂದಾಗ ರಾಮನ ಪ್ರಿಯಸತಿ ಆಕೆಯ ಸ್ಥಾನಮಾನಕ್ಕೆ ತಕ್ಕಂತ ಮಾತುಗಳನ್ನೆ ಆಡುತ್ತಾಳೆ.

" ರಾಮನರ್ಧಾಂಗಿ ಸೀತೆಗೆ ಬೇರತನವಿಲ್ಲ
ಪತಿಯ ಸುಖದುಃಖದರ್ಧಂಸತಿಗೆ"

[ಶ್ರೀರಾಮಾಯಣದರ್ಶನಂ, ಪು-೮೯]

ರಾಮನ ಅರ್ಧಾಂಗಿಯಾದ ಸೀತೆ ಪತಿಯ ಸುಖದುಃಖದಲ್ಲಿ ಅರ್ಧಪಾಲಿದೆ ಎಂದು, ಪತಿಸೇವೆಗಿಂತ ಮಿಗಿಲಾದ ಸೇವೆ ಇಲ್ಲವೆಂದು, ರಾಜರ್ಷಿ ತಂದೆಯಿಂದ, ಗುರುಗಳಿಂದ ತಿಳಿದಿರುವ ಧರ್ಮದ ಬಗೆಗೆ ಮಾತನಾಡಿ ತನ್ನ ನಿಧಾರವನ್ನು ದೃಢವಾಗಿಯೇ ತಿಳಿಸುತ್ತಾಳೆ. ಕಾಡಿನಲ್ಲಿ ಒದಗಬುದಾದ ತೊಂದರೆಗಳ ಬಗ್ಗೆ ಮೃಗಬಾಧೆಯ ಬಗ್ಗೆ, ಕಲ್ಲುಮುಳ್ಳಿನ ಹಾದಿಯ ಬಗ್ಗೆ ಭಯಂಕರವಾಗಿ ವರ್ಣಿಸಿದರೂ ಸ್ವಲ್ಪವೂ ಅಧೈರ್ಯಗೊಳ್ಳದೆ ಪತಿಯನ್ನು ನೆರಳಿನಂತೆ ಹಿಬಾಲಿಸುವ ನಿರ್ಧಾರವನ್ನು ಕೈಗೊಂಡಾಗ ರಾಮನೇ ಸತಿಗೆ ಸೋತು ಆಕೆಯನ್ನು ಅರಣ್ಯಕ್ಕೆ ಹೊಯ್ಯಲು ಒಪ್ಪಬೇಕಾಗುತ್ತದೆ. ಸೀತೆಯು ವಯಸ್ಸಿಗೆ ಮೀರಿದ ವಿಷಯಗಳನ್ನು ಚಿಂತಿಸಿ ಹದಿನಾಲ್ಕು ವರ್ಷಗಳು ಪತಿಯ ನೆರಳಾಗಿ ಇಂದ್ರಿಯಗಳನ್ನು ಸಂಯಮದಿಂದ ಬಂಧಿಸಿ, ದೈಹಿಕ ಭೋಗವನ್ನು ತೊರೊದು ಶುದ್ಧ ತಪಶ್ಚರ್ಯೆಯಲ್ಲಿ ರಾಮನ ಸೇವೆಮಾಡುವುದಾಗಿ ದೃಢಮನಸ್ಸು ಮಾಡುತ್ತಾಳೆ. ಆದ್ದರಿಂದಲೇ ಆಕೆ ರಾಜಭೋಗವನ್ನು ತೊರೆದು ನಾರುಡೆ ಧರಿಸಿ ಕಂದಮೂಲಗಳನ್ನು ತಿಂದುಕೊಂಡಿರಲು ಸ್ವಲ್ಪವೂ ದುಃಖಿಸದೆ ಪತಿಯ ಸಾನಿಧ್ಯದಲ್ಲಿ ಸುಖವಾಗಿ ಬಾಳುತ್ತಾಳೆ.

ಪ್ರಕೃತಿಯ ಉಪಾಸಕಳಾದ ಸೀತೆಗೆ ಸೃಷ್ಟಿಯಲ್ಲಿನ ಒಂದೊಂದು ಒಂದು ಸಂಕೇತವಾಗಿ ಅನುಭವಕ್ಕೆ ಬರುತ್ತದೆ. ಚೈತನ್ಯ ತುಂಬಿಕೊಂಡು ನಿಂತಿರುವ ಬಂಡೆಯೊಂದು ಲಕ್ಷ್ಮಣನ ದಣಿವಾರಿಸುವುದನ್ನು ಕಂಡು ಅದು ಕಲ್ದವಸಿಯಾಗಿ ಊರ್ಮಿಯ ನೆನಪನ್ನು ಹಸಿರಾಗಿಸುತ್ತದೆ. ಗಗನೋನ್ನತವಾದ ಬಿಳಿಮುಗಿನ್ನು ಮುಟ್ಟುವ ಶಿಖರ ತಂದೆ ಜನಕನನ್ನು ನೆನೆಪಿಸುತ್ತದೆ. ಆಶ್ರಮಗಳಲ್ಲಿ ಋಷಿಪತ್ನಿಯರ ಮಕ್ಕಳ ಸಹವಾಸದಿಮದ ಸೀತೆ ಬದುಕಿನ ಅನೇಕ ಪಾಠಗಳನ್ನು ಕಲಿಯುತ್ತಾಳೆ. ಅನಸೂಯೆಯಿಂದ ವಿರಸದ ಸುರಸದಲ್ಲಿ ತೇಲುವ ಸೀತೆಯು ಬಾಲತೆಯನ್ನು ಕಳೆದು ಪ್ರೌಢತೆಯನ್ನು ಪಡೆದುಕೊಳ್ಳುತ್ತಾಳೆ.

ಕಠಿಣವಾದ ಭಯಂಕರ ಕಾಡಿನಲ್ಲಿದ್ದರೂ ಕೂಡ ಸತಿಪತಿಗಳು ಒಲಿದು ಸಮೀಪದಲ್ಲಿದ್ದು ಕಷ್ಟಸುಖಗಳನ್ನು ಹಂಚಿಕೊಂಡು ಸಂಯಮದಿಂದ ಬಾಳುವುದು ಅವರಿಬ್ಬರ ಅನ್ಯೋನ್ಯತೆಯ ಅನಾವರಣವಾಗಿದೆ. ಲಕ್ಷ್ಮಣನ ಮನಸ್ಸನ್ನು ಅರಿಯುವ ಇಬ್ಬರೂ ಊರ್ಮಿಳೆಯ ತ್ಯಾಗದ ಬಗ್ಗೆ ಸೌಮಿತ್ರಿ ಊರ್ಮಿಳೆಗಾಗಿ ಪರಿತಪಿಸುವ ಬಗೆಯನ್ನು ಅರಿತು ಆತನಿಗೆ ನೋವಾಗದಂತೆ ವರ್ತಿಸುತ್ತಾಳೆ. 'ಕಲ್ದವಸಿಯು ಉರ್ಮಿಳೆಯ ಸಂಯಮಕ್ಕೆ ಪ್ರತಿಮೆಯಾಗಿ ರಾಮಸೀತೆಗೆ ಗುರುವಾಗುತ್ತದೆ, ಎಚ್ಚರಿಕೆಯಾಗುತ್ತದೆ. ಲಕ್ಷ್ಮಣನಿಗೆ ಆಯಾಸ ಪರಿಹರಿಸಿ ಮನಕ್ಕೆ ತಂಪು ನೀಡುವುದನ್ನು ಕಂಡು ಬೆರಗಾಗುವ ರಾಮಸೀತೆ ಕಲ್ದವಸಿಯಲ್ಲಿ ಹೊಸಚೈತನ್ಯವನ್ನು ಕಾಣುತ್ತಾಳೆ. ರಾಮಸೀತೆಯ ಸೇವೆ ಹಾಗೂ ರಕ್ಷಣೆಯನ್ನೇ ಗಿರಿಯಾಗಿಸಿಕೊಂಡದ್ದ ಲಕ್ಷ್ಮಣ ಹಾಗೂ ಸೀತೆಯ ನಡುವಿನ ಮಧುರ ಬಾಂಧವ್ಯ ತಿಳಿಸುವ ಅನೇಕ ಪ್ರಸಂಗಗಳನ್ನು ಕುವೆಂಪು ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ಅತ್ತಿಗೆಯನ್ನು ಅಣ್ಣನು ಬೇಗಬೇಗನೇ ಓಡೊಸಿಕೊಂಡು ಬಂದರೆ ಲಕ್ಷ್ಮಣ ಅತ್ತಿಗೆ ಆಯಾಸವಾಗುತ್ತದೆಂದು ನಿಧಾನವಾಗಿಯೇ ಕರೆದುಕೊಂಡು ಬರಬೇಕೆಂದು ಹೇಳುತ್ತಾನೆ.'ಹಸಿ ಸೌಧೆಯ ಪ್ರಸಂಗ' ದಿಂದ ಲಕ್ಷ್ಮಣನಿಗೆ ಸೀತೆಯಲ್ಲಿ ಎಷ್ಟು ಗೌರವವಿತ್ತೆಂದು ತಿಳಿಯುತ್ತದೆ. ರಾಮನು ಮುಖಕ್ಕೆ ಮಸಿ ಬಳಿದುಕೊಂಡಿದ್ದ ಹೆಂಡತಿಯನ್ನ ವಾನರಿ ಎಂದು ಹಾಸ್ಯ ಮಾಡಿ ನಗುತ್ತಾನೆ. ಆದರೆ ಲಕ್ಷ್ಮಣ ತನ್ನ ಅಪರಾಧಕ್ಕಾಗಿ ಕ್ಷಮೆಯಾಚಿಸಿ ಬೇರೆ ಕಟ್ಟಿಗೆತಂದು ತಾನೇ ಒಲೆ ಉರಿಸುತ್ತಾನೆ. ಲಕ್ಷ್ಮಣನಿಗೆ ಸುಮಿತ್ರೆಯೊಂದಿಗೆ ಇದ್ದ ಮಮತೆ, ಪ್ರೀತಿ ಗೌರವಕ್ಕೆ ಸಮ ಎನ್ನುವಷ್ಟು ಬಾಂಧವ್ಯ ಸೀತೆಯೊಂದಿಗೆ ಇದೆ.

ಅತ್ರಿ ಆಶ್ರಮವನ್ನು ಪ್ರವೇಶಿಸಿದಾಗ ಸೀತೆಯು ಅನಸೂಯೆಯ ಮಾತೃಪ್ರೇಮವನ್ನು ಸವಿಯುವುದಲ್ಲದೇ ಪತಿವ್ರತಾಧರ್ಮದ ಬಗ್ಗೆ ಸಾಕಷ್ಟು ಉತ್ತಮವಾದ ವಿಚಾರಗಳನ್ನು ತಿಳಿಯುತ್ತಾಳೆ. ಅನಸೂಯೆ ವಿಧಿವಿಪರ್ಯಾಸದಿಂದ ಉಂಟಾದ ಸೀತೆರಾಮಲಕ್ಷ್ಮಣರ ವನವಾಸವನ್ನು ಕಂಡು ಮರುಗುತ್ತಾಳೆ.

"ಶಿಲ್ಪಿಯ ನಿಶಿತಟಂಕದ ಮೊನೆಯ ಕಠಿಣ
ಶಿಕ್ಷೆಗಲ್ಲದೆ ಪೊಣ್ಮುವುದೆ ಕಲಾಪೂರ್ಣಮಹಾ
ದೇವತಾವಿಗ್ರಹಂ?"

[ಶ್ರೀರಾಮಾಯಣದರ್ಶನಂ, ಪು-೧೮೦]

ಅತ್ರಿಮುನಿಯು ನುಡಿದಿರುವ ಈ ಮಾತುಗಳಲ್ಲಿ ಶಿಲ್ಪಿಯು ಒಂದು ದೇವತಾವಿಗ್ರಹವನ್ನು ಕೆತ್ತಲು ಎಷ್ಟೊಂದು ಉಳಿಪೆಟ್ಟುಗಳನ್ನು ಹಾಕಿರುತ್ತಾನೆ, ಹಾಗೆ ರಾಮಸೀತೆಲಕ್ಷ್ಮಣರೂ ಅನೇಕ ಪೆಟ್ಟುಗಳನ್ನು ತಿಂದು ಸಮಸ್ಯೆಗಳಲ್ಲಿ ಸಿಲುಕಿ ಜಯಿಸಿ ಹೊರಬಂದು ದೇವತಾವಿಗ್ರಹದಂತೆ ಪವಿತ್ರವೆನಿಸುತ್ತಾರೆ. ಮುಂದೊದಗಲಿರುವ ವಿಪತ್ತಿನ ಮಂತ್ರರಕ್ಷೆ ಎಂಬಂತೆ ಅನಸೂಯೆ ಸೀತೆಗೆ ಪಾತಿವ್ರತಾಮಹಿಮೆಯನ್ನು ಉಪದೇಶಿಸಿ ಮಾನಸಿಕಸೃಷ್ಟಿಯ ಹೂವೊಂದನ್ನು ಹರಸಿಕೊಡುತ್ತಾಳೆ. ಮುಂದೆ ರಾವಣನಿಂದ ಅಪಹರಿಸಲ್ಪಟ್ಟು ಅಶೋಕವನದಲ್ಲಿ ಇಟ್ಟಿರುವಾಗ ಅನಸೂಯೆ ಉಪದೇಶಿಸಿದ್ದ ವ್ರತದ ಸಹಾಯದಿಂದ ಸೀತೆ ತನ್ನನ್ನು ತಾನು ರಕ್ಷಿಸಿಕೊಳ್ಳುತ್ತಾಳೆ. ಲೋಕಕ್ಕೆ ತನ್ನ ಪಾತಿವ್ರತ್ಯದ ಪವಿತ್ರತೆಯನ್ನು ಸಾರುತ್ತಾಳೆ.

ಅತ್ರಿ ವಿನಯದಿಂದಲೇ ಸೀತೆ ರಾಮನ ಕಾರ್ಯಗಳ ಬಗ್ಗೆ ಪ್ರಶ್ನೆಮಾಡಿ ಸರಿತಪ್ಪುಗಳ ಚರ್ಚೆಗೆ ಮುಂದಾಗುತ್ತಾಳೆ. ತನಗಿರುವ ಶಂಕೆಯನ್ನು ನಿವಾರಿಸಿಕೊಳ್ಳಲು ಬಯಸುತ್ತಾಳೆ:

" ಋಷಿಗಳ್ಗೆ ನುಡಿಗೊಟ್ಟೆಯಯ್;
ರಾಕ್ಷಸವಧೆಗೆ ಪೂಣ್ದೆಯಯ್; ವೈರಮಂ ವ್ರತವಾಂತೆಯಯ್,
ಹೇ ಸ್ನೇಹನಿಧಿ! ಒರ್ವನನ್ಯಾಯಿಯಾದೊಡೇಂ
ಸರ್ವ ರಾಕ್ಷಸರೆಂತು ಸಂಹಾರಕರ್ಹರಯ್?
ಕ್ಷಾತ್ರಕೇಂ ಕ್ರೌರ್ಯಂ ಕಿರೀಟಮೇ?"

[ಶ್ರೀರಾಮಾಯಣದರ್ಶನಂ, ಪು-೧೮೭]

ಒಬ್ಬ ಪಾಪಿಗಾಗಿ ಸರ್ವ ರಾಕ್ಷಸರನ್ನು ಕೊಲ್ಲುವ ಪಣತೊಟ್ಟು ವೈರವನ್ನು ಸ್ವಾಗತಿಸುತ್ತಿದ್ದೀಯೆ? ಇದು ಸರಿಯೆ ಎಂದು ಸಾಧ್ವಿ ಪ್ರೇಮಮಯಿ ರಾಮನನ್ನು ಪ್ರಶ್ನಿಸುತ್ತಾಳೆ. ರಾಮನು ವಿಶ್ವಪ್ರೇಮ ಸಾಧಿಸಿದ ತಂದೆಯಿಂದ ಪಡೆದ ಪ್ರೇಮಮಂತ್ರ ಪೂಜ್ಯವಾದದ್ದು, ಆದರೆ ಸಾತ್ವಿಕರಿಗೆ ಸಂಕಟಕೊಡುವ ವೈರಿಗಳು ವಧಾರ್ಹರೆಂದು ತಿಳಿಸುತ್ತಾನೆ. ರಾಮನ ಮಾತುಗಳಲ್ಲಿ ಸೀತೆಯು ವಿಶ್ವಪ್ರೇಮ ಸ್ಫುರಿಸುವ ಮಾತುಗಳನ್ನು ಆಡುತ್ತಿರುವ ಸಂಸ್ಕಾರದ ಬಗೆಗೆ ಮೆಚ್ಚುಗೆ ಇದೆ. ಆದರೆ ರಾಕ್ಷಸರ ವಿಷಯದಲ್ಲಿ ಈ ಸೂತ್ರ ಅನ್ವಯವಾಗದೆಂದು ಸತ್ಯವನ್ನೇ ನುಡಿದು ಸೀತೆಯನ್ನು ಸುಮ್ಮನಿರಿಸಲು ಪ್ರಯತ್ನಿಸಿದ್ದಾನೆ. ಸೀತೆ ನ್ಯಾಯ ದೃಷ್ಟಿಹೊಂದಿದ್ದು, ಅದರ ಬಗ್ಗೆ ಪತಿಯನ್ನು ಪ್ರಶ್ನಿಸುತ್ತಾಳೆ; ಇದು ಅವಳ ದಿಟ್ಟವಾದ ನ್ಯಾಯಪರ ಧೋರಣೆಗೆ ಸಾಕ್ಷಿಯಾಗಿದೆ.

ಪುಣ್ಯಾಶ್ರಮಂಗಳಂ ನೆವವೊಡ್ಡುತೈತಂದು
ತಮ್ಮ ನೆಲಮಂ ಸುಲಿಯುತೊಯ್ಯನೆ ವಸತಿಗೈದು,
ದಿನದಿನಕೆ ತಮ್ಮನೊತ್ತುವರಾರ್ಯರಾದೊಡಂ
ದಸ್ಯುಗಳೆ ದಿಟಮಲ್ತೆ?

[ಶ್ರೀರಾಮಾಯಣದರ್ಶನಂ, ಪು-೧೮೭]

ರಾಮನು ಸೀತೆಯ ಪ್ರಶ್ನೆಗಳಿಗೆ ಯಾವ ಉತ್ತರಗಳನ್ನೇ ನೀಡಲಿ, ಸೀತೆಯ ನ್ಯಾಯಪರ ಯೋಚನೆ, ವಿವೇಚನಾ ಮನೋಭಾವ, ಆಕೆಯು ಯಾರನ್ನೆ ನ್ಯಾಯದೃಷ್ಟಿಯಿಂದಲೇ ನೋಡುತ್ತಾಳೆಂದು, ಸ್ವತಂತ್ರವಾಗಿ ಯೋಚಿಸುವ ಬುದ್ಧಿವಂತಿಕೆ ಆಕೆಯದೆಂದು ಅಲ್ಪಸಂಭಾಷಣೆಯಲ್ಲಿಯೇ ತಿಳಿದುಬರುತ್ತದೆ.

ಕುವೆಂಪು ಅವರು ಮಹಾಕಾವ್ಯದಲ್ಲಿ ಅವಕಾಶ ಸಿಕ್ಕಾಗಲೆಲ್ಲ ಮುಂದಾಗುವ ಘಟನೆಗಳನ್ನು ಬಹಿರಂಗಪಡಿಸುತ್ತಾರೆ. ಋಷಿಗಳ ಬಾಯಿಂದ ಭವಿಷ್ಯವನ್ನು ಸಂಕಲ್ಪಿಸುವ ಮಾತುಗಳನ್ನು ಹಾಗೂ ಕಾರ್ಯಕಾರಣ ಸಂದರ್ಭಗಳನ್ನು ವಿವರಿಸಿತ್ತಾರೆ. ಹಾಗೆ ವಿವರಿಸುವಾಗ ಸೃಷ್ಟಿಯಲ್ಲಿನ ಎಷ್ಟೋ ರಹಸ್ಯಗಳು ಕಣ್ಮುಂದೆಯೇ ಬಿಚಿಕೊಳ್ಳುತ್ತವೆ. ಸೀತೆಗೆ ಅಗಸ್ತ್ಯರ ಆಶೀರ್ವಚನ ಹಾಗೂ ಪಂಚವಟಿಯ ಸ್ಥಳ ಆಯ್ಕೆ ಮಾಡುವ ಪ್ರಸಂಗ ತುಂಬ ಮುಖ್ಯವೆನಿಸುತ್ತವೆ.

ಮಗಳೆ, ಸೀತಾದೇವಿ
ನನ್ನಳಲ ಲೆಕ್ಕಿಸದೆ ಪತಿ ಹಿತಂಕರಿಯಾಗು;
ಲೋಕಶಂಕರಿಯಾಗು; ಮೇಣ್ ಯಮ ಭಯಂಕರಿಯಾಗು
ಲೋಕ ಮೂರಕೆ ಶೋಕವಾಗಿಹ ನಿಶಾಚರರ
ನಿಷ್ಠುರ ನೀಚಕುಲಕೆ!

ಸೀತೆಗೆ ಪತಿಯ ಹಿತವನ್ನು ಕೋರಿ ಲೋಕಪ್ರಸಿದ್ಧಳಾಗಲು ಹರಸುವ ಅಗಸ್ತ್ಯರು ಸೀತೆಯನ್ನು ಕಂಡು ಕಂಬನಿಮಿಡಿಯುತ್ತಾರೆ. ಮುಂದಾಗುವ ದುರಂತ ಬಹುಶಃ ಋಷಿಚಕ್ಷುವಿನ ಮುಂದೆ ಸುಳಿದು ಮರೆಯಾಗಿರಬಹುದು. ಅಗಸ್ತ್ಯರು ವರ್ಣಿಸಿದ ಪಂಚವಟಿಯ ಸೌಂದರ್ಯವನ್ನು ಸವಿಯುತ್ತಾ, ಮುಂದುವರೆದಿದ್ದ ಸೀತೆಯು "ಏನಮಂಗಳವೊ? ಕಾಲ್ ಜಾರುತಿದೆ ನನಗೆ!" ಎಂದು ಗೊಣಗುತ್ತ ಮುಂದುವರಿದು ಒಂದು ಸ್ಥಳದಲ್ಲಿ ನಿಂತು ಈ ತಾಣವೇ ವಾಸಯೋಗ್ಯವೆನ್ನುತ್ತಾಳೆ. ರಾಮನು" ನಿನಗೆ ಕಾಲ್ದಣಿದೆಡೆಯೆ ನಮಗಕ್ಕುಮಾಶ್ರಮಂ!"[೩೨] ಎಂದು ಅಣಕಮಾಡುತ್ತಾನೆ. ಆದರೆ ಲಕ್ಷ್ಮಣನು ಆ ಸ್ಥಳವನ್ನು ಪರೀಕ್ಷಿಸಿ ಸೀತೆಯ ಮಾತನ್ನು ಅನುಮೋದಸಿ ಪರ್ಣಕುಟಿಯನ್ನು ರಚಿಸುತ್ತಾನೆ. "ಕಾವ್ಯದ ಮುಂದಿನ ಘಟನೆಗಳನ್ನು ಸಂದರ್ಭದೊರೆತಾಗಲೆಲ್ಲ ಧ್ವನಿಸುತ್ತ, ಅಖಂಡಕಾವ್ಯ ತಮ್ಮ ಏಕದೃಷ್ಟಿಯಲ್ಲಿ ಗ್ರಹಿಸಿರುವ ಕವಿ ಈ ಸನ್ನಿವೇಶವನ್ನು ವರ್ಣಿಸುವ ಸೀತೆ ತನ್ನ ಚಾರಿತ್ರ್ಯದ ಪರೀಕ್ಷೆಯ ಪ್ರಯೋಗಶಾಲೆಯನ್ನು ತಾನೇ ಆಯ್ಕೆ ಮಾಡಿಕೊಂಡಳು. ಅಪ್ರಜ್ಞಪೂರ್ವಕವಾಗಿ ತನ್ನನ್ನು ಅಪೂರ್ವಶೋಧನೆಗೆ ಒಡ್ಡಿಕೊಂಡಳು ಎಂಬುದನ್ನು ಮಿಂಚಿಸುತ್ತದೆ".[೩೩] ಸೂಕ್ಷ್ಮವಾಗಿ ಸೀತಾವ್ಯಕ್ತಿತ್ವವನ್ನು ಅನಾವರಣಗೊಳಿಸುತ್ತ ಸಾಗುವ ಕವಿಯು ರಾವಣನಿಂದ ಅಪಹರಣಗೊಂಡು ಅನಂತರವಂತೂ ಪೂರ್ಣವಾಗಿ ಸೀತೆಯ ಪಾತಿವ್ರತ್ಯವನ್ನು ಲೋಕಕ್ಕೆ ತಿಳಿಯುವಂತೆ ಮಹತ್ತರವಾಗಿ ಚಿತ್ರಿಸುತ್ತಾರೆ.

ಸೀತೆರಾಮಲಕ್ಷ್ಮಣರು ವನವಾಸ ಸಮಯದಲ್ಲಿ ಭರತನನ್ನು, ಊರ್ಮಿಳೆಯನ್ನು, ಒಂದಲ್ಲ ಒಂದು ವಿಷಯ ಸಾದೃಶ್ಯದಿಂದ ನೆನೆಯುತ್ತಾರೆ. ಗೋಧಾವರಿಯನ್ನು ಕಂಡು ಸರಯೂ ನದಿಯನ್ನು, ಕಾಡಿನ ಸೌಂದರ್ಯದ ಜೊತೆ ನಾಡನ್ನು ನೆನೆಯುತ್ತಿರುವುದು ಸಹೃದಯರ ಬೆರಗಿಗೆ ಕಾರಣವಾಗುತ್ತದೆ. ವನವಾಸದ ಅವಧಿ ಮುಗಿಯುತ್ತಿದೆ; ಶುಭಮುಹೂರ್ತ ನಿಶ್ಚಯಿಸಿ ಹೊರಟು ಅಯೋಧ್ಯೆಯನ್ನು ಸಕಾಲದಲ್ಲಿ ಸೇರಬೇಕೆಂದು ಚರ್ಚಿಸುತ್ತಾ ಬರುತ್ತಿರುವವರ ಮೇಲೆ ಬಿದಿರುಮೆಳೆಯ ಹಿಮಮಣಿಗಳು ಉದುರುತ್ತವೆ. ಈ ಸಂದರ್ಭವನ್ನು ಕುರಿತು ಸೀತೆ, ಲಕ್ಷ್ಮಣರು ಆಡುವ ಮಾತುಗಳು ಅವರಲ್ಲಿರುವ ಅನ್ಯೋನ್ಯತೆಯ ಉನ್ನತಿಗೆ ಸಾಕ್ಷಿಯಾಗುತ್ತವೆ.

"ದೇವಿಯರನಭಿನಂದಿಸುತ್ತಿಹಳರಣ್ಯಸಖಿ!"  
"ಅಲ್ತಲ್ತು. ತಂಗಿ ಊರ್ಮಿಳೆಯ ಕಣ್ಣೀರುಗಳ್,ಮುನ್  
ಬರ್ಪ ಸೊಗಕುರ್ಕಿ, ಮುಂಗಾಣ್ಕೆಗಳನರ್ಪಿಸಿಹವೈ  
ಪ್ರಾಣೇಶ್ವರನ ಚರಣತಲಕೆ!" "ಏಂ ಜಾಣ್ಮೆನುಡಿ!"  
ಎನುತೆ ನಾಣ್ಚಿದ ಲಕ್ಷ್ಮಣಂ,ಮತ್ತೆ: "ಅಣ್ಣಯ್ಯ  
ನಿಮ್ಮ ಪಟ್ಟಾಭಿಷೇಕಕ್ಕೆ ಇಂತುಟೆ ವಲಂ  
ಮುತ್ತಿನಮಳೆಗಳಕ್ಕೆ ಎಂದು ಪರಿಸಿದಳಲ್ತೆ  
ಸರ್ವಮಂಗಳೆ, ಜಗಜ್ಜನನಿ!"

[ಶ್ರೀರಾಮಾಯಣದರ್ಶನಂ, ಪು–೨೦೩]

----------

೩೨. ಕುವೆಂಪು, ಶ್ರೀರಾಮಾಯಣದರ್ಶನಂ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು ೨, ಎರಡನೇ ಆವೃತ್ತಿ೨೦೦೪, ಪು.೧೯೮.

೩೩. ಅದೇ ಪು.೨೪೬.

ಈ ಪ್ರಸಂಗದಿಂದ ಅವರಲ್ಲಿ ಬೆಸೆದಿರುವ ಪ್ರೀತಿಯ ಬಂಧನ, ಹಾಗೂ ಹೇಗೆ ಒಬ್ಬೊಬ್ಬರೂ ಅವರೆಲ್ಲರ ಶ್ರೇಯಸ್ಸಿಗಾಗಿ ಚಿಂತಿಸುತ್ತಾರೆಂದು ಅರಿವಾಗುತ್ತದೆ. ಸೀತೆಗೆ ಊರ್ಮಿಳೆಯ ಬಗ್ಗೆ,ಲಕ್ಷ್ಮಣನ ಬಗ್ಗೆ ಇರುವ ಕಾಳಜಿ, ಲಕ್ಷ್ಮಣನಿಗೆ ರಾಮನ ಅಭ್ಯುದಯದ ಬಗೆಗಿರುವ ಕಾಳಜಿ ವ್ಯಕ್ತವಾಗಿದೆ. ಆದರೆ ರಾಮನು ಮಾತ್ರ ಕಳವಳಪಡುತ್ತಾ ಎದೆಯ ಕುದಿಗೆ ಚಿಂತಿಸುತ್ತಾ ನಡೆಯುತ್ತಾನೆ. ಮುಂದಾಗುವ ದುರಂತ ರಾಮನ ಮನಕ್ಕೆ ಮುನ್ಸೂಚನೆ ಎಂಬಂತೆ ಕಳವಳವನ್ನು ಉಂಟುಮಾಡುತ್ತದೆ.

ರಾಮಲಕ್ಷ್ಮಣರನ್ನು ಮೋಹಿಸಿ ಬರುವ ಲಂಕೇಶ್ವರನ ಸಹೋದರಿ ಚಂದ್ರನಖಿಯ ಆಥಿತ್ಯವನ್ನು ತಿರಸ್ಕರಿಸುವ ರಾಮನು ಆಕೆಯನ್ನು ಪರಿಹಾಸ್ಯ ಮಾಡುತ್ತಾನೆ. ಅಣ್ಣನಿಂದ ವೃತ್ತಾಂತ ಅರಿಯುವ ಲಕ್ಷ್ಮಣನು ಕಾಮರೂಪಿಣಿಯಾದ ಚಂದ್ರನಖಿ ಶೂರ್ಪನಖಿಯಾಗು ಭೀಕರಾಕಾರ ತಾಳಿದಾಗ ತನ್ನ ಖಡ್ಗಾಘಾತದಿಂದ ಹಾಗೂ ಪ್ರಣಯ ನಿರಾಶೆಯಿಂದ ಕೆರಳಿ ಚಂದ್ರನಖಿ ಸೇಡುತೀರಿಸಿಕೊಳ್ಳುವ ಚಲದಿಂದ ರಾವಣನಿಗೆ ತನ್ನ ಅವಮಾನವನ್ನು ಸೋದರರ ವಧೆಯನ್ನುನ ತಿಳಿಸಿ, ಸೀತೆಯ ಸೌಂದರ್ಯವನ್ನು ಹೊಗಳಿ, ಆಕೆಯನ್ನು ಅಪಹರಿಸುವ ದುರಂತ ಬೀಜವನ್ನು ರಾವಣನ ಮನದಲ್ಲಿ ಬಿತ್ತುತ್ತಾಳೆ.

ಪತಿವ್ರತೆಯ ಅಪಹರಣದಿಂದ ಲಂಕೆ ನಾಶವಾಗುತ್ತದೆಂದು, "ನಿನ್ನ ವಿನಾಶಕ್ಕೆ ರಾಮಬಾಣದ ಅಗತ್ಯವಿಲ್ಲ; ಪತಿವ್ರತೆಯ ಅಪಹರಣವೇ ಸಾಕು" ಎಂದು ರಾವಣನಿಗೆ ಬುದ್ದಿ ಹೇಳುವ ಮಾರೀಚನು ರಾವಣನ ಒತ್ತಾಯಕ್ಕೆ ಮಣಿದು ಸೀತಾಪಹರಣಕ್ಕೆ ಸಹಕರಿಸುತ್ತಾನೆ. ಸೀತೆಯ ಅಪಹರಣದ ಮೂಲಕವೇ ಅನೇಕ ರಾಕ್ಷಸ ಜನ್ಮದ ಉದ್ಧಾರವಿದೆ. "ಪ್ರಬುದ್ಧಯಾಧ ಗುಣವತಿಯಾದ ಲಘುಮೋಹಗಳನ್ನು ಗೆದ್ದ ಸೀತೆ ಕೂಡ ಸ್ವರ್ಣಮೃಗದ ಮೋಹಕ್ಕೆ ಒಳಗಾಗುತ್ತಾಳೆ; ತನ್ನ ಹೆಣ್ತನದ ಸಾಮಾನ್ಯತೆಯನ್ನು ಪ್ರದರ್ಶಿಸುತ್ತಾಳೆ. ಲಕ್ಷ್ಮಣನ ಎಚ್ಚರಿಕೆಯ ಮಾತುಗಳನ್ನು ಅಲಕ್ಷಿಸುತ್ತಾಳೆ; ಅಪಾಯವನ್ನು ತಾನಾಗಿಯೇ ಆಹ್ವಾನಿಸುತ್ತಾಳೆ. ಆದರೆ ಸಾಮಾನ್ಯರ ಜಾರಿಕೆ ಅವನತಿಯ ಪ್ರಥಮವಾದರೆ, ಸೀತೆಯ ಜಾರಿಕೆ ಏರಿಕೆಯ ಸೋಪಾನವಾಗುತ್ತದೆ. ಇಲ್ಲಿ ಪತನಕ್ಕೆ ಕಾರಣವಾಗ ಬಹುದಾದ ವ್ಯಕ್ತಿ ದೌರ್ಬಲ್ಯ ಉದ್ಧಾರದ ಹೇತುವಾಗುತ್ತದೆ. 'ದೇವಿಯೀ ಕೊನೆಯ ಬಯಕೆಯಂ ತೀರ್ಚಿದಪೆನಶ್ರಮದಿ' ಎಂಬ ರಾಮ ವಾಣಿಯಲ್ಲಿ ಈ ಇಂಗಿತವೂ ಅಡಗಿದೆ. ತನಲ್ಲಿನ ಲೌಕಿಕ ಆಕಾಂಕ್ಷೆಯೆಲ್ಲ ಶೋಷಿತವಾಗದೆ ಶೋಧಿತವಾಗದೆ ದೈವಿಕಾಂಶದ ಬೀಜ ಮೊಳೆಯುವುದೆಂತು? ಅಂತೆಯೇ ಇದು ಸೀತೆಯ ಲೌಕಿಕ ಬಯಕೆ ಮತ್ತು ಆಧ್ಯಾತ್ಮಿಕ ಅಭಿವರ್ಧನೆಯ ಆರಂಭ. ರಾಮ ಆ ಬಯಕೆಯ ಮೂಲವನ್ನೇ ಕೊಲ್ಲುತ್ತಾನೆ, ಭ್ರಮೆಯನ್ನು ಬಯಲುಮಾಡುತ್ತಾನೆ".[೩೪]

ಮಾರೀಚನು ರಾಮಬಾಣದಿಂದ ಸಾಯುವುದಕ್ಕೆ ಮುಂಚೆ ಓ ಲಕ್ಷ್ಮಣಾ! ಓ ಲಕ್ಷ್ಮಣಾ! ಎಂದು ಅರಣ್ಯಕ್ಕೆಲ್ಲಾ ವ್ಯಾಪಿಸುವಂತೆ ರೋಧನಮಾಡುತ್ತಾನೆ. ಈ ಕೂಗು ಸೀತೆಯನ್ನು ಬೆಚ್ಚಿಸುತ್ತದೆ. ಲಕ್ಷ್ಮಣನು ಅತ್ತಿಗೆಯ ದುಃಸ್ಥಿತಿಗೆ ಕನಿಕರಿಸಿ ಇದು ಮಾಯೆ ಅಗ್ರಜನ ಧ್ವನಿ ಇದಲ್ಲ ರಾಮ ಅಪ್ರಾಕೃತ ಆತನಿಗೆ ಕೇಡಾಗದು ಎಂದು ಸೀತೆಯನ್ನು ಸಮಾಧಾನಪಡಿಸಲು ಪ್ರಯತ್ನಿಸುತ್ತಾನೆ. ಆ ಕೂಗಿನ ಮಾಯೆಯ ಮುಸುಕಿನಲ್ಲಿ ರಾಮನಿಗೆ ಅಪಾಯ ಸಂಭವಿಸಿತ್ತೆಂದು ನಂಬಿ ಸೀತೆ ಲಕ್ಷ್ಮಣನನ್ನು ನಿಂದಿಸುವಂಥ ಮಾತುಗಳು ಸಾಧ್ವಿ ಸೀತೆಗೆ ಶೋಭೆಯೆನಿಸುವುದಿಲ್ಲ.

----------

೩೪. ಅದೇ. ಪು. ೨೪೭

ಪರಿಸ್ಥಿತಿ ಸೀತೆಯ ಮನಸ್ಸನ್ನು ಆವೇಗಕ್ಕೆ ಸಿಲುಕಿಸಿ ಇಷ್ಟು ದಿನ ಇಲ್ಲದಿದ್ದ ಅನುಮಾದ ಬೀಜಗಳನ್ನು ಸೀತೆಯಲುಟ್ಟಿಸಿ ಲಕ್ಷ್ಮಣನ ಮನಸ್ಸು ಕದಡುವಂತೆ ಮಾಡುತ್ತದೆ. ಬುದ್ಧಿವಂತೆಯಾದ ಸೀತೆಯು ಆಲೋಚಿಸುವ ಶಕ್ತಿಯನ್ನೇ ಕಳೆದುಕೊಂಡು ಲಕ್ಷ್ಮಣನ ಮೇಲೆ ಸಾಮಾನ್ಯ ಸ್ತ್ರೀತಯಂತೆ ಅಪವಾದವನ್ನು ಹೊರಿಸುವುದು ಅಷ್ಟು ಸಮಂಜಸವಾಗಿ ತೋರುವುದಿಲ್ಲ:

"ಭ್ರಾತೃ ಘಾತಕ ಪಾಪಿ,
ಸಾಯಿ, ನಡೆ, ತೊಲಗು ಕಣ್ಬೊಲದಿಂ!ಸುಮಿತ್ರಾತ್ಮ
ಜಾತ ಪಾತಕವೊ ನೀಂ ಗೋಮುಖವ್ಯಾಘ್ರನೊಲ್
ಬಂದೆಯೆಮ್ಮೊಡಗೂಡಿ, ಪೂರ್ವಜ್ಮದ ಪಾಪದಾ
ಕರ್ಮ ಪಾಕಂ ಬರ್ಪವೋಲ್!"

[ಶ್ರೀರಾಮಾಯಣದರ್ಶನಂ, ಪು–೨೪೫]

ಸೀತೆ ಲಕ್ಷ್ಮಣನನ್ನು ಭಾತೃಘಾತಕ, ಪಾಪಿ, ಗೋಮುಖವ್ಯಾಘ್ರ ಎಂದೆಲ್ಲಾ ಹೀಯಾಳಿಸಿದರೂ ಲಕ್ಷ್ಮಣನು ಅಣ್ಣನಾಜ್ಞೆಯನ್ನು ಮೀರಬಾರದೆಂದು ಎಲ್ಲವನ್ನು ಸಹಿಸಿ ಸೀತೆಗೆ ನೈಜ ಸ್ಥಿತಿಯನ್ನು ಅರಿವಾಗಿಸಳು ಪ್ರಯತ್ನಸುತ್ತಾನೆ. 'ನೀವು ಅಣ್ಣನನ್ನು ಪ್ರೀತಿಸುವ ಮುಂಚೆಯೇ ನಾನು ಅವನನ್ನು ಪ್ರೀತಿಸಿದೆ'[೩೫] ಈ ರೀತಿ ಆಡಿದರೆ ಮುಂದೆ ನೋವನ್ನು ನೀವೇ ಅನುಭವಿಸುತ್ತೀರಿ ಎಂದು ಪರಿಪರಿಯಾಗಿ ಬೇಡುತ್ತಾನೆ. ಸೀತೆಯ ನಿಂದನೆ ಅತಿರೇಕವನ್ನು ತಲುಪುತ್ತದೆ. ಇಡೀ ಕಾವ್ಯದಲ್ಲೇ ಸೀತೆಯ ಬಾಯಿಂದ ಇಷ್ಟು ಕಠೋರವಾದ ನುಡಿಗಳು ಬರುವುದಿಲ್ಲ. ಈ ಪರಿಸ್ಥಿತಿ ಸೀತೆಯ ಬುದ್ಧಿಗೆ ಬಹುಶಃ ಮಂಕು ಬಡಿಸಿತ್ತೇನೊ? ಎನಿಸುತ್ತದೆ.

"ಎಲವೋ ಲಕ್ಷ್ಮಣಾ
ಎಳೆಯ ಮುಳ್ ಚುಚ್ಚಲ್ಕೆ ನೋವಲ್ತುದುವೆ ಮೆಚ್ಚು
ಬೆಳೆದರಾ ಮುಳ್, ಅದರ ಕಚ್ಚು ಮುತ್ತಹುದೇ ಪೇಳ್
ಎಳೆಯ ಕರು ಬೆಳೆದ ಮೇಲದರ ತಾಯನೆ ಬೆದೆಗೆ
ಬಯಸಿಪುದಯ್ಯೊ!....."

[ಶ್ರೀರಾಮಾಯಣದರ್ಶನಂ, ಪು–೨೪೫]

ಕೇಳಿಬಂದ ಆರ್ತಧ್ವನಿಯು ಸೀತೆಯ ಮನಸ್ಸನ್ನು ಯಾವ ಮಟ್ಟಕ್ಕೆ ಕದಡಿದೆ ಎಂದು ಸಹೃದಯರಿಗೆ ವೇದ್ಯವಾಗುತ್ತದೆ. ಲಕ್ಷ್ಮಣನ ನಿಶ್ಚಲತೆಯನ್ನು ಕದಲಿಸುತ್ತದೆ. ಸೀತೆಯ ಮತಿವಿಕಲತೆ ಕಂಡು ಲಕ್ಷ್ಮಣ ತತ್ತರಿಸಿ ದಿಕ್ಕು ತೋಚದಂತಾಗಿ 'ಪೆಣ್ತನದ ಕಲ್ತನಕ್ಕೆಲ್ಲೆ ಮೇಣೆಣೆಯುಂಟೆ?' ಎಂದು ಸೀತೆಯ ಬಾಯ್ಗತ್ತಿಗೆ ಬೆಚ್ಚಿ ಅಣ್ಣನಾಜ್ಞೆಯನ್ನು ಮೊದಲ ಸಲ ಮೀರಿ ಅತ್ತಿಗೆಯನ್ನು ಒಬ್ಬಳನ್ನೇ ಬಿಟ್ಟು ರಾಮನ್ನು ಹುಡುಕಲು ನಡೆಯುತ್ತಾನೆ. ರಾವಣನ ಕಾರ್ಯ ಸಿದ್ಧಿಗೆ ಹೆದ್ದಾರಿಯೇ ನಿರ್ಮಾಣವಾದಂತಾಗಿ ಯತಿವೇಷದಿಂದ ಸೀತೆ ಇದ್ದ ಪರ್ಣಕುಟಿಯಲ್ಲಿಗೆ ಬರುತ್ತಾನೆ.ಯತಿಯನ್ನು ಗಮನಿಸಿದ ಸೀತೆ ಅವನ ವಿನಯವಿಲ್ಲದ ಗತ್ತಿನ ನಡಿಗೆಯಲ್ಲಿಯೇ ಸಂಶಯ ಬಂದರೂ ತೋರಗೊಡದೆ ಮಾತನಾಡುತ್ತಾ ರಾಮಲಕ್ಷ್ಮಣರು ಬರುವವರೆಗೆ ಆತನನ್ನು ನಿಲ್ಲಿಸಲು ಪ್ರಯತ್ನಿಸುತ್ತಾಳೆ. ರಾವಣನು ಸೀತೆಗೆ ತನ್ನ ಪರಿಚಯವನ್ನು ಮಾಡಿಕೊಂಡೇ ಆಕೆಯನ್ನು ಲಂಕೆಗೆ ಬರುವಂತೆ ಒತ್ತಾಯಿಸಿ ಅಪಹರಿಸುತ್ತಾನೆ.

----------

೩೫. ಕುವೆಂಪು, ಶ್ರೀರಾಮಾಯಣದರ್ಶನಂ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು ೨, ಎರಡನೇ ಆವೃತ್ತಿ೨೦೦೪, ಪು.೨೪೫.

ಲಂಕೆಗೆ ಸೀತೆಯನ್ನು ಕದ್ದೊಯ್ದು ರಾವಣನು ಆಕೆಯನ್ನು ಗುಪ್ತಗೃಹದಲ್ಲಿಟ್ಟು ಚಂದ್ರನಖಿಯನ್ನು ಕರೆತರುತ್ತಾನೆ. ಸೀತೆಯನ್ನು ಗಮನಿಸಿದ ಚಂದ್ರನಖಿಯು ಆಕೆಯಲ್ಲಿರುವ ದೃಢತೆ, ಛಲಗಳ ಬಗ್ಗೆ,ಆತ್ಮತೇಜಸ್ಸಿನ ಬಗ್ಗೆ ಮೆಚ್ಚುಗೆ ಸೂಚಿಸಿ ಅಣ್ಣನಿಗೆ ಅದನ್ನು ತಿಳಿಸುತ್ತಾಳೆ.

"ಇನ್ನೆಗಂ
ನೀ ಗೆಲಿದ, ನಿನ್ನನೊಲಿದತ್ತಿಗೆಯರಂತಲ್ಲಮೀ
ಪೆಣ್ಕಣ! ನಿನ್ನ ಛಲಕಿವಳ ಛಲ ಪಡಿಮಲೆಯೆ
ಗೆಲ್ವರಾರದನರಿಯೆನಯ್ ಮೂರ್ಛೆಯೊಳುಮೆಂತು
ದೃಢತೆ ಪಲ್ಗಚ್ಚಿದಂತಿದೆ. ನೋಡು, ಕೋಮಲೆಯ
ಮುಖದಿ!"

[ಶ್ರೀರಾಮಾಯಣದರ್ಶನಂ, ಪು-೩೨೪]

ರಾವಣನು ಛಲಕ್ಕೆ ಪ್ರತಿಯಾಗಿ ಸೀತೆಯು ಛಲದಿಂದ ದೃಢವಾಗಿ ನಿಲ್ಲುತ್ತಾಳೆಂದು ಆಕೆಯ ಮೂರ್ಚಸ್ಥಿತಿಯ ಮುಖಮುದ್ರೆಯನ್ನು ಕಂಡೇ ತಿಳಿಯುವ ಚಂದ್ರನಖಿ ಸೂಕ್ಷ್ಮಸ್ವಭಾವಿ ಚತುರೆ ಎಂದು ತಿಳಿಯುತ್ತದೆ. ರಾವಣನು ಸೀತೆಯನ್ನು ಚಂದ್ರನಖಿಗೊಪ್ಪಿಸಿ ತನ್ನಾಸೆ ಕೈಗೂಡುವಂತೆ ಮಾಡಲು ಹೇಳುತ್ತಾನೆ. ಸೀತೆಯ ಮುಂದೆ ಚಂದ್ರನಖಿ ವೈಭವವನ್ನು ಸೃಷ್ಟಿಸಿದರೂ ಕಣ್ಣೆತ್ತಿಯೂ ನೋಡುವುದಿಲ್ಲ ಚಂದ್ರನಖಿಯು ಅಣ್ಣನು ರಾಜಕೀಯ ಸಾಧಿಸುವುದಕ್ಕಾಗಿ ಇಂಥ ತಪ್ಪನ್ನೆಸಗಿದ್ದಾನೆಂದು; ತಾಳ್ಮೆಯಿಂದ ನಡೆಯಬೇಕೆಂದು ಬೇಡುತ್ತಾಳೆ. ರಾವಣನ ಹೃದಯ ಔದಾರ್ಯ, ಆಸೆಗಳನ್ನು ತಿಳಿಸಲೆತ್ನಿಸಿದ ಚಂದ್ರನಖಿಗೆ ಸಾಕುಮಾಡೆನ್ನುತ್ತಾಳೆ., ಅಲ್ಲಿನ ವೈಭವಕ್ಕೆ ಕುರುಡಿಯಾಗಿ, ಕಿವುಡಿಯಾಗಿ ಹೊರಗನ್ನು ಮರೆತು ಪತಿಧ್ಯಾನದಲ್ಲಿ ನಿರತಳಾಗುತ್ತಾಳೆ. ಮೀಯಲಿಲ್ಲ,ಉಡಲಿಲ್ಲ, ಉಣಲಿಲ್ಲ, ಅಯೋಧ್ಯೆಗೆ ಹಿಂತಿರುಗುವ ಸಂಭ್ರಮದಿಂದ ಅಂದು ಉಟ್ಟ ನಾರುಡೆಯೆ ಪ್ರಿಯ ದರ್ಶನವಾಗುವ ತನಕ ರಕ್ಷೆಯಾಗಲೆಂದು ಸೀತೆ ನಿಶ್ಚಯಿಸಿಬಿಡುತ್ತಾಳೆ.

ಯಾರಿಗೂ ಯಾವ ಕಾರಣಕ್ಕೂ ಸ್ವಲ್ಪವೂ ಅಂಜದೇ ಸೋಲದೇ ಇದ್ದ ರಾವಣನು ಸೀತೆಯ ಸ್ಥಿತಿಗೆ ಕನಿಕರಿಸಿ ಅಶೋಕವನದ ಎಲೆಮನೆಗೆ ಸ್ಥಳಾಂತರಿಸುತ್ತಾನೆ. ಅಲ್ಲಿನ ಸುಂದರ ಪರಿಸರ ಸೀತೆಯ ತಪಸ್ಸಿಗೆ ಪೂರಕವಾಗುತ್ತದೆ. ಅಶೋಕವನ ಸೀತೆಯ ಆತ್ಮಸಾಧನೆಯ ತಪೋಭೂಮಿಯಾಗುತ್ತದೆ.

ಮಿಂದಳಿಲ್ಲಾಕೆ
ಮೇಣುಟ್ಟುದಂ ಬಿಟ್ಟು ಮಾರುಟ್ಟಳಿಲ್ಲಾಕೆ;
ಕೊಟ್ಟ ಪೆಣ್ ಬೇರ್ಗಳಂ ವಿಶ್ವದೇವರ್ಕಳಿಗೆ
ನೈವೇದ್ಯಮಂ ಮಾಡುತುಂಡಳ್ ಪ್ರಸಾದಮಂ
ಪ್ರಾಣೇಶನಾಗಮನದಾಸೆಯಿಂದನ್ನೆಗಂ
ಪ್ರಾಣಸಂಧಾರಣಾರ್ಥಂ. ಮತ್ತವನವರತಮಾ
ರಾಮನಾಗಮನಕ್ಕೆ ರಾವಣೋದ್ಧಾರಕ್ಕೆ
ಮೇಣಾತ್ಮಮಂಗಳಕೆ ಆ ದೇವಿ, ವೈರಮಂ
ಹಿಂಸೆಯಂ ತೊರೆಯಲೆಳಸುವ ತಪದಸಾಧನೆಗೆ
ಪ್ರಾರ್ಥನಾ ನಿರತಳಾದಳ್ ಶಿವದ ಸಫಲತೆಗೆ:

[ಶ್ರೀರಾಮಾಯಣದರ್ಶನಂ, ಪು-೩೩೦]

ಈ ಒಂದು ಸಂದರ್ಭದಿಂದಲೇ ಕವಿಯು ಅಶೋಕವನದಲ್ಲಿ ಸೀತೆಯು ಹತ್ತುತಿಂಗಳು ಯಾವರೀತಿ ಕಳೆದಳೆಂಬುದನ್ನು ಚಿತ್ರಸಿದ್ದಾರೆ. ಸೀತೆ ರಾಮನಾಗಮನಕ್ಕೆ ಕಾಯುವಂತೆ, ಪ್ರಾರ್ಥಿಸುವಂತೆ ರಾವಣನ ಉದ್ಧಾರಕ್ಕೂ ಪ್ರಾರ್ಥಿಸುತ್ತಾಳೆ. ಮಂಡೋದರಿಯ ದರ್ಶನದ ಅನಂತರವಂತೂ ಈ ಆಕಾಂಕ್ಷೆ ಮತ್ತಷ್ಟು ಬಲವನ್ನು ಪಡೆಯುತ್ತದೆ. ಸೀತೆಯು ತನ್ನ ಪ್ರಭಾವಲಯದಲ್ಲಿ ಸಿಕ್ಕವರನ್ನು ಸಂಪೂರ್ಣ ಪರಿವರ್ತಿಸುವ ಶಕ್ತಿಯನ್ನು ಹೊಂದಿರುತ್ತಾಳೆ. ಸೀತೆ ಎಲ್ಲರನ್ನೂ ಸಾತ್ವಕ ರೀತಿಯಲ್ಲಿ ಉದ್ಧರಿಸುತ್ತಾಳೆ. ರಾಮನ ಪ್ರಿಯಸತಿಯಿಂದಲೇ ರಾವಣನ ಅಭ್ಯುದಯ ಎಂದು ತಿಳಿಯುವ ಪತಿವ್ರತಾ ಶಿರೋಮಣಿ ಮಂಡೋದರಿಯು 'ಶಿವನ ಕೃಪೆಯಿಂದ ನಿನ್ನ ಭ್ರಾಂತಿಯನ್ನು ಸೀತೆಯು ಹೋಗಲಾಡಿಸುತ್ತಾಳೆಂದು' ರಾವಣನಿಗೆ ಹೇಳುತ್ತಾಳೆ. ಸೀತೆಯು ಸತತವಾದ ಧ್ಯಾನ ತಪಸ್ಸನ ಫಲವಾಗಿ ಅತೀಂದ್ರಿಯವಾದ ಸಿದ್ಧಿಯನ್ನು ಪಡೆದಿರುತ್ತಾಳೆ. ಆದ್ದರಿಂದಲೇ ರಾವಣನ ಬಗ್ಗೆ ಸೀತೆಗೆ ದ್ವೇಷ ತಿರಸ್ಕಾರಗಳಿಗಿಂತಲೂ ಕರುಣೆ ಅನುಕಂಪಗಳು ಹೆಚ್ಚಾಗಿರುತ್ತವೆ. ನಯವಿನಯದ ಮಾತುಗಳಿಂದ ತನನ್ನು ಒಲಿಸಿಕೊಳ್ಳಲು ಪ್ರಯತ್ನಿಸಿದ ರಾವಣನಿಗೆ ಸೀತೆ ಕೊಡುವ ಉತ್ತರ ಆಕೆಯ ಹೃದಯ ಸಂಸ್ಕಾರವನ್ನು ಎತ್ತಿತೋರಿಸುತ್ತದೆ.

"ಬಿದಿಯ ಬೇಳ್ವೆಗೆ ಬಂದ ಪಶು ನೀಂ, ದಶಗ್ರೀವ
ಮರುಗುವೆನು ನಿನಗೆ' ತಾಯ್ ಕೇಡಾಡಿ ಕಂದಂಗೆ
ಮರುಗುವೊಲ್. ನನ್ನ ಕಲ್ಲೆರ್ದೆ ಕರಗುತಿದೊ ನಿನಗೆ
ಮೆಲ್ಲ ತಪ್ಪುದು ದಿಟಂ! ನೀನೆಂದಮಾಳ್ಕೆಯಿಂ
ಸಾಧನೆಗಸಾಧ್ಯಮಿಲ್ಲೆಂಬರೈ. ಉಪಾಸಿಸಲ್
ಕಲಾಂತರಕೆ ಕಲ್ಲುಮೀಶ್ವರನ ಕೃಪೆಯಾಗಿ
ಪರಿಣಮಿಸುದೆಂತಂತೆ, ಕಾಲಾಯಸಕೆ ಸಮಂ
ನಿನ್ನ ಕಲ್ಲೆರ್ದೆ ಕರಗಿ ಮೆಲ್ಲಿಪ್ಪುದು ದಿಟಂ!
ನೋಂತಿರ್ಪೆನನವರತಮಾತ್ಮದುದ್ಧಾರಕ್ಕೆ

[ಶ್ರೀರಾಮಾಯಣದರ್ಶನಂ, ಪು-೩೩೮]

ಇಂಥ ಮಾತುಗಳಿಂದ ಸೀತೆ ರಾವಣನ ಮನಃಪರಿವರ್ತನೆಯನ್ನು ಮಾಡಲು ಪ್ರಯತ್ನಿಸುತ್ತಾಳೆ. ಆಕೆಯ ತೇಜಸ್ಸಿನ ಮುಂದೆ ರಾವಣನ ಕಲ್ಲೆದೆಯೂ ಕರಗಬೇಕಾಗುತ್ತದೆ. ಮಂಡೋದರಿಯ ಭಕ್ತಿಯೂ ಇದರೊಂದಿಗೆ ಸೇರಿ ರಾವಣನ ಆತ್ಮೋದ್ಧಾರಕ್ಕೆ ಹೆಚ್ಚಿನ ಮಹತ್ವ ದೊರೆಯುತ್ತದೆ. ಸತತವಾಗಿ ಏಳುರಾತ್ರಿಗಳು ಮಂಡೋದರಿ ಸೀತೆಯ ದರ್ಶನಕ್ಕಾಗಿ ಬಂದರೂ ರಾಣನಾಜ್ಞೆಯನ್ನು ಮೀರಲಾರದೆ ದೂರದಿಂದಲೇ ನಮಸ್ಕರಿಸಿ ಹಿಂದಿರುಗುತ್ತಾಳೆ. ಅದನ್ನು ಕಂಡು ಕನಿಕರಗೊಂಡ ಸೀತೆಯು ನೀನಾರು ಯಾರ ರಕ್ಷೆಗೊ ವ್ರತವನ್ನು ಹಿಡಿದಂತೆ ಕಾಣುತ್ತದೆ ಎಂದು ನುಡಿಸುತ್ತಾಳೆ. ರಾವಣನ ಪತ್ನಿ ಮಂಡೋದರಿ ಎಂದು ತಿಳಿದರೂ ಆಕೆಯ ಸಜ್ಜನಿಕೆಗೆ ಸೀತೆ ವಿಸ್ಮಯಗೊಂಡು ಆಕೆಯನ್ನು ದೇವತೆ ಎಂದು ಹೊಗಳುತ್ತಾಳೆ. ಮಂಡೋದರಿ ವ್ರತದಿಂದ ರಾವಣನ ಪಾಪದಹಿಸಿ; ಎಲ್ಲರಿಗೂ ಸುಖಶಾಂತಿ ಲಭಿಸಲೆಂದು ಸೀತೆಗೆ ಹಣೆಚಾಚಿ ನಮಸ್ಕರಿಸಿ ಹೊರಡುತ್ತಾಳೆ. ಮಂಡೋದರಿಯ ಪತಿಯ ಮೇಲೆ ಸೀತೆಗೆ ಕರುಣೆ ಮೂಡುತ್ತದೆ. ಸೀತೆ ಅನಸೂಯೆಯಿಂದ ಪಡೆದ ಉಪದೇಶವನ್ನು ಸ್ಮರಿಸಿ ಸುರಕ್ಷೆಯನ್ನು ನೆನೆದು ಸರ್ವವೂ ಮಂಗಳವಾಗುತ್ತದೆಂದು ನಂಬಿಧೈರ್ಯವಹಿಸುತ್ತಾಳೆ.

"ವೈರಭಾವದೀಪ್ತಳಾದ ವಾಲ್ಮೀಕಿಯ ಸೀತೆಗೂ ಮಾತೃಭಾವದೀಪ್ತಳಾದ ಈ ಸೀತೆಗೂ ಎಷ್ಟು ಅಂತರ! ಈ ಸೀತೆಯ ಮನೋಭಾವ ರಾವಣನ ಪರಾಭವದ ಕಡೆಗಿಲ್ಲ , ಅವನ ಪಾಪಬುದ್ಧಿಯನ್ನು ತಿದ್ದಿ ಪುಣ್ಯಮುಖಿಯನ್ನಾಗಿ ಮಾಡಬೇಕೆಂಬ ಘನೋದ್ದೇಶ ಪರಮ ಪಾವನೋದ್ದೇಶ ಇಲ್ಲಿ ಒಡಮೂಡಿ ತೋರುತ್ತದೆ; ರಾವಣನನ್ನು ಸಂಹಾರ ಮಾಡಿ ಅವನನ್ನು ಇಲ್ಲದಂತೆ ಮಾಡುವುದು ಸುಲಭ ಕೆಲಸ ಆದರೆ ಅದು ಮಹತ್ಕಾರ್ಯವಲ್ಲ. ಆದರೆ ರಾವಣತ್ವವನ್ನು ಕಳೆದು ಅವನಲ್ಲಿರುವ ರಾಮತ್ವವನ್ನು ಉದ್ದೀಪನಗೊಳಿಸುವ ಘನತರ ಕಾರ್ಯವನ್ನು ಮಾಡಬೇಕಾಗಿದೆ ಏಕೆಂದರೆ ರಾವಣಬಿದ್ದೊಡನೆ ರಾವಣತ್ವ ಹೋಗಲಿಲ್ಲ ರಾವಣತ್ವ ಹೋಗಲಿಲ್ಲ ರಾವಣತ್ವವನ್ನು ಕಳೆಯುವ ತಪಶ್ಚರ್ಯೆಯಲ್ಲಿ ಆಕೆ ತೊಡಗುತ್ತಾಳೆ".[೩೬] ಲಂಕೆಯಲ್ಲಿ ಸೀತೆ ಬಲವಂತದಿಂದ ಕಾಲಿಟ್ಟರೂ ಲಂಕೆಯಲ್ಲಿ ಹೊಸತನ ಮೈದೋರುತ್ತದೆ ಅನಲೆ ಆಕೆಯನ್ನು ಗುರುವಿನಂತೆ ಸ್ವೀಕರಿಸುತ್ತಾಳೆ. ಮಂಡೋದರಿ 'ಪೂಜ್ಯೆ' ಎನ್ನುತ್ತಾಳೆ. ಚಂದ್ರನಖಿ ಸೀತೆಯ ದೈವಿಕತೆಗೆ ಮಾರುಹೋಗುತ್ತಾಳೆ. ಸೀತೆಯು ತನ್ನ ಸಾತ್ವಿಕ ಪ್ರೇಮದಿಂದ ಲಂಕೆಯ ಜನರ ಮನದಲ್ಲಿ ಪರಿವರ್ತನೆಯನ್ನು ಉಂಟುಮಾಡುತ್ತಾಳೆ.

ಸೀತಾ ವಿರಹದಿಂದ ರಾಮನು ಮತಿವಿಕಲನಂತೆ ವರ್ತಿಸುತ್ತಾನೆ. ನಿದ್ರೆಯನ್ನು ಮರೆತು ನಟ್ಟಿರುಳು ಎದ್ದು ಓಡುತ್ತಾನೆ. ಸೀತೆ, ಸೀತೆ ಎಂದು ಕೂಗಿ ಹೊದರನ್ನು ತಬ್ಬುತ್ತಾನೆ. ಹುಲಿಯ ಗರ್ಜನೆಯನ್ನು ಕೇಳಿ ಅಸುರನು ಸೀತೆಯ ಕೊರಳು ಮುರಿಯುತ್ತಿದ್ದಾನೆಂದು ಭಾವಿಸಿ ಧನುರ್ಬಾಣಗಳನ್ನು ತೆಗೆದುಕೊಂಡು ಓಡುತ್ತಾನೆ. ಲಕ್ಷ್ಮಣನು ಧೈರ್ಯ ನಂಬಿಕೆಗಳನ್ನು ರಾಮನಲ್ಲಿ ತುಂಬಲು ಪ್ರಯತ್ನಿಸಿ ವಿಫಲನಾಗುತ್ತಾನೆ. ರಾಮಸೀತೆಯಿಲ್ಲದೆ ಕೃಶನಾಗುತ್ತಾನೆ. ರಾಮನು ರಾಜ್ಯಪಟ್ಟಾಭಿಷೇಕವನ್ನು ಕಳೆದುಕೊಂಡು ಕಾಡಿಗೆ ಮರಳಿದಾಗಲೂ, ತಾಯಿಯ ಕಣ್ಣೀರನ್ನು, ಸೀತೆಯ ಕಷ್ಟವನ್ನು ಕಂಡಾಗಲೂ ಸ್ವಲ್ಪವೂ ಮನಸ್ಸಿನಲ್ಲಿ ಕ್ರೋಧ, ಉನ್ಮಾದ ರೋಷಕ್ಕೆ ಎಡೆಕೊಡದವನು ಸೀತೆಯ ವಿರಹದಿಂದ ಪರಿತಪಿಸುತ್ತಾನೆ. 'ಶ್ರೀರಾಮ ಪುರುಷರೂಪಿ; ಸೀತೆ ಪ್ರಕೃತಿರೂಪಿಣಿ ಪುರುಷ ಪ್ರಕೃತಿಯನ್ನು ಬಿಟ್ಟು ಇರಲಾರ ಇದ್ದರೂ ಅವನು ಜಡ, ಪುರುಷನಿಗೆ ಚಾಲನೆ ಬರಬೇಕಾದರೆ ಪ್ರಕೃತಿಯೊಡನಿರಬೇಕು ಪುರುಷನಿಂದ ಪ್ರಕೃತಿ ಬೇರ್ಪಟ್ಟೊಡನೆಯೇ ಪುರುಷ ಪ್ರಜ್ಞಾಹೀನನಾಗುತ್ತಾನೆ. ತನ್ನ ಸ್ವರೂಪವದ ಮರವೆಯುಂಟಾಗುತ್ತದೆ".[೩೭] ಆದ್ದರಿಂದಲೇ ರಾಮನು ಸಾಮಾನ್ಯನಂತೆ ಎಲ್ಲದರಲ್ಲೂ ನಿರಾಸಕ್ತನಾಗಿ ಕೃಶನಾಗುತ್ತಾನೆ. ಶಬರಿಯ ಹಾರೈಕೆಯಿಂದ ಚೇತರಿಸಿಕೊಂಡು ಆಕೆಯ ಸಾನಿಧ್ಯದಿಂದ ಚೈತನ್ಯ ಪಡೆದು ಸೀತಾನ್ವೇಷಣ ಕಾರ್ಯದಲ್ಲಿ ತೊಡಗುತ್ತಾನೆ. ಸೀತೆ ರಾಮನುಸಿರು ಆಕೆ ಇಲ್ಲದೆ ರಾಮನಿಲ್ಲವೆಂದು; ರಾಮನ ಶೋಚನೀಯ ಸ್ಥಿತಿಯು ಸೀತಾರಾಮರ ಆತ್ಮಾನುಬಂಧದ ತೀವ್ರತೆಯನ್ನು ಸಹೃದಯರಿಗೆ ಹೃದಯವೇದ್ಯವಾಗಿಸುತ್ತದೆ.

ರಾವಣನು ರಾಮನನ್ನು ತೆಗಳಿ ಮಾತನಾಡಿದಾಗ ಸಹನಾ ಮೂರ್ತಿಯಾದ ಸೀತೆಯೂ ಸಿಡಿದು ಮಾತನಾಡುತ್ತಾಳೆ. ದಿಟ್ಟತನದಿಂದ ತನ್ನ ಪತಿಯು ಮಹಿಮಾವಂತನೆಂದು ತಿಳಿಸುತ್ತಾಳೆ:

> ರಾಮಚಂದ್ರನೆಲ್ಲಿದರ್ದೊಡಂ ನನಗೆ ಪತಿ!
> ಶ್ರೀರಾಮನಂತಿರ್ದೊಡಂ ನನಗೆ ಪತಿ! ಸತ್ತೆ

----------

೩೬. ಕೊ. ಚೆನ್ನಬಸಪ್ಪ : 'ಹದಿಬದೆಯರಧಿದೇವಿ ಸೀತಾದೇವಿ', ಗಂಗೋತ್ರಿ, ಪು.೩೩೯,೪೦

೩೭. ಅದೇ ಪು.೨೭೨

ಸೇರ್ದಪೆನಾತನೊಡನೆ; ಬದುಕಮೇಧ್ಯಮೆ ದಿಟಂ
ಇನ್ನರಿರ್ಪೀ ಜಗದಿ: ಈ ಸೊಣಗಮರಿಯದಾ
ಭೀಮ ವಿಕ್ರಮ ರಾಮ ಮಹಿಮೆಯಂ ಬಲ್ಲೆನಾಂ
[ಶ್ರೀರಾಮಾಯಣದರ್ಶನಂ, ಪು-೪೯೦]

ಸೀತೆಯು ರಾಮನ ಅಗಲಿಕೆಯಿಂದ ಬಳಲಿದ್ದರೂ ಕಠೋರ ತಪಸ್ಸನ್ನು ಆಚರಿಸುತ್ತಾ ರಾಮನಿಗಾಗಿ ಹಂಬಲಿಸುತ್ತಾಳೆ. ರಾವಣನಿಗೆ ಸೀತೆಯ ಬದಲಾವಣೆಗಳ ಬಗ್ಗೆ ಬೆರಗು ಮೂಡುತ್ತದೆ:

ಸೀತೆಯೋ ಪ್ರೇತವೋ ಪೇಳ್, ತ್ರಿಜಟೆ!
ನಿದ್ದೆ ಪಾಸುಣಿಸು ಮೀಹಂಗಳಂ ಕಾಣದೀ
ಪೆಣ್ ಪೆಣ್ಣೊ? ಮೇಣ್ ಪೆಣ್ಣೊಡಲಿನಸ್ಥಿಪಂಜರವೊ?
[ಶ್ರೀರಾಮಾಯಣದರ್ಶನಂ, ಪು-೪೮೬]

ರಾವಣನ ಮಾತುಗಳಲ್ಲಿ ಆಕೆಯು ಲಂಕೆಯಲ್ಲಿ ಹೇಗೆ ಜೀವನ ಕಳೆಯುತ್ತಿದ್ದಾಳೆಂಬ ಪರಿಕಲ್ಪನೆಯು ಸಹೃದಯರಿಗೆ ಸಿಗುತ್ತದೆ. ರಾಮನು ಹನುಮಂತನನ್ನು ಧೂತನಾಗಿ ಕಳಿಸುವಾಗ ಸೀತೆಯ ಕುರುಹು ಸಿಗಲೆಂದು ಆಕೆಯ ವರ್ಣನೆ ಮಾಡಿರುತ್ತಾನೆ. ಆದರೆ ಲಂಕೆಯಲ್ಲಿ ಬಂಧಿತಳಾಗಿರುವ ಸೀತೆಗೆ ಆ ವರ್ಣನೆ ಹೋಲುವುದಿಲ್ಲವೆಂಬುದು ಹನುಮಂತನ ಬಾಯಿಂದಲೇ ತಿಳಿಯುತ್ತದೆ.

ಅಯ್ಯೊ, ದಾಶರಥಿ
ಬಣ್ಣಿಸಿದ ತನ್ನ ದಯಿತೆಯ ಚಿತ್ರವೆಲ್ಲಿ? ಈ
ದೀನದುಃಖಿನಿಯೆಲ್ಲಿ? ಬರ್ಣಿಸಿದ ಚೆಲ್ವೆಸೆವ
ಚಿತ್ರಪಟಮಂ ಮಸಿಯ ಕೈಹಿಸುಗಿ ಬಿಸುಟಂತೆ
ತೋರ್ಪಳೀ ಮಹಿಳೆ! ವಿಧಿಯ ನಿಷ್ಟುರ ಹೃದಯಮಂ
ಸುಡು ಸುಡು, ದಯಾಶೂನ್ಯಮಂ!
[ಶ್ರೀರಾಮಾಯಣದರ್ಶನಂ, ಪು-]

ಇಂತಹ ಕಠೋರ ಸಂಯಮದ ಮೂರ್ತಿಯಾಗಿ ದಿನವೂ ತಪಗಯ್ಯುತ್ತಾ ಎಲ್ಲರ ಉದ್ಧಾರಕ್ಕಾಗಿ ಪ್ರಾರ್ಥಿಸುವ ಮಹಾಶಕ್ತಿಯಾಗಿ ಸೀತೆಯು ಕಂಡು ಬರುತ್ತಾಳೆ. "ಸೀತೆಯ ತಪೋಚೇತನ ಅನಲೆ, ತ್ರಿಜಟೆ, ಚಂದ್ರನಖಿ, ಧಾನ್ಯಮಾಲಿನಿ, ರಾವಣ ಮುಂತಾದ ಚೇತನಗಳು ಊರ್ಧ್ವಮುಖಗಮನಕ್ಕೆ ಕಾರಣವಾದುದು ಮಾತ್ರವಲ್ಲದೆ, ಸ್ವಂತಃ ತನ್ನ ಪತಿಯ ಸಾಧನೆಗೆ ವಿಜಯಕೀರ್ತಿಗೆ ಮಂಗಳಕ್ಕೆ ಸಹ ಹೇತುವಾಯಿತು, ಪ್ರೇರಣೆಯಾಯಿತು".[೩೮]

ಅಂಜನಾಸುತನಾದ ಹನುಮಂತನಿಂದ ಸೀತೆಯು ತನ್ನ ಮನದನ್ನನ ಶುಭವಾರ್ತೆಯನ್ನು ಕೇಳಿ ಶ್ರೀರಾಮನ ಮುದ್ರಿಕೆಯನ್ನು ಪಡೆದು ಶ್ರೀರಾಮನನ್ನೇ ಪಡೆದಷ್ಟು ಸಂತೋಷಗೊಂಡು ತನ್ನ ಚೂಡಾಮಣಿಯನ್ನು ಗುರುತಿಗಾಗಿ ಶ್ರೀರಾಮಚರಣಕ್ಕೆ ಅರ್ಪಿಸಲು ನೀಡುತ್ತಾಳೆ.

----------

೩೮. ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೨೫೬.

ಶ್ರೀರಾಮನೊಂದಿಗಿದ್ದಾಗ ನಡೆದ ಕೆಲವು ಸರಸ ರಸಕ್ಷಣಗಳ ಬಗ್ಗೆ ತಿಳಿಸಿ ಶ್ರೀರಾಮನಿಗೆ ವಾರ್ತೆಮುಟ್ಟಿಸಲು ಹೇಳುತ್ತಾಳೆ. ಸೀತೆ ಕಷ್ಟವನ್ನು ಕಂಡು ಮರುಗುವ ಆಂಜನೇಯನು ಅಗ್ನಿಹವಿಸ್ಸನ್ನು ಸುರೇಂದ್ರನ ಬಳಿಗೆ ಕೊಂಡೊಯ್ಯುವಂತೆ ರಾಮಚಂದ್ರನ ದಿವ್ಯಸನ್ನಿಧಿಗೆ ಸೀತೆ ಒಪ್ಪದಿದ್ದರೆ ಕೊಂಡೊಯ್ಯಲು ಸಿದ್ಧವಾಗಿ ನಿಂತಾಗಲೂ ಸೀತೆ ಚತುರೆ ಆಂಜನೇಯನ ಶಕ್ತಿ ಸಾಮರ್ಥ್ಯಗಳ ಪರೀಕ್ಷೆ ಮಾಡಿ ಆತನು ಸಮರ್ಥನೆಂದು ತಿಳಿದ ಮೇಲೆ ನಯವಾಗಿ ಮಹಾತ್ಮನಾದ ಆಂಜನೇಯನಿಗೆ ಪತಿವ್ರತಾ ಧರ್ಮಕ್ಕೆ ಪೂರಕವಾಗಿ 'ಬಲತ್ಕಾರದಿಂದಲ್ಲದೆ ನಾನು ಅನ್ಯರನ್ನು ಮುಟ್ಟೆನೆಂದು' ಉಪಕಾರವನ್ನು ತಿರಸ್ಕರಿಸಿದಳೆಂದು ನೋಯಬಾರದೆಂದು, ಆದಷ್ಟು ಬೇಗನೆ ನಿನ್ನ ತಂಗಿಗೆ ಪತಿಚರಣ ಸಾನಿಧ್ಯವೊದಗಿಸಬೇಕೆಂದು ಬೇಡುತ್ತಾಳೆ. ಶಿಲ್ಪಿಯ ಬಲವಾದ ಉಳಿಪೆಟ್ಟುಗಳನ್ನು ತಿಂದು ದೇವತಾವಿಗ್ರಹವು ರೂಪುಗೊಳ್ಳುವಂತೆ ಸೀತೆಯು ಬದುಕಿನ ಕಷ್ಟದಾರಿ ಸವೆಸಿ ದೇವತಾವಿಗ್ರಹದಂತೆ ರೂಪುಗೊಂಡಿರುವುದನ್ನು ಮಹಾಕವಿಯು ಸೂಕ್ಷ್ಮವಾಗಿ ಹಿಡಿದಿಟ್ಟಿದ್ದಾರೆ. ಸೀತೆಯಾಡುವ ಮಾತುಗಳು ಆಕೆಯ ವ್ಯಕ್ತಿತ್ವದ ಹಿರಿಮೆಯನ್ನು ತೋರಿಸುತ್ತವೆ.

"ರಾವಣನಂಥ ಮಹಾಪರಾಕ್ರಮಿಗೆ ರಾಮ ಸೇನೆಯನ್ನು ಗೆಲ್ಲುವುದು ಅಂಥ ಅಸಾಧ್ಯದ ಮಾತಾಗಿರಲಿಲ್ಲ. ಆದರೆ ಈ ಸೇನೆಗೆ ಅಂಥ ಅಜೇಯವಾದ ಆತ್ಮಶಕ್ತಿಯನ್ನು ತಂದುಕೊಟ್ಟದ್ದು ಸೀತೆಯ ಸ್ಥಿರ ವ್ರತ; ತಪಸ್ಸಿದ್ಧಿ".[೩೯] ಸೀತೆಯ ವ್ರತದ ನಿರ್ಮಲತೆಯು ಆಕೆಯನ್ನು ಒಲಿಸಿಕೊಳ್ಳಲು ಪ್ರಯತ್ನಿದಲ್ಲಿ ವಿಫಲನಾಗಿದ್ದ ರಾವಣನಿಗೆ ಚೆನ್ನಾಗಿ ತಿಳಿದಿತ್ತು. ಶರ್ದೂಲನು ರಾವಣನಿಗೆ ಹೇಳುವ ಮಾತುಗಳಲ್ಲಿ ಸೀತೆಯ ವ್ರತದ ಸ್ಥಿರತೆ ಅಚಲತೆ ಹಾಗೂ ಸೀತಾಚಾರಿತ್ರ್ಯದ ಸತ್ಭಾವಗಳನ್ನು ತಿಳಿಸುತ್ತದೆ:

ವಾನರರ ಸರ್ವ ಸೈನ್ಯಕೆ ಮಿಗಿಲ್ ಗುರುವೈರಿ
ನಮಗೆ ಸೀತಾವ್ರತಂ! ಸತಿ ಪತಿವ್ರತೆಯೆಂಬ
ಧರ್ಮಧೈರ್ಯಮೆ ಭಯಂಕರತರಂ ನಮಗಾ
ರಘೂದ್ವಹ ನಿಷಂಗ ನಾರಾಚಂಗಳಿಂ ಅದರಿಂದೆ
ಹದಿಬದೆಯ ನೋಂಪಿಯಂ ಸೋಲಿಸಲ್ವೇಳ್ಪುದುಂ
ಕದನದೊಳೆಮಗೆ ಮೊದಲಗೆಯ್ಮೆ!

[ಶ್ರೀರಾಮಾಯಣದರ್ಶನಂ, ಪು-೬೧೪]

ರಾವಣನು ಎಷ್ಟೇ ಪರಾಕ್ರಮಿಯಾದರೂ ಸೀತೆಯ ತಪಸ್ಸಾದನೆಯಿಂದ ರಾಮನಿಗೆ ವಿಜಯಲಕ್ಷ್ಮಿ ಮಾಲೆ ಹಾಕುವಳೆಂದು; ತಿಳಿಯುತ್ತದೆ. ರಾವಣನಿಗೆ ಮಂಡೋದರಿಯು ತನ್ನ ಕನಸಿನಲ್ಲಿ ವೇದವತಿಯು ಚಿತೆಯೇರಿದುದನ್ನು ಆ ಭಸ್ಮರಾಶಿಯಿಂದ 'ತಪಸ್ವಿನಿನಿ ಸೀತೆ' ಉದ್ಭವಿಸಿದುದನ್ನು ಕಂಡೆನೆಂದು ಹೇಳಿ ಮಹತ್ವದ ಚಿತ್ರವೊಂದನ್ನು ರಾವಣನಿಗೆ ವಿವರಿಸುತ್ತಾಳೆ. ಮಂಡೋದರಿಯ ವ್ರತ ಕೂಡ ರಾವಣನ ಮನಸ್ಸನ್ನು ರಕ್ಷಿಸಿ ಸೀತೆಗೆ ಉಪಕಾರವನ್ನು ಮಾಡುತ್ತಾಳೆ. ಹಾಗೆಯೇ ರಾವಣನ ಮನಃ ಪರಿವರ್ತನೆಗೆ ಕಾತರಿಸುತ್ತದೆ.

"ಸೀತೆ ಯೋಗಿನಿ ಮಾತ್ರವಲ್ಲದೆ ಸರ್ವವ್ಯಾಪಿಯೂ, ಸರ್ವಸಾಕ್ಷಿಯೂ, ಸರ್ವಶಕ್ತಿಯೂ ಜಗತ್ ಕ್ರಿಯಾನಿಯಂತ್ರಕಳೂ ಆಗಿ ತನ್ನ ತಪೋಬಲದಿಂದ ಪರಿವರ್ತಿತಳಾಗಿದ್ದಾಳೆಂಬುದನ್ನು, ಆಕೆಯ ಈ ಅಂತಃಶಕ್ತಿ ಸುಪಾತ್ರದ ಅಂತರಂಗಕ್ಕೆ ಸೂಕ್ಷ್ಮವಾಗಿ ಗೋಚರವಾಗುತ್ತಿತ್ತೆಂಬುದನ್ನು,

----------

೩೯. ಅದೇ. ಪು.೨೫೮

ಆಕೆಯ ಮನೋಶಕ್ತಿಯ ನೆರವಿಲ್ಲದೆ ರಾಮ ವಿಜಯಿಯಾಗಲಿ, ರಾವಣನಿಗೆ ಮುಕ್ತಿಯಾಗಲಿ ಇನ್ನಿತರರ ಮನಃ ಪರಿವರ್ತನೆಯಾಗಲಿ ಸಾಧ್ಯವಿರಲಿಲ್ಲವೆಂಬುದನ್ನು ಕವಿ ಈ ಪ್ರಕರಣದ ಮೂಲಕ ಅತ್ಯಂತ ಶಕ್ತಿವತ್ತಾಗಿ ಚಿತ್ರಿಸಿದ್ದಾರೆ. ಮನುಷ್ಯ ಜೀವವೊಂದು ತನ್ನ ಸಾಧನಾಬಲದಿಂದ ಎಂಥ ಅದ್ಭುತ ಚೈತನ್ಯವನ್ನು ಪಡೆಯಬಹುದೆಂಬುದು ಇಂಥ ಸನ್ನಿವೇಶದಿಂದ ಸಾಬೀತಾಗುತ್ತದೆ. ಸೀತೆಯ ಆಧ್ಯಾತ್ಮಿಕ ತೇಜಸ್ಸಿನ ಈ ಮಹೋನ್ನತಿಯು ಶ್ರೀ ರಾಮಾಯಣ ದರ್ಶನದ ವೈಶಿಷ್ಟ್ಯಗಳಲ್ಲಿ ಒಂದು".[೪೦]

ವಿಭೀಷಣನ ಕುಮಾರಿಯಾದ ಅನಲೆಯು ಸೀತೆಯ ವಾತ್ಸಲಯದ ಆವರಣದಲ್ಲಿ ಸುಳಿದು ಅನೇಕ ಸಾತ್ವಿಕ ನಡತೆಗಳನ್ನು ಕಲಿತಿರುತ್ತಾಳೆ. ಸೀತೆಯ ಪ್ರೀತಿಗೂ ಪಾತ್ರಳಾಗಿರುತ್ತಾಳೆ. ಯುದ್ಧದ ಎಲ್ಲ ಆಗುಹೋಗುಗಳು ಅನತಿಯಿಂದಲೇ ಸೀತೆಗೆ ತಿಳಿಯುತ್ತವೆ. ಕುಂಭಕರ್ಣನ ಸಮರ ಸಂದರ್ಬದಲ್ಲಿ ಪರಶಿವನೇ ಪಾರ್ವತಿಗೆ ನಿನ್ನಂಶಸಂಭವೇ ಸೀತೆ; ಆಕೆಯ ನೆವದಿಂದಲೇ ಎಲ್ಲರೂ ಸಿದ್ಧಿಸಾಧನೆಗೆ ಒಳಗಾಗಿದ್ದಾರೆಂದು ಹೇಳುತ್ತಾನೆ. ಅತಿರಥ ಮಹಾರಥರು ದೈವಶಕ್ತಿಯ ಮುಂದೆ ತೃಣ ಸಮಾನರೆಂಬ ಅರಿವನ್ನು ಉಂಟುಮಾಡುತ್ತದೆ. ಇಂಥ ಅದ್ಭುತವಾದ ಶಕ್ತಿಯನ್ನು ತಪಸ್ಸಾಧನೆಯಿಂದ ಪಡೆದಿರುವ ದೇವತೆ ಸೀತೆಯು ಸರಳವಾಗಿದ್ದರೂ ಪರಾನುಕಂಪೆಯುಳ್ಳವಳಾಗಿ ಆತ್ಮಶೋಧಕಳಾಗಿ ತೋರುತ್ತಾಳೆ. ಇಷ್ಟುದಿನ ಸೀತೆಯ ಸೇವಾಭಾಗ್ಯ ಪಡೆದಿದ್ದ ತ್ರಿಜಟೆ ಎಂಬ ದಾಸಿಯ ಶೋಕಕ್ಕೆ ಸೀತೆ ಮರುಗಿ ಬ್ರಹ್ಮಾಸ್ತ್ರವನ್ನೇ ರಾಮನು ತೊಟ್ಟರೂ ತ್ರಿಜಟೆಯ ತಾಳಿಭಾಗ್ಯ ಅಳಿಯಬಾರದೆಂದು ಹರಸುತ್ತಾಳೆ. ತ್ರಿಜಟೆಯು ಸೀತೆಯೊಡನಿದ್ದು ರಾಕ್ಷಸಸ್ತ್ರೀಯಾದರೂ ಸಾತ್ವಿಕಳಾಗಿ ಪರಿವರ್ತಿತಳಾಗಿಬಿಟ್ಟಿರುತ್ತಾಳೆ. ಸೀತೆಯೊಂದಿಗಿದ್ದದು ದಾಸ್ಯವಲ್ಲ ತಪಸ್ಸೆಂದು ತನಗೊದಗಿದ ಪುಣ್ಯಫಲವೆಂದು ತಿಳಿಯುತ್ತಾಳೆ.

ಧಾನ್ಯಮಾಲಿನಿಯಂಥ ಅಪ್ಸರೆಯು ರಾವಣನ ಕ್ಷಣಿಕ ಮೋಹಕ್ಕೆ ಒಳಗಾಗಿ ಅತಿಕಾಯನನ್ನು ಪಡೆದಿದ್ದರೂ ಮನಸ್ಸಿನಲ್ಲಿ ಚಿಂತೆಯ ಹುತ್ತವನ್ನೇ ಬೆಳೆಸಿಕೊಂಡಿರುತ್ತಾಳೆ. ಸೀತೆಯಂಥ ಮಹಾಪತಿವ್ರತೆಯ ದರ್ಶನವಾದ ಮೇಲಂತೂ ತನ್ನನ್ನು ತಾನು ಆತ್ಮವಿವೇಚನೆ ಮಾಡಿಕೊಂಡು ತಾನು ನಿಂತ ಪ್ರಪಾತದ ಅರಿವು ಮಾಡಿಕೊಂಡು ತನ್ನ ಪಾಪಕ್ಕೆ ತಾನೇ ಪರಿತಪಿಸುತ್ತಾಳೆ. ಧ್ಯಾನಮಾಲಿನಿಯ ಈ ಸ್ಥಿತಿ ರಾವಣನ ಅಹಂಕಾರವನ್ನು ಪಾತಾಳಕ್ಕೆ ಇಳಿಸುತ್ತದೆ. ಸೀತೆಯು ಚಿತೆ ಏರಿದರೆ ಆಕೆಯ ಚಿತೆಯಲ್ಲಿ ಪವಡಿಸಿ ಸೀತಾಸಾನಿಧ್ಯ ಪಡೆಯುತ್ತೇನೆ ಎನ್ನುತ್ತಿದ್ದವನು ಸೀತೆಯಲ್ಲಿ ಮಾತೃವಾತ್ಸಲ್ಯ ಕಂಡು ಪರಿವರ್ತಿತನಾಗಲು ಈ ಸಣ್ಣ ಪ್ರಸಂಗ ಹೆಚ್ಚು ಪರಿಣಾಕಾರಿಯಾದ ಪ್ರಭಾವಬೀರೆತೆಂದೇ ಹೇಳಬಹುದು.

ರಾವಣನ ಮನಸ್ಸಿನಲ್ಲಿ ಸೀತೆಯ ಬಗೆಗೆ ಮೋಹದ ಅಲೆಗಳನ್ನು ಎಬ್ಬಿಸಿದ್ದ ಚಂದ್ರನಖಿಯು ಸೀತೆಯ ಮನಃಪರಿವರ್ತನೆಯಾಗಿ ರಾವಣನ ಮನಸ್ಸನ್ನು ಪರಿವರ್ತಿಸಲು ಪ್ರಯತ್ನಿಸಿ ಯಶಸ್ವಿಯಾಗುತ್ತಾಳೆ. ರಾವಣನ ಮನಃ ಪರಿವರ್ತನೆಯು ಚಂದ್ರನಖಿ ಮತ್ತು ಮಂಡೋದರಿಗೆ ಮಾತ್ರ ತಿಳಿದಿರುತ್ತದೆ; ಲೋಕ ಪರಾಕ್ರಮಿಯಾದ ರಾವಣನು ಯುದ್ಧವನ್ನು ನಿಲ್ಲಿಸಲು ಇಚ್ಚಿಸದೇ ರಾಮನನ್ನು ಗೆದ್ದು ತಂದು ಸೀತೆಗೆ ಕೊಡುವ ಮನಸ್ಸು ಮಾಡಿರುತ್ತಾನೆ. ಆದರೆ ವಿಧಿ ನಿಯಮವೇ ಬೇರೆ ರಾವಣತ್ವವನ್ನು ಅಳಿದ ಲಂಕೇಶ್ವರನ ಆತ್ಮವು ರಾಮನಲ್ಲಿ ಲೀನವಾಗಬೇಕಾಗುತ್ತದೆ.

----------

೪೦. ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೨೬೦

ರಾವಣನು ಮನಃ ಪರಿವರ್ತನೆಗೊಂಡ ಅನಂತರ ತನಗಾದ ವಿಶಿಷ್ಟಾನುಭವವನ್ನು ನೆನೆದು ಮಂಡೋದರಿಗೆ ಹೇಳುವ ಮಾತುಗಳಿಂದ ಸೀತೆಯಿಂದಲೇ ರಾವಣನಿಗೆ ಮುಕ್ತಿ ಎಂಬುದು ಸ್ಪಷ್ಟವಾಗುತ್ತದೆ:

ನಿನಗಿಂ ಮಿಗಿಲ್ ಸೀತೆ
ನನಗೆ ದೇವತೆ, ಮಾತೆ! ಶ್ರದ್ಧೆಗೆಟ್ಟಿರ್ದೆನಗೆ
ಶ್ರದ್ಧೆಯಂ ಮರುಕೊಳಿಸುತಾತ್ಮದುದ್ಧಾರಮಂ
ತಂದ ದೇವತೆ, ಪುಣ್ಯಮಾತೆ!

[ಶ್ರೀರಾಮಾಯಣದರ್ಶನಂ, ಪು-೭೭೬]

ರಾವಣನು ರಾಮನ ಅಂಶ ಹೋಂದದ್ದರಿಂದಲೇ ಸೀತೆಯನ್ನು ಕದ್ದೊಯ್ಯಲು ಸಾಧ್ಯವಾಯಿತೆಂದು ರಾಮನಿಂದಲೇ ನುಡಿಸುವ ಮಹಾಕವಿಯು ರಾವಣನ ಪಾತ್ರವನ್ನು ಉನ್ನತೀಕರಿಸುದ್ದಾರೆ. ವಿಜಯಮಾಲೆ ಧರಿಸುವ ಶ್ರೀರಾಮನು ಸೀತೆಗಾಗಿ ಹಂಬಲಿಸಿ ಎಷ್ಟೆಲ್ಲಾ ಸಾಧನೆ ಮಾಡಿದ್ದರೂ, ಸೀತೆಯ ಸಂದರ್ಶನದಲ್ಲಿ ಆಕೆಯನ್ನು ಕಣ್ಣೆತ್ತಿಯೂ ನೋಡದೆ ನಿಲ್ಲುತ್ತಾನೆ. ತನ್ನ ಉಸಿರಾದ ಸೀತೆಯು ಪವಿತ್ರಳೆಂದು ತಿಳಿದಿದ್ದರೂ; ಅದನ್ನು ಜಗತ್ತಿಗೆ ಸಾರುವ ಉದ್ದೇಶದಿಂದ ಈ ರೀತಿ ವರ್ತಿಸುತ್ತಾನೆ. ಸೀತೆ ಮಾತ್ರವೇ ಅಗ್ನಿ ಪ್ರವೇಶ ಮಾಡಿ ತನ್ನ ಪವಿತ್ರತೆ ಸಾರುವುದು ಸರಿಯಲ್ಲವೆಂದು ಚಿಂತಿಸುವ ರಾಮನು ಎಲ್ಲರ ಮುಂದೆ ತಾನೂ ಅಗ್ನಿಪ್ರವೇಶಮಾಡಿ ಪವಿತ್ರತೆ ಸಾರುತ್ತಾನೆ. ವಾಲ್ಮೀಕಿಯು ಸೀತೆಗೆ ಮಾತ್ರ ಅಗ್ನಿಪರೀಕ್ಷೆ ಏರ್ಪಡಿಸಿ ಎಲ್ಲರಲ್ಲೂ ಮೂಡಿಸಿದ್ದಂಥ ಅಸಮಾಧಾನಕ್ಕೆ ಪರಿಹಾರ ನೀಡಿರುವುದು ಮಹಾಕವಿ ಕುವೆಂಪು. ಸೀತೆಯಂತೆಯೇ ಅಗ್ನಿಪರೀಕ್ಷೆಗೆ ಶ್ರೀರಾಮನನ್ನೂ ಒಳಗುಮಾಡಿ ಸರ್ವಸಮಾನತೆಯನ್ನು ಕುವೆಂಪು ಅನಾವರಣಗೊಳಿಸಿದ್ದಾರೆ.

"ರಾಮ ಸಂದರ್ಶನ, ಆತನ ಪುರುಷನುಡಿಗಳು, ಅಗ್ನಿಪ್ರವೇಶದಂದ ಅಗ್ನಸ್ನಾತಳಾಗಿ ಪುನರೋದಯ ಮುಂತಾದ ಘಟನೆಗಳೆಲ್ಲ ಸೀತೆಗೆ ಸಂಬಂಧಿಸಿದಂತೆ ವಾಲ್ಮೀಕಿ ಕೃತಿಯಲ್ಲಿರುವಂತೆಯೇ ಜರುಗುತ್ತವೆ. ಆದರೆ ಅಪವಾದ ನಿವಾರಣಾರ್ಥವಾಗಿ ರಾಮನಿಂದ ಪರಿತ್ಯಜಿತಳಾಗಿ ಅಗ್ನಿಹೃದಯವನ್ನು ಹೊಕ್ಕು ಸೀತೆ, ಅದೇ ಶ್ರೀರಾಮ ತನಗಾಗಿ ತಾನು ಅಗ್ನಿಪ್ರವೇಶವಾಗುವಂತೆ ಮಾಡಿ, ಆ ಮೂಲಕ ತ್ಯಜಿಸಿದ ಅವನೇ ಅಗ್ನಿಲೋಕಕ್ಕೆ ಬಂದು ಗೌರವ ಪುರಸ್ಕಾರವಾಗಿ ಮರಳಿ ಭೂಲೋಕಕ್ಕೆ ತನ್ನನ್ನು ಕರೆದೊಯ್ಯುವಂತೆ ಮಾಡಿ ತನ್ನ ಸ್ವಾಭಿಮಾನ ಸೌಶೀಲ್ಯಗಳನ್ನು ಜಗಜ್ಜಾಹೀರು ಮಾಡುತ್ತಾಳೆ. ವಾಲ್ಮೀಕಿಯಲ್ಲಿಯಂತೆ ಅಗ್ನಿ, ದಶರಥ, ಬ್ರಹ್ಮ ಮುಂತಾದವರೆಲ್ಲ ಪ್ರತ್ಯಕ್ಷರಾಗಿ ಸೀತೆಯ ಬಗ್ಗೆ ವಕೀಲಿ ವಹಿಸುವುದಿಲ್ಲ ಇಲ್ಲಿ. ಸೀತೆಯ ಧವಳ ಚಾರಿತ್ರ್ಯ, ಬೇಕಿದ್ದರೆ ತಾನಿದ್ದಲ್ಲಿಗೇ ಬಂದು ಕರೆದುಕೊಂಡು ಹೋಗಲಿ ಎಂಬ ಸ್ವಾಭಿಮಾನದ ಸಾತ್ವಿಕ ಸವಾಲನ್ನು ಒಡ್ಡುತ್ತದೆ. ಅಂತೆಯೇ ರಾಮನನ್ನು ತಾನಿದ್ದಲ್ಲಿಗೇ ಕರೆಸಿಕೊಂಡು ಅವನೊಡನೆಯೇ ಹಿಂತಿರುಗುತ್ತಾಳೆ ಧರೆಗೆ. ತನ್ನ ಅಪ್ರತಿಮ ತಪಸ್ಸಿನಿಂದ ಅಭೂತ ಪೂರ್ವವಾದ ದೈವಶಕ್ತಿಯನ್ನು ಧಾರಣ ಮಾಡಿದ ತನ್ನ ಅಸಾಧಾರಣ ಸತೀಮಣಿಯನ್ನು ಮರಳಿ ಪಡೆಯಲು ರಾಮನಂಥ ಲೋಕೋತ್ತರಶೀಲನೂ ಅಗ್ನಿಪ್ರವೇಶ ಮಾಡಬೇಕಾಗುತ್ತದೆ. ಇದು ಸೀತೆಯು ಚಾರಿತ್ರ್ಯಕ್ಕೆ, ಆಮೂಲಕ ಸ್ತ್ರೀ ಸಮುದಾಯಕ್ಕೆ ಈ ಯುಗದ ಕವಿ ಸಲ್ಲಿಸಿದ ಆತ್ಮಪೂರ್ವ ಗೌರವ"[೪೧] ಎಂಬ ಡಾ. ಎಚ್. ಜೆ. ಲಕ್ಕಪ್ಪಗೌಡರ ಅಭಿಪ್ರಾಯ ಮಹಾಕಾವ್ಯ ರಚಿಸಿದ ಮಹಾಕವಿಯ ಮಹಾಪ್ರತಿಭೆಯ ಹಿರಿಮೆಯನ್ನು ಸೀತಾ ಪಾತಿವ್ರತ್ಯದ ಮೇರುಪರ್ವತದಂತೆಯೇ ಎತ್ತಿ ಹಿಡಿಯುತ್ತದೆ.

----------

೪೧. ಅದೇ. ಪು.೨೬೬

ಸೀತೆ ಅಪ್ರಾಕೃತಳಾದರೂ, ಮನುಷ್ಯ ಲೋಕದ ಎಲ್ಲ ನಿಯಮಗಳಿಗೆ ಒಳಗಾಗಿ ಮಾನವತ್ವದಿಂದ ದೈವತ್ವಕ್ಕೇರಿ ಪಾತಿವ್ರತ್ಯದ ಹಿರಿಮೆಯನ್ನು ಮೆರೆದು, ಸನಾತನ ಧರ್ಮದ ಅದ್ಭುತ ಕಲಾಶಿಲ್ಪವಾಗಿ, ಎಲ್ಲರ ಮೆಚ್ಚುಗೆ, ಪ್ರೀತಿ ಗೌರವಗಳಿಗೆ ಭಾಜನಳಾಗಿ, ಇಂದಿಗೂ ಎಲ್ಲ ಸ್ತ್ರೀಯರ ಆದರ್ಶಮೂರ್ತಿಯಾಗಿ ಪ್ರಜ್ವಲಿಸಿಸಿದ್ದಾಳೆ. ಆದ್ದರಿಂದಲೇ ಭಾರತೀಯ ಸನಾತನ ಧರ್ಮದ ಘನತೆಯನ್ನು ಜಗತ್ತಿಗೆ ಸಾರಿದ ಸ್ವಾಮಿ ವಿವೇಕಾನಂದರು 'ಎಲ್ಲ ಕಾಲಕ್ಕೂ ಸೀತೆ ಒಬ್ಬಳೇ!' ಎಂದು ಆಕೆಯ ವ್ಯಕ್ತಿತ್ವಕ್ಕೆ ಕನ್ನಡಿ ಹಿಡಿದಿದ್ದಾರೆ.

## ೫. ಊರ್ಮಿಳೆ

ಮಹಾಕಾವ್ಯದ ಮಹಾಸಾಗರದಲ್ಲಿ ಮರೆತುಹೋಗಿದ್ದ ತ್ಯಾಗಶೀಲೆ ಊರ್ಮಿಳೆ. ಸೀತೆಯ ನೋವಿಗೆ ಮಿಡಿವ ವಾಲ್ಮೀಕಿ, ಊರ್ವಿಳೆಯನ್ನು ಮೌನಕ್ಕೆ ನೂಕಿಬಿಡುತ್ತಾರೆ. ಸೀತೆಯಷ್ಟೆ ಪಾತಿವ್ರತ್ಯ ಊರ್ಮಿಳೆಯದು ಎಲ್ಲ ಕೆಲಸಗಳಲ್ಲಿಯೂ ಸೀತೆ, ರಾಮ, ಲಕ್ಷ್ಮಣರಿಗೆ ಮೌನರಕ್ಷೆಯಾಗಿ ನಿಂತ ಊರ್ಮಿಳೆಯ ತ್ಯಾಗ ಮಹಾಕವಿಯ ಕಣ್ಣಿಗೆ ಕಂಡರೂ ಅದರ ಬಗ್ಗೆ ಒಮ್ಮೆಯೂ ಗಮನಹರಿಸಿಲ್ಲ. ವಾಲ್ಮೀಕಿ ಮಹಾಕವಿಯು ಊರ್ಮಿಳೆಯನ್ನು ಅರಮನೆಯ ಮೂಲೆಯಲ್ಲಿ ಮರೆಯಾಗಿ ನಿಲ್ಲುವ ಸ್ತ್ರೀ ಪಾತ್ರದಂತೆ ಚಿತ್ರಿಸಿದ್ದಾರೆ.

ವಿಶ್ವಕವಿ ರವೀಂದ್ರನಾಥ ಠಾಕೂರರು ಶ್ರೀಮದ್ರಾಮಾಯಣವನ್ನು ಸೂಕ್ಷ್ಮವಾಗಿ ಅಭ್ಯಸಿಸಿ ಊರ್ಮಿಳೆಯ ಪಾತ್ರದ ಬಗ್ಗೆ ಅನೇಕ ಪ್ರಶ್ನೆಗಳನ್ನು ಎತ್ತಿ, ಅದಕ್ಕೆ ಉತ್ತರ ಹುಡುಕುವ ಪ್ರಯತ್ನವನ್ನು ಮಾಡಿದ್ದಾರೆ. ಅವರ ಸೂಕ್ಷ್ಮಾಲೋಚನೆಯು ಮುಂದಿನ ಕವಿಗಳ ಸ್ಫೂರ್ತಿ ಕೇಂದ್ರವಾಗಿದೆ. ರವೀಂದ್ರನಾಥರ 'ಕಾವ್ಯದ ಅನಾದರ' ದ ಪ್ರಭಾವ ಕುವೆಂಪು ಅವರ ಶ್ರೀರಾಮಾಯಣದರ್ಶನಂ ಮಹಾಕಾವ್ಯದ ಮೇಲಾಗಿರುವುದನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದೆ.

"ವಾಲ್ಮೀಕಿ ಮಹಾಕವಿಯು ತನ್ನ ಕಲ್ಪನಾ ಶಕ್ತಿಯ ಕರುಣಾಜಲವೆಲ್ಲವನ್ನು ಜನಕಸುತೆಯ, ಸೀತಾದೇವಿಯ ಪುಣ್ಯಾಭಿಷೇಕದಲ್ಲಿಯೇ ಮುಗಿಸಿಬಿಟ್ಟಿರುತ್ತಾನೆ. ಕಳೆಗುಂದಿದ ಮುಖವುಳ್ಳವಳೂ; ಸಮಸ್ತ ಐಹಿಕ ಸುಖದಿಂದ ವಂಚಿತಳೂ ಆಗಿ ಸೀತಾದೇವಿಯ ಛಾಯೆಯಲ್ಲಿ ಅವಕುಂಠನವತಿಯಾಗಿ ನಿಂತಿರುವ ಮತ್ತೊಬ್ಬ ರಾಜಕುಮಾರಿಯ ಚಿರದುಃಖದಿಂದ ತಪ್ತವಾದ ನಮ್ರಲಲಾಟದ ಮೇಲೆ ಕವಿಯು ತನ್ನ ಕಮಂಡಲುವಿನ ಒಂದುತೊಟ್ಟು ನೀರನ್ನಾದರೂ ಏಕೆ ಚಿಮುಕಿಸುವುದಿಲ್ಲ. ಅಯ್ಯೋ ಅವ್ಯಕ್ತ ವೇದನೆಯಾದ ಊರ್ಮಿಳಾದೇವಿ ನೀನು ಉಷಃ ಕಾಲದಲ್ಲಿ ಕಣ್ಣಿಗೆ ಬೀಳುವ ನಕ್ಷತ್ರದಂತೆ ಮಹಾಕಾವ್ಯದ ಮೇರು ಶಿಖರದಲ್ಲಿ ಒಂದು ಭಾರಿ ಮಾತ್ರ ಗೋಚರಳಾದೆ; ಆಮೇಲೆ ಅರುಣಕಾಂತಿಯಲ್ಲಿ ಕಣ್ಮರೆಯಾದ ನೀನು ಪುನಃ ಕಾಣಲಿಲ್ಲ. ನಿನ್ನ ಉದಯಾಚಲವೆಲ್ಲಿ, ಅಸ್ತಶಿಖರವೆಲ್ಲಿ- ಎಂದು ಹೇಳುವುದನ್ನೂ ಕೂಡ ಎಲ್ಲರೂ ಮರೆತು ಬಿಟ್ಟಿದ್ದಾರೆ".[೪೨] ಕ್ರೌಂಚಗಳ ಅಗಲಿಕೆಯ ನೋವನ್ನೇ ಸಹಿಸದ ವಾಲ್ಮೀಕಿ ಮಹರ್ಷಿಗಳು ಲಕ್ಷ್ಮಣ-ಊರ್ಮಿಳೆಯರ ಸುದೀರ್ಘ ಹದಿನಾಲ್ಕು ವರ್ಷಗಳ ಅಗಲಿಕೆಯನ್ನು ನೋಡಿಯೂ ಕಣ್ಮುಚ್ಚಿದ್ದಾರೆಂದರೆ ಆಶ್ಚರ್ಯವಲ್ಲವೆ? ಲಕ್ಷ್ಮಣನನ್ನು ಗುಣಗಾನ ಮಾಡುವಾಗ ಆತನ ಅರ್ಧಾಂಗಿಯಾದ ಊರ್ಮಿಳೆ ತೆರೆಗೆ ಸರಿಯುತ್ತಾಳೆ. "ಲಕ್ಷ್ಮಣನು ದೇವತಾ ಸ್ವರೂಪರಾದ ಸೀತಾ ರಾಮರಿಗಾಗಿ ಸ್ವಾರ್ಥವನ್ನು ಮಾತ್ರಾ ತ್ಯಾಗ ಮಾಡಿದನು ಊರ್ಮಿಳಾದೇವಿಯಾದರೋ ಸ್ವಾರ್ಥಕಿಂತಲೂ ಹೆಚ್ಚಾದ ತನ್ನ ಸ್ವಾಮಿಯನ್ನೇ ದಾನಮಾಡಿದಳು ಕಾವ್ಯವು ಆಮಾತನ್ನೇ ಎತ್ತುವುದಿಲ್ಲ. ಸೀತಾದೇವಿಯ ಕಣ್ಣೀರಿನಲ್ಲಿ ಊರ್ಮಿಳಾದೇವಿಯು ಸಂಪೂರ್ಣವಾಗಿ ಕೊಚ್ಚಿಕೊಂಡು ಹೋದಳು".[೪೩] ವಾಲ್ಮೀಕಿ ಮಹಾಕವಿಗಳು ಈ ರೀತಿ ಚಿತ್ರಸಲು ಕಾರಣವನ್ನು ಹುಡುಕ ಹೊರಟಿರುವ ರವೀಂದ್ರರು "ಯಾರಾದರೂ ಸೀತಾದೇವಿಯ ದುಃಖದೊಂದಿಗೆ ಊರ್ಮಿಳೆಯ ಅತ್ಯಧಿಕ ದುಃಖವನ್ನು ತುಲನೆ ಮಾಡಿ ಯಾರೆಂಬ ಶಂಕೆಯಿಂದಲೇ ಕವಿಯು ಸೀತಾದೇವಿಯ ಸ್ವರ್ಣಮಂದಿರದ ಈ ಮಹಾದಃಖಿನಿಯನ್ನು ಸಂಪೂರ್ಣವಾಗಿ ಹೊರಗಟ್ಟಿರಬಹುದೇ?"[೪೪] ಎಂದು ವಿವೇಚಿಸುತ್ತಾರೆ. "ಕಾವ್ಯದ ಎಲ್ಲಪಾತ್ರಗಳಿಗೂ ಸಮಾನ

-----------

೪೨. ಅನು. ಟಿ.ಎಸ್.ವೆಂಕಣ್ಣಯ್ಯ, 'ಕಾವ್ಯದ ಅನಾದರ', ಪ್ರಾಚೀನ ಸಾಹಿತ್ಯ. ಪು.೮೩

೪೩. ಅದೇ. ಪು. ೮೬

೪೪. ಅದೇ

ಪ್ರಾಶಸ್ತ್ಯವು ದೊರೆಯಲಾರದೆಂಬುದೇನೋ ನಿಜ. ಕಠಿಣ ಹೃಯನಾದ ಕವಿಯು ತನ್ನ ಕಾವ್ಯದ ನಾಯಕ ನಾಯಕಿಯರಿಗಾಗಿ ಎಷ್ಟು ಅಕ್ಷಯ ಪ್ರತಿಮೆಗಳನ್ನು ತಯಾರುಮಾಡಿ ನಿರ್ಮಮತೆಯಿಂದ ಬಿಸಾಟುಬಿಡುತ್ತಾನೆ! ಆದರೆ ಆತನು ಎಲ್ಲಿ ಯಾರನ್ನು ಕಾವ್ಯದ ಅವಶ್ಯಕತೆಗಾಗಿ ನಿಶ್ಶೇಷ ಮಾಡಿಬಿಡುತ್ತಾನೆಯೋ ಅಲ್ಲಿಗೆ ಅವರು ಸಂಪೂರ್ಣವಾಗಿ ಮುಗಿದು ಹೋಗುತ್ತಾರೇನು?"[೪೫] ಎಂದು ಮಹಾಕವಿಗಳು ಉದ್ದೇಶಪೂರ್ವಕವಾಗಿ ಮತ್ತು ಕಣ್ತಪ್ಪಿ ಮಾಡುವ ಪಾತ್ರಗಳ ಅಲಕ್ಷದ ಬಗ್ಗೆ ಚಿಂತಿಸಿರುವ ರವೀಂದ್ರರು ಕಾವ್ಯದ ಪ್ರಧಾನ ಪಾತ್ರಗಳ ಮಹತ್ವವು ಮಸುಕಾಗದಂತೆ ಕಾವ್ಯದ ವಿಕಾಸಕ್ಕೆ ಕಾರಣವಾಗುವಂತೆ ತಮ್ಮ ಪರಿಮಿತಯಲ್ಲಿಯೇ ಬೆಳಗುವಂತೆ ಮುಖ್ಯಪಾತ್ರಗಳಲ್ಲಿ ಒಂದಾಗುವಂತೆ ಇತರ ಪಾತ್ರಗಳಿಗೂ ನ್ಯಾಯ ಒದಗಿಸಬೇಕೆಂದು ಹೇಳುತ್ತಾರೆ. ಈ ರೀತಿ ಪಾತ್ರಗಳಿಗೆ ನ್ಯಾಯ ಒದಗಿಸಿ ಅವು ಅವುಗಳಮಿತಿಯನ್ನು ದಾಟಿ ಸ್ವಪ್ರಕಾಶವನ್ನು ಪಡೆಯುವಂತೆ ಮಾಡಿರುವ ಮಹಾನ್ ಪ್ರತಿಭೆ ಕುವೆಂಪು.

"ಶ್ರೀರಾಮಾಯಣದರ್ಶನಂ ಕಾವ್ಯ ವಾಲ್ಮೀಕಿಯಿಂದ ಸ್ಫೂರ್ತಿಪಡೆದು ಅದರ ಏರನ್ನು ಗೌರವಿಸಿ, ಇಳಿವನ್ನು ಗಮನಿಸಿ ಅದನ್ನು ನಿವಾರಿಸಿ ಆದಿಕವಿ ಸೃಜಿಸಿದ ಮಹೋನ್ನತ ಭಾಗಗಳಿಗೆ ಹೆಗಲೆಣೆಯಾಗುವಂತೆ ಉನ್ನತೋನ್ನತಗೊಳಿಸಲು ಪ್ರಯತ್ನಸಿ ಸಫಲವಾಗಿದೆ. ಕಾವ್ಯದ ನೂರಾರು ಸನ್ನಿವೇಶಗಳು ಪಾತ್ರಗಳು ಆ ಆಧುನಿಕ ಕವಿಯ ಮೇರು ಪ್ರತಿಭೆಯ ಮಹಾಪ್ರಕಾಶದಲ್ಲಿ ಮಿಂದು ಅಪೂರ್ವ ತೇಜಸ್ಸನ್ನು ಪರಿಣಾಮರಮಣೀಯತೆಯನ್ನು ಪ್ರಮಾಣಸೌಂದರ್ಯವನ್ನು ಸಮುಚಿತ ನ್ಯಾಯವನ್ನು ಪಡೆದುಕೊಂಡಿದೆ. ಇಂತಹ ಪಾತ್ರಗಳಲ್ಲಿ ಊರ್ಮಿಳೆಯೂ ಒಂದು".[೪೬]

ಊರ್ಮಿಳೆ ಜನಕರಾಜನ ಔರಸಪುತ್ರಿ. ಸೀತೆಯ ಆತ್ಮೀಯ ಸಹೋದರಿ, ಲಕ್ಷ್ಮಣನ ಪತ್ನಿಯಾದ ಈಕೆ ಮೌನವಾಗಿ ತಪಸ್ಸನ್ನಾಚರಿಸಿ ಸೀತೆ ರಾಮಲಕ್ಷ್ಮಣರಿಗೆ ತಪದ ರಕ್ಷೆಯನ್ನು ಕಟ್ಟುತ್ತಾಳೆ. ಎಲ್ಲಿಯೂ ತನ್ನ ನೋವನ್ನು ಯಾರೊಂದಿಗೂ ತೋರ್ಪಡಿಸಿಕೊಳ್ಳದ ಮಹಾಸಾಧ್ವಿ, ಸದಾ ಇತರರ ಒಳಿತನ್ನೇ ಯೋಚಿಸುವ ಈಕೆ ತನ್ನ ಸುಖವನ್ನೇ ಎಲ್ಲರ ಒಳಿತಿಗಾಗಿ ತ್ಯಾಗ ಮಾಡುವ ಮಹಾತ್ಯಾಗಿ. "ಶ್ರೀಮದ್ರಾಮಾಯಣದಲ್ಲಿ ಕೇವಲ ನಾಮಶಕ್ತಿಯಾಗಿ ಉಳಿದ್ದಿದ್ದ ಊರ್ಮಿಳೆ 'ಶ್ರೀರಾಮಾಯಣದರ್ಶನಂ' ಮಹಾಕಾವ್ಯದಲ್ಲಿ ತ್ಯಾಗ ಶಕ್ತಿಯಾಗಿ ಚಿತ್ತಪಶ್ಯಕ್ತಿಯಾಗಿ ಚಿತ್ರಿತಳಾಗಿದ್ದಾಳೆ; ಚಿತ್ರಿತಳಾಗಿದ್ದಾಳೆನ್ನುವುದಕ್ಕಿಂತ ಕವಿಯ ಜ್ಯೋತಿರ್ದರ್ಶನದಿಂದ ಮೂಡಿದ್ದಾಳೆನ್ನುವುದು ಉಚಿತ ಮತ್ತು ಸಹಜ. ಈ ಮಹಾಕಾವ್ಯದ ಸುವಿಸ್ತಾರ ಕ್ಷೇತ್ರದಲ್ಲಿ ಅವಳು ಆಕ್ರಮಿಸಿಕೊಂಡಿರುವ ಸ್ಥಾನ ಕಿರಿದಾದರೂ ಅವಳ ಬಾಹ್ಯವ್ಯಾಪಾರಗಳ ರೂಪರೇಷೆಗಳು ಅಗೋಚರವಾಗಿದ್ದರೂ ಅವಳ ತಪಃ ಪ್ರಭಾವ ಮಾತ್ರ ಇಡೀ 'ರಾಮಾಯಣ' ವನ್ನೆಲ್ಲಾ ವ್ಯಾಪಿಸಿದೆ. ಅವಳು ಎಲೆಯ ಮರೆಯ ಹೂವು. ಬಾಹ್ಯಚಕ್ಷುವಿಗೆ ಅವಳ ವ್ಯಕ್ತಿತ್ವ ಅವ್ಯಕ್ತ. ಅಂತಃಚಕ್ಷುವಿಗೆ ಸದಾ ವ್ಯಕ್ತ. ಅವಳು ಕೇವಲ ವ್ಯಕ್ತಿಯಲ್ಲ, ಶಕ್ತಿಯೆಂದರೂ ಮೇಲು".[೪೭] ವಾಲ್ಮೀಕಿಯು ಅಲ್ಲೊಮ್ಮೆ ಇಲ್ಲೊಮ್ಮೆ ಊರ್ಮಿಳೆಯ ಹೆಸರನ್ನು ಮಾತ್ರ ಪ್ರಸ್ತಾಪಿಸುತ್ತಾರೆ. ಕುವೆಂಪು ಅವರು ಶ್ರೀ ರಾಮಾಯಣ ದರ್ಶನಂನಲ್ಲಿ ಕಾವ್ಯಶಕ್ತಿಯಾಗಿ ಮಾಡಿ ಕಾವ್ಯದ ತುಂಬಾ ಊರ್ಮಿಳೆಯ ತಪಃಶಕ್ತಿ ತುಂಬಿರುವಂತೆ ಚಿತ್ರಿಸುತ್ತಾರೆ.

----------

೪೫. ಅನು. ಟಿ.ಎಸ್.ವೆಂಕಣ್ಣಯ್ಯ, 'ಕಾವ್ಯದ ಅನಾದರ', ಪ್ರಾಚೀನ ಸಾಹಿತ್ಯ.

೪೬. ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೩೧೬

೪೭. ದೇ. ಜವರೇಗೌಡ,'ಶ್ರೀ ರಾಮಾಯಣದರ್ಶನಂದಲ್ಲಿ ಮಹಾತಪಸ್ವಿನಿ ಊರ್ಮಿಳಾದೇವಿ' ವಿಮರ್ಶೆಯಮಾರ್ಗ. ಪು.೧೦೫

ಅರಮನೆಯ ತೋಟದಲ್ಲಿ ಶ್ರೀರಾಮನನ್ನು ಕಂಡ ಸೀತೆ ನಿಡುಸುಯ್ದು ಕಂಬನಿಮಿಡಿವುದನ್ನು ಸೂಕ್ಷ್ಮವಾಗಿ ಗಮನಿಸುವ ಚತುರೆ ಊರ್ಮಿಳೆಗೆ ಸೀತೆಯು ತನ್ನ ಅಂತರಂಗವನ್ನು ತೆರೆದಿಡುತ್ತಾಳೆ. ಸೀತೆಗೆ ಒಳಿತಾಗಲೆಂದು ಬಯಸುವ ತಂಗಿ ರಾಮನಿಗೆ ಬಿಲ್‌ಮುರಿಯಲೆಂದು ಪಾರ್ವತಿಯನ್ನಾರಾಧಿಸುವ ಕಾರ್ಯದಲ್ಲಿ ಸಹಕರಿಸಿ, ಶಿವನಿಗೆ ಸೋಲು ಖಂಡಿತಾ ಎಂದು ಸೀತೆಯ ಮನಃ ಸಂತೋಷ ಪಡಿಸುತ್ತಾಳೆ. ರಾಮನ ಬಲಕ್ಕೆ ಸೀತೆಯ ಪ್ರೀತಿಯ ಪೂಜೆಯ ಬಲ ನೀಡುವ ಸಲಹೆ ಕೊಡುವವಳು ಊರ್ಮಿಳೆಯೇ ಈಕೆ ಸದಾ ಸೀತೆಗೆ ನೆರಳಾಗಿ, ರಕ್ಷೆಯಾಗಿ ಮುಂದುವರಿಯುತ್ತಾಳೆ. ವನವಾಸ ಸಮಯದಲ್ಲಿ ಊರ್ಮಿಳೆಯು ಸೀತೆಯನ್ನು ಅನುಸರಿಸಲಾಗದಿದ್ದರೂ ಊರ್ಮಿಳೆಯ ತ್ಯಾಗ ತಪಸ್ಸಿನ ಚಿತ್‌ಶಕ್ತಿ ಸೀತೆಯನ್ನು ಹಿಂಬಾಲಿಸುತ್ತದೆ.

"ರಪ್ಪೆ ಹೊಯ್ಯುವಷ್ಟರಲ್ಲಿ ಊರ್ಮಿಳಯ ಪರಿಚವು ಆಗಿಹೋದರೂ ಸಹೃದಯರು ಮರೆಯಲಾರದಂಥ ಪ್ರಭಾವವನ್ನು ಅವರ ಮನಸ್ಸಿನ ಮೇಲೆ ಬೀರುತ್ತಾಳೆ, ಅವಳ ಪ್ರಣಯ ಯಾತ್ರೆಯಂತೂ ಇನ್ನೂ ಕ್ಷಿಪ್ರದಲ್ಲಿಯೇ ಮುಗಿದು ಹೋಗುತ್ತದೆ; 'ಜನಕರಾಜನ ಹೃದಯದಿಂಗಿತಕೆ ಮನವೊಪ್ಪಿ ಸೌಮಿತ್ರಿಯೂರ್ಮಿಳೆಯನೊಪ್ಪಿದನ್, ಹೂಗೆಲಸಿ ಸುಗ್ಗಿ ಮೊಗ್ಗನ್ನಪ್ಪುವಂತೆ' ಈ ಒಂದು ಉಪಮೆಯಲ್ಲಿ ಲಕ್ಷ್ಮಣನ ಪ್ರಣಯಾನುರಾಗವೂ ಊರ್ಮಿಳೆಯ ಸೌಂದರ್ಯ ಸೌಕುಮಾರ್ಯವು ಅಡಕವಾಗಿದೆ"[೪೮] ಸೀತಾರಾಮರ ಪ್ರಣಯವನ್ನು ಅಷ್ಟೊಂದು ಉಜ್ವಲವಾಗಿ ಬೆಳೆಸುವ ಮಹಾಕವಿಯು ಸೀತಾರಾಮರನ್ನು ಹೊರತುಪಡಿಸಿ ಅಯೋಧ್ಯೆಯ ಅರಮನೆಯಲ್ಲಿ ಇನ್ನೂ ಮೂರು ಜೋಡಿಗಳಿವೆ ಎಂಬುದನ್ನೇ ಮರೆತುಬಿಡುತ್ತಾರೆ.

"ಸೀತಾರಾಮರ ಪ್ರಣಯ ಜೀವನವನ್ನು ಅತ್ಯಂತ ರೋಚಕವಾಗಿ ಉತ್ಕಟವಾಗಿ ಧ್ವನಿಸಂದ್ರವಾಗಿ ಚಿತ್ರಿಸುವ ಕವಿ ಊರ್ಮಿಳೆ ಲಕ್ಷ್ಮಣರ ದಾಂಪತ್ಯ ಜೀವನದ ಚಿತ್ರಕ್ಕೆ ಲೇಖನಿಯಿಡುವುದಿಲ್ಲ. ಆಕೆ ನೀರವ ವಧು, ಆತ ನಿಶ್ಯಬ್ಧ ಕ್ರಿಯಾಶೀಲ, ಅವರ ಪ್ರೇಮದಲ್ಲಿ ಶಾಖಕ್ಕಿಂತ ಪ್ರಶಾಂತ ಬಂಧುರ ಬೆಳಕೇ ಅಧಿಕ. ಲೋಕದ ಕಣ್ಣಿಗೆ ಆಹಾರವಾಗುವ ಇಂದ್ರಿಯೋನ್ಮಾದದ ಪ್ರಣಯವಲ್ಲ ಅವರದು; ಹೃದಯದಾಳದಲ್ಲಿ ಮೌನದೇಗುಲದಲ್ಲೇ ದ್ರವಿಸಿ ಕಣಕಣವನ್ನೂ ಜೀವಂತವಾಗಿಸುವ ಪುನೀತವಾಗಿಸುವ ದಿವ್ಯಾನುರಾಗ".[೪೯]

ಊರ್ಮಿಳಾ ಪಾತ್ರಕ್ಕೆ ನ್ಯಾಯ ಒದಗಿಸಿರುವ ಮಹಾಕವಿ ಕುವೆಂಪು ಅವರು ಇಡೀ ಸಂಚಿಕೆಗೇ 'ಊರ್ಮಿಳಾ' ಎಂದು ಹೆಸರಿಟ್ಟಿದ್ದಾರೆ. ಆಕೆಯ ಮೇಲೆ ಸಹೃದಯರ ಗಮನ ಕೇಂದ್ರೀಕರಿಸಿ ಆಕೆಯ ಮಹತ್ವವನ್ನು ಸಾರುತ್ತಾರೆ. ಮಹಾಕಾವ್ಯದಲ್ಲಿ ಲಕ್ಷ್ಮಣನನ್ನು ಅಡಿಗಡಿಗೂ ಊರ್ಮಿಳಾವಲ್ಲಭಾ, ಊರ್ಮಿಳೇಶ, ಊರ್ಮಿಳಾಧವ ಎಂದು ಇತರ ಪಾತ್ರಗಳ ಮೂಲಕ ಕರೆಸುತ್ತಲೇ ಊರ್ಮಿಳೆಯನ್ನು ಎಲ್ಲರ ನೆನಪಿನಲ್ಲಿ ಹಸುರಾಗಿಸುತ್ತಾರೆ.

ನೀರವ ಧ್ಯಾನವಧೂ ಹೇ ಊರ್ಮಿಲಾದೇವಿ
ಸೌಮಿತ್ರಿಯರ್ಧಾಂಗಿ, ಹೇಳು ನೀನೆಲ್ಲಿದ್ದೆ
ಕಡೆದ ಕಡಲೋಲಯೋಧ್ಯಾನಗರಿ ಮಸಗಿದ

----------

೪೮.ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೩೧೮

೪೯. ಅದೇ

ಕಾಂತಿ ದಿನದಂದು? ನಿರ್ನ್ನೆವೊವಿನಾವೇದೆ
ಜಗಳ್ದುದಿಲ್ಲವೆ ತುಳ್ಕಿ ನೇತ್ರ ಶತಪತ್ರದಿಂ?
ಪೆಣ್ಣೆತನಂ ತಾನೆನೀನಲ್ಲದೂರ್ಮಿಳೆಯಲ್ತು:
ಪೆಣ್ಣೆಂಬ ತಪಕೆ ನೀಂ ನಿರುಪಮ ಪ್ರತಿಮೆಯಾ!

[ಶ್ರೀರಾಮಾಯಣದರ್ಶನಂ, ಪು-೧೦೧]

ಅಯೋಧ್ಯೆಯಲ್ಲಿ ಇಷ್ಟೆಲ್ಲಾ ನಡೆಯುತ್ತದ್ದಾಗ ನೀನೆಲ್ಲಿದ್ದೆ ಊರ್ಮಿಳಾದೇವಿ? ಸೌಮಿತ್ರಿಯ ಅರ್ಧಾಂಗಿ; ಎಂದು ಪ್ರಶ್ನಿಸುತ್ತಲೇ ಮಹಾಕವಿ "ಹೆಣ್ಣೆಂಬ ಪವಿತ್ರತಮ ಸತ್ಯಕ್ಕೆ ನೀನೆ ಉಪಮಾತೀತ ಪ್ರತಿಮೆ!"[೩೦] ಎಂದು ಕೊಂಡಾಡಿ ಸೀತೆಗಿಂತಲೂ ಮಿಗಿಲಾದುದು ಊರ್ಮಿಳೆಯ ಮೌನ ವ್ರತವೆಂದು ಲೋಕಕ್ಕೆ ಸಾರುತ್ತಾರೆ.

ಕಾಂತನೊಡವಿರ್ದು ಕಾಂತಾರವೈವಿಧ್ಯಮಂ
ಸವಿವ, ಲಂಕೆಯೊಳಿರ್ದು ಹದಿಬದೆಯ ಸಾಹಸದ
ರಸಕೆ ಬಾಳಂ ಬೇಳ್ವ, ದೇವಮಾನವ ಸಕಲ
ಲೋಕ ಸಂಸ್ತುತಿಯ ಬೆಂಬಲದ ಸೀತೆಯ ತಪಕೆ
ಮಿಗಿಲ್ ನಿನ್ನ ಅಖ್ಯಾತಮಾ ದೀರ್ಘ ಮೌನವ್ರತಂ,
ಮೂಕಸತಿ ಹೇ ಗೋಚರಾತೀತೆ!

[ಶ್ರೀರಾಮಾಯಣದರ್ಶನಂ, ಪು-೧೦೧]

ಶ್ರೀರಾಮನೊಡವಿರುವ ಸೀತೆಗೆ ಕಾಂತರವಾದರೂ ಸುಖಬಾಳ್ವೆ ಇತ್ತು. ಲಂಕೆಯೊಳಗೆ ಹದಿಬದೆಯ ಧರ್ಮವನ್ನು ಮೆರೆದದ್ದರಿಂದ ಲೋಕದ ಜನರಿಂದ ಪೂಜಿಸಲ್ಪಡುತ್ತಾಳೆ.ಆದರೆ ಯಾವ ರಕ್ಷೆಯೂ ಇಲ್ಲದೇ ಮೌನ ತಪಸ್ಸಿನಿಂದ ತನ್ನ ಇನಿಯನ ಬರುವಿಕೆಯನ್ನು ಕಾಯುವ ಸತಿಯಾದ ಊರ್ಮಿಳೆ ಯಾರ ಕಣ್ಗೂ ಬೀಳದೆ ಮರೆಯಾಗುತ್ತಾಳೆ. ಆಕೆಯ ತಪಸ್ಸಾಧನೆಯ ಫಲ ಸೀತೆಗೆ ಶ್ರೀರಕ್ಷೆ! ಆದರೂ ಊರ್ಮಿಳೆ ಗೋಚರಾತೀತೆ! ಊರ್ಮಿಳೆಯ ಪಾತ್ರಕ್ಕೆ ಕುವೆಂಪು ತೋರಿರುವ ಅಕ್ಕರೆಯ ಸ್ಥಾನಮಾನ ಇಡೀ ಸ್ತ್ರೀ ಕುಲಕ್ಕೆ ಕೊಟ್ಟಿರುವ ಗೌರವದ ಗರಿಮೆಯಾಗಿದೆ. ಸುಮಿತ್ರಾತ್ಮಜನು ಅಣ್ಣನೊಡನೆ ಹೋಗಲು ಅನುಮತಿ ಬೇಡಿದಾಗ ಇಲ್ಲವೆನ್ನದೆ ಗುರು ತಪಸ್ಸಿಗೆ ದೀಕ್ಷೆನೀಡಿದಾಗ ಕೊಟ್ಟಮಂತ್ರವನ್ನು ಆ ಸತಿಶಿರೋಮಣಿ ಇತರರಿಗೆ ಹೇಳುವುದು ಸಾಧ್ಯವೇ? ಆದ್ದರಿಂದಲೇ ಊರ್ಮಿಳೆಯು ಲಕ್ಷ್ಮಣನು ರಾಮಸೀತೆಯರೊಡನೆ ಅಯೋಧ್ಯೆ ಬಿಟ್ಟಂದಿನಂದಲೂ ಸರಯೂ ನದಿಯತೀರದಲ್ಲಿ ಪರ್ಣಕುಟಿಯನ್ನು ರಚಿಸಿ ಚಿರತಪಸ್ವನಿಯಾಗುತ್ತಾಳೆ; ತಪೋಮಹಿಮೆಯ ಚಿತ್‌ಮಂಗಳ ಶಕ್ತಿಯ ರಕ್ಷೆಯನ್ನು ಸೀತಾರಾಮಲಕ್ಷ್ಮಣರಿಗೆ ಕಟ್ಟುತ್ತಾಳೆ. ನಿಸ್ವಾರ್ಥತೆಯ ಪ್ರತೀಕ, ತ್ಯಾಗದ ಪ್ರತೀಕವಾಗಿ ಊರ್ಮಿಳೆ ತಪಃಶಕ್ತಿಯಾಗಿ, ಬೆಳಕಾಗಿ ನಿಲ್ಲುತ್ತಾಳೆ.

ರಾಮಸೀತೆಗೆ ಲಕ್ಷ್ಮಣನನ್ನು ಕಂಡಾಗಲೆಲ್ಲ ಊರ್ಮಿಳೆ ನೆನಪು ಕಾಡದಿರುವುದೇ? ದಯಾನಿಧಿಯಾದ ರಾಮನಿಗೆ ಸೀತೆಯೊಂದಿಗೆ ಇದ್ದಾಗಲೆಲ್ಲಾ ಲಕ್ಷ್ಮಣನ ಒಂಟಿತನ ಬಾಧಿಸದಿರುವುದೇ? ರಾಮ ಚಿತ್ರಕೂಟದಲ್ಲಿದ್ದಾಗ ಒಂದು ದಿನ ರಾತ್ರಿ ಕಂಡ ಕನಸು ಲಕ್ಷ್ಮಣನ ಮನೋವೇದನೆ ತಿಳಿದ ರಾಮನ ಮನಸ್ಸಿನ ಸ್ಪಂದನಕ್ಕೆ ಸಾಕ್ಷಿ ಎಂದೇ ತಿಳಿಯಬಹುದು.

----------

೩೦. ದೇಜಗೌ, ಶ್ರೀರಾಮಾಯಣ ದರ್ಶನಂ ವಚನ ಚಂದ್ರಿಕೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಕೃಷ್ಣಮೂರ್ತಿಪುರಂ, ಮೈಸೂರು ೪, ಏಳನೆಯ ಮುದ್ರಣ ೨೦೦೭, ಪು.೯೧

ತಮ್ಮ, ಪಿಂತಿರುಗಯೋಧ್ಯೆಗೀ
ರಾತ್ರಿಯಂ ಕಳೆದು ಊರ್ಮಿಳೆ ನಿನ್ನನೆಯೆ ಕರೆದು
ಗೋಳಾಡುತ್ತಿರ್ಪಂತೆ ಕಂಡೆ ಕನಸಂ.

[ಶ್ರೀರಾಮಾಯಣದರ್ಶನಂ, ಪು-೧೩೭]

ಈ ಸಂದರ್ಭ ರಾಮನ ಸಹೋದರ ವಾತ್ಸಲ್ಯವನ್ನು ಊರ್ಮಿಳೆಯ ಬಗೆಗಿರುವ ಸದ್ಭಾವನೆಯನ್ನು,ಪೂರ್ಣ ಕಾಳಜಿಯನ್ನು ಬಿಂಬಿಸುತ್ತದೆ. ರಾಮನ ಪಾತ್ರಕ್ಕೆ ಮತ್ತಷ್ಟು ಘನತೆಯನ್ನು ಈ ಸನ್ನಿವೇಶ ತಂದು ಕೊಡುತ್ತದೆ. ಅಣ್ಣನಮಾತಿಗೆ ಲಕ್ಷ್ಮಣ ನೀಡುವ ಉತ್ತರವು ಆತನ ಮತ್ತು ಊರ್ಮಿಳೆಯ ಮಧುರ ಪ್ರೇಮ ಬಾಂಧವ್ಯದ ಪಾವಿತ್ರತೆಯನ್ನು, ಹೃದಯವೈಶಾಲ್ಯತೆಯನ್ನು ಹಾಗೂ ತ್ಯಾಗಶೀಲತೆಯನ್ನು ಸಮರ್ಥವಾಗಿ ತೆರೆದಿಡುತ್ತದೆ.

ಅಣ್ಣ,
ಕಾಂತೆ, ಊರ್ಮಿಳೆ ತಪಸ್ವನಿ, ನಿನ್ನೊಡನೆ ಬರುವ
ಮುನ್ನಮಾಕೆಯ ಕೃಪೆಯನಾಂತೆ ಬಂದೆನ್. ನಿನಗೆ
ಚಿಂತೆಯಿತಾದೆಸೆಗೆ ಬೇಡಯ್.

[ಶ್ರೀರಾಮಾಯಣದರ್ಶನಂ, ಪು-೧೩೪]

ಲಕ್ಷ್ಮಣನ ಮಾತುಗಳು ರಾಮನಿಗೆ ಸಮಾಧಾನ ನೀಡಲು ಬಂದವುಗಳಾದರೂ ಅದರಲ್ಲಿ ಲಕ್ಷ್ಮಣ ಊರ್ಮಿಳೆಯಲ್ಲಿಟ್ಟಿರುವ ಪ್ರೀತಿ ಗೌರವಗಳು ಹಾಗೂ ಊರ್ಮಿಳೆಯು 'ತಪಸ್ವಿನಿ' ಎಂಬಲ್ಲಿ ಲಕ್ಷ್ಮಣನ ಹೃದಯದಲ್ಲಿರುವ ಸತಿಯ ಬಗೆಗಿನ ಮೆಚ್ಚುಗೆ ವ್ಯಕ್ತವಾಗುತ್ತದೆ. ಶ್ರೀರಾಮ, ಸೀತೆ, ಲಕ್ಷ್ಮಣರಿಗೆ ಸದಾ ನೆನಪಾಗುವ ಒಂದು ಶಕ್ತಿ ಎಂದರೆ ಊರ್ಮಿಳೆ. ಚಿತ್ರಕೂಟದಲ್ಲಿ ಯುಗಾಂತರದಿಂದ ಬಿದ್ದಿರುವ ಒಂದು ಶಿಲೆಯಲ್ಲಿರುವ ಚೈತನ್ಯವನ್ನು ಗುರುತಿಸಿ ರಾಮ ಸೀತೆ ಅದನ್ನು 'ಕಲ್ದವಸಿ' ಎಂದು ಹೆಸರಿಟ್ಟಿರುತ್ತಾರೆ. ಲಕ್ಷ್ಮಣನ ಆಯಾಸ ಪರಿಹರಿಸುವ ತಾಣವೆಂದರಿತಾಗ 'ಕಲ್ದವಸಿ' ಅವರಿಗೆ ಊರ್ಮಿಳೆಯ ಪ್ರತೀಕವಾಗಿ ತೋರುತ್ತದೆ.

ಸೌದೆಯಂ ಪೊತ್ತು ತಂದಲ್ಲಿವಿಶ್ರಮಿಸಿರ್ದನಾ
ಊರ್ಮಿಳಾವಲ್ಲಭನ್ಸೆಸೆ! ನೆನೆದಾಕೆಯಂ
ಬೇಯುತಿರುವನೆ? ಬೇಡುತರುವನೆ ದೇವರಂ ತನ್ನ
ಸತಿಗಾಗಿ? ಸುಯ್ದುರ್ ಕೃತಜ್ಞತಾಭಾರದಿಂ
ದಂಪತಿಗಳಿರ್ವರುಂ, ಮಾತನುಳಿದಳ್ ಸೀತೆ.

[ಶ್ರೀರಾಮಾಯಣದರ್ಶನಂ, ಪು-೧೪೬]

ಕೃತಜ್ಞತಾ ಭಾವವನ್ನು ತುಂಬಿಕೊಂಡು ರಾಮಸೀತೆ ದಂಪತಿಗಳಿಗೆ ಅಂದಿನಿಂದಲೇ ಆ ಬಂಡೆ ಊರ್ಮಿಳೆಯ ಸಂಯಮದ ಪ್ರತೀಕವಾಗಿ ಗುರು ಹಾಗೂ ಎಚ್ಚರಿಕೆಯಾಗಗುತ್ತದೆ. ಕುವೆಂಪು ಅವರು ಸಾಮಾನ್ಯ ಘಟನೆಗಳ ಮೂಲಕವೇ ಊರ್ಮಿಳಾದೇವಿಯ ಸಚ್ಚಾರಿತ್ರ್ಯ ಮತ್ತು ತಪಃಶಕ್ತಿಯನ್ನು ಸಹೃದಯರಿಗೆ ತಿಳಿಸುತ್ತಾರೆ. ಲಕ್ಷ್ಮಣನು ಊರ್ಮಿಳೆಯನ್ನು ನೆನೆದು ನಿಡುಸುಯ್ದರೂ, ತನ್ನ ಪ್ರೇಮಸಖಿ ತಪಸ್ವಿನಿ ಎಂದು ಮೆಚ್ಚುತ್ತಾನೆ.

ಪಂಚವಟಿಯಲ್ಲಿದ್ದಾಗ ಹೇಮಂತ ಋತುವಿನ ಸಂಭ್ರಮ ಸವಿದು ಗೋದಾವರಿಯಲ್ಲಿ ಮಿಂದು ಹಿಂತಿರುಗುವಾಗ ಬಿದಿರು ಮೆಳೆಯಿಂದ ಹಿಮದ ಹನಿಗಳು ರಾಮ ಸೀತೆ ಲಕ್ಷ್ಮಣರ ಮೇಲೆ ಬೀಳುತ್ತವೆ. ಲಕ್ಷ್ಮಣ ದೇವಿಯನರಸುತ್ತಿದ್ದಾಳೆ ಈ ಅರಣ್ಯಸಖಿ ಎಂದಾಗ ಸೀತೆಯು ಅದಕ್ಕೆ ಪ್ರತಿಯಾಗಿ ಆಡುವ ಮಾತುಗಳಿಂದ ಆಕೆಯು ಊರ್ಮಿಳೆಯ ಮೇಲಿಟ್ಟಿರುವ ಅಭಿಮಾನ, ವಾತ್ಸಲ್ಯಗಳು ವ್ಯಕ್ತವಾಗುತ್ತವೆ.

ಅಲ್ತಲ್ತು, ತಂಗಿ ಊರ್ಮಿಳೆಯ ಕಣ್ಣೀರುಗಳ್ ಮುನ್
ಬರ್ಪ ಸೊಗಕುರ್ಕಿ ಮುಂಗಾಣ್ಕೆಗಳ ನರ್ಪಿಸಿಹವೈ
ಪ್ರಾಣೇಶ್ವರನ ಚರಣತಲಕೆ!

[ಶ್ರೀರಾಮಾಯಣದರ್ಶನಂ, ಪು-೨೦೫]

ಈ ಮಾತುಗಳನ್ನು ಸೀತೆಯ ಜಾಣ್ಮೆಯನ್ನು, ತಂಗಿಯ ಬಗೆಗಿನ ವಾತ್ಸಲ್ಯವನ್ನು, ಹಾಗೂ ಲಕ್ಷ್ಮಣನು ತನ್ನ ಮನದೊಡತಿಯ ನೆನಪಲ್ಲಿ ನಾಚುವ ಬಗೆಯನ್ನು ತಿಳಿಸುತ್ತವೆ. ಪಂಚವಟಿಯನ್ನು ಬಿಟ್ಟು ಹೊರಡಲು ಸಿದ್ಧವಾಗುತ್ತಿದ್ದಾಗ ಬೇಲಿಯಲ್ಲಿ ನಾರುಡೆಯೊಂದನ್ನು ಕಂಡು ಸೀತೆಯು ಯಾರದೀ ನಾರುಡೆ ಮರೆತಿರೇನು? ಎಂದು ಪ್ರಶ್ನಿಸಿದ್ದಕ್ಕೆ ಲಕ್ಷ್ಮಣನು ನೀಡುವ ಉತ್ತರ ಸಹೃದಯರನ್ನು ಚಿಂತನಾಂತರಂಗಕ್ಕೆ ನೂಕುತ್ತದೆ.

ಅಯ್ಯೋ ಮರೆವೆನೇಂ?
ಛಿದ್ರಮಾದೊಮದಂ ಕೊಟ್ಟವಂ ಮುನಿಯಲ್ತೆ?
ಖರನ ಕೊಲುವಂದದನೆ ಮೈಜೋಡನೆಸಗಿರ್ದೆನಾಂ
ಶೂರ್ಪನಖಿಯಿಂ ಪೊರೆದ ಬನದ ಬಾಳ್ಕೆಯ ಶುಚಿಯ
ಕಾಣ್ಕೆಯೆಂದದನೀವೆನೆನ್ನಾ ತಪಸ್ವಿನಿಗೆ!

[ಶ್ರೀರಾಮಾಯಣದರ್ಶನಂ, ಪು-]

ತನ್ನ ತಪಸ್ವಿನಿ ಊರ್ಮಿಳೆಗೆ ಮುನಿನೀಡಿದ ನಾರುಡೆಯನ್ನು ನೀಡುವ ಬಯಕೆಯುಳ್ಳ ಲಕ್ಷ್ಮಣನು ಊರ್ಮಿಳೆಯನ್ನು ಎಷ್ಟು ಪ್ರೀತಿಸುತ್ತದ್ದನೆಂದು ಅರಿವಾಗುತ್ತದೆ. ಶರ್ಪನಖಿಯಿಂದ ತನ್ನನ್ನು ರಕ್ಷಿಸಿದ ಶುಚಿಯ ಕುರುಹನ್ನು ತನ್ನ ಸತಿಗೆ ನೀಡಲು ಬಯಸಿರುವ ಲಕ್ಷ್ಮಣನು ಮನದಲ್ಲಿ ಎಷ್ಟುಭಾರಿ ಮನದಲ್ಲಿ ಊರ್ಮಿಳೆಗಾಗಿ ಚಿಂತಿಸಿರಬಹುದು; ಹಂಬಲಿಸಿರಬಹುದು; ಮನದ ವೇದನೆಯನ್ನು ಆಕೆಯಲ್ಲಿ ನಿವೇದಿಸಿರಬಹುದು ಎಂದು ಅಂದಾಜಿಸಲು ಸಹೃದಯರಿಗೆ ಅಸಾಧ್ಯವೇ ಸರಿ. "ಲಕ್ಷ್ಮಣ ಸ್ವರ್ಥತ್ಯಾಗಿಯಾದ ಉದಾರಚರಿತನಾದ ಆದರ್ಶ ಸೋದರನಾದರೆ, ಊರ್ಮಿಳೆ ಅವನಿಗನುರೂಪಳಾದ ಅವನ ಮನ, ಜೀವನ, ಪರಿಸರವನ್ನೆಲ್ಲಾ ಪರಿಮಳಿಸುವಂಥ ಶೀಲವತಿ, ತಪ್ತ ತಪಸ್ವಿನಿ. ಅದು ಅವನಿಗೆ ಮಧುರವಾದ ಹಿತವಾದ ಪವಿತ್ರವಾದ ಅಭಿಮಾನಾಸ್ಪದವಾದ ಮರೆಯಲಾಗದ ನೆನಪು. ಆಕೆ ಸದಾ ಹಿನ್ನೆಲೆಯಲ್ಲಿದ್ದರೂ ಅವಳ ಪ್ರಭಾವ ಹೀಗೆ ಎಲ್ಲರನ್ನೂ ಆವರಿಸುತ್ತ ಬೆಳಗಿಸುತ್ತ ಜೀವಂತಿಸುತ್ತಸಾಗುತ್ತದೆ".[೫೧]

---

೫೧. ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೩೨೨

ಮಹಾಸಂಗ್ರಾಮದ ಹಿಂದಿನರಾತ್ರಿ ತಪೋಲಕ್ಷ್ಮಿಗೂ ನಭೋಲಕ್ಷ್ಮಿಗೂ ನಡೆಯುವ ಸಂವಾದದಿಂದ ಅನೇಕ ಸತ್ಯಗಳು ಅನಾವರಣಗೊಂಡಿವೆ. ಸೀತೆಯ ಪಾತಿವ್ರತ್ಯ, ಶ್ರೀರಾಮಲಕ್ಷ್ಮಣರ ಭುಜಶಕ್ತಿಗಳೊಂದಿಗೆ ಊರ್ಮಿಳೆಯ ಮನೋಶಕ್ತಿ, ತಪಶ್ಯಕ್ತಿಗಳೂ, ಭೀಮಶಕ್ತಿ ಯಾಗಿ ಅವರನ್ನು ಸದಾ ರಕ್ಷಿಸಿ ವಿಜಯವನ್ನು ದೊರಕಿಸಿಕೊಡುತ್ತದೆ. ಊರ್ಮಿಳೆಯ ಉಗ್ರ ತಪಸ್ಸು ಪಾರ್ವತಿಯನ್ನು ಕೂಡಮೆಚ್ಚಿಸಿ ರಾಮಲಕ್ಷ್ಮಣರನ್ನು ದೇವಶಕ್ತಿಯೇ ರಕ್ಷಿಸುವಂತೆ ಮಾಡುತ್ತದೆ.

ನಿಕುಂಭಿಲಾ ಯಾಗಶಾಲೆ ಪ್ರವೇಶಸಿದ ಲಕ್ಷ್ಮಣನ ಸ್ಥಿತಿ ಗಂಭೀರವಾಗಿದ್ದು ಆಂಜನೇಯನು ಸಂಜೀವಿನಿಯನ್ನು ತಂದು ಆತನನ್ನು ಗುಣಪಡಿಸಿದಾಗ ಲಕ್ಷ್ಮಣನು ಊರ್ಮಿಳಾ, ಊರ್ಮಿಳಾ ಎಂದು ಕೂಗುತ್ತಲೇ ಎಚ್ಚರಗೊಳ್ಳುತ್ತಾನೆ. ಆಕೆಯನ್ನು ಕಾಣಲು ಸುತ್ತಮುತ್ತ ಹುಡುಕುತ್ತಾನೆ. ತನ್ನ ಆಯಸ್ಸು ಕಳೆಯದಂತೆ ತಪಃ ಕವಚ ತೊಡಿಸಿದ ಪೂಜ್ಯೆಯನ್ನು ಪ್ರಾಣವಲ್ಲಭೆಯಾಗಿ ಪಡೆದ ನಾನು ಧನ್ಯರಲ್ಲಿ ಧನ್ಯನೆಂದು ಕೊಳ್ಳುತ್ತಾನೆ. "ತನ್ನ ಪ್ರಾರ್ಥನಾ ಲಭ್ಯವಾದ ಸತಿಶಕ್ತಿಸ್ಫುರಿತವಾದ ದಿವ್ಯಶಕ್ತಿಯಿಂದ ಲಕ್ಷ್ಮಣ ಹೃದಯಕ್ಕೆ ಅಮೃತವನ್ನೆರೆದವಳು, ಇಂಜಿತುವಿನ ಮಾತ್ರಿಕತೆಗೆ ಅವನ ಆಯಸ್ಸು ಬಲಿ ಯಾಗದಂತೆ ತನ್ನ ತಪಃ ಕವಚವನ್ನು ಅಣ್ಣನಿಗೆ ತೋಡಿಸಿ ಅವನ್ನು ಮೃತ್ಯುವಿನಿಂದ ಪಾರು ಮಾಡಿದವಳು ಊರ್ಮಿಳೆ. ಇದು ಅಂತರಂಗ ಲೋಕದಲ್ಲಿ ನಡೆದ ಸತ್ಯ ಕ್ರಿಯೆ; ಬಹಿರಂಗ ಲೋಕದಲ್ಲಿ ಆಂಜನೇಯ ಸಂಜೀವಿನಿ ತಂದದ್ದು ಕೇವಲ ನಿಮಿತ್ತಮಾತ್ರ, ಕೇವಲ ಮಡದಿಯೆಂಬ ಮೋಹದಾವರಣವನ್ನು ಕಳಚಿ ತನ್ನ ಪತಿಯೇ ತನ್ನನ್ನು ಪೂಜ್ಯಭಾವದಿಂದ ಆರಾಧಿಸುವಂಥ ಮಹೋನ್ನತ ಪವಿತ್ರ ಸ್ಥಾನಕ್ಕೇರಿದವಳು ಊರ್ಮಿಳೆ. ಶ್ರೀರಾಮಕೂಡ ಸೀತೆಯನ್ನು ಇಂಥ ಭಾವದಿಂದ ಕಂಡಿದ್ದಿಲ್ಲ. ಸದಾ ಹಿನ್ನೆಲೆಯಲ್ಲಿದ್ದೇ ಮುನ್ನೆಲೆಯ ಅಕ್ಕನನ್ನೂ ಸಾಧನೆಯಲ್ಲಿ ಮೀರಿಸಿದಂಥ ಮಹಿಮೆ ಅವಳದು".[೫೨] ಇಂಥ ಮಹಿಮಾವಂತಳಾದ ಊರ್ಮಿಳೆಯ ತ್ಯಾಗ ಸಿದ್ಧಿಗಳ ತುತ್ತತುದಿ ತಲುಪುವುದು ರಾಮಾಯಣದ ಕೊನೆಯ ಭಾಗದಲ್ಲಿ.

ವನವಾಸ ಸಮಯದ ಎಲ್ಲ ಕಷ್ಟಗಳಿಂದ ಪಾರಾಗಿ ಅಯೋಧ್ಯೆಗೆ ರಾಮಸೀತೆ ಲಕ್ಷ್ಮಣರು ಮರಳುತ್ತಿರುವ ಶುಭ ಸಮಾಚಾರವನ್ನು ಊರ್ಮಿಳೆಗೆ ತಿಳಿಸಿದವಳು ಭರತಸತಿ ಮಾಂಡವಿ. ಮಾಂಡವಿಯು ಊರ್ಮಿಳೆಯನ್ನು ನಂದಿಗ್ರಾಮಾಶ್ರಮಕ್ಕೆ ಕರೆದೊಯ್ಯಲು ಬಂದಾಗ ಅವರಿಬ್ಬರ ನಡುವೆ ನಡೆಯುವ ಸಂಭಾಷಣೆಯು ಊರ್ಮಿಳೆಯ ವ್ಯಕ್ತಿತ್ವಕ್ಕೆ ಚಿನ್ನದ ಗರಿಗಳನ್ನು ಮೂಡಿಸುತ್ತದೆ. ಮೀಯದೆ, ಉಡದೇ ಹೋಗುವುದು ಮಂಗಳವಲ್ಲವೆನ್ನುವ ಊರ್ಮಿಳೆಗೆ "ನೋಡಬಾರದೆ ಅವರ್ ನಿನ್ನ ನಿಡು ಕಡು ನೋಂಪಿಯಂ"[೫೩] ಎನ್ನುವ ಮಾಂಡವಿ ಸಹಜವಾಗಿಯೇ ತೋರುತ್ತಾಳೆ. ಆದರೆ ಊರ್ಮಿಳೆ ಕೊಡುವ ಸಂಯಮಪೂರ್ಣ ಸಮರ್ಥನೆಯು ಆಕೆಯ ವ್ಯಕ್ತಿತ್ವಕ್ಕೆ ಕುವೆಂಪು ಹಿಡಿದಿರುವ ಕನ್ನಡಿ ಎನಿಸುತ್ತದೆ.

"ಚಿಃ! ಕಡಲ್ಗಿದಿರ್
ಪನಿಗೇಂ ಪ್ರದರ್ಶನಂ? ದೇವರ ತಪಕ್ಕಿದಿರ್
ನಮ್ಮದೊರ್ ತೃಣಮಲ್ತೆ! ಸಂತೋಷ ಸಮಯದೊಳ್
ತೋರ್ಪುದನುಚಿತವೆಮ್ಮ ಕಷ್ಟಮಂ! ತನ್ನ ತಾನ್
ಇಲ್ಲಗೈವುದೆ ಎಲ್ಲ ಸಾಧನೆಗೆ ಕೊನೆಯ ಗುರಿ;

-----------

೫೨. ಅದೇ.

೫೩. ಕುವೆಂಪು, ಶ್ರೀರಾಮಾಯಣದರ್ಶನಂ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು ೨, ಎರಡನೇ ಆವೃತ್ತಿ೨೦೦೪, ಪು.೮೫೬

ಮೇಣ್ ತಪಕೆ ಕೇಳ್, ತಂಗೆ, ಪರಮ ಪ್ರಯೋಜನಂ!"

[ಶ್ರೀರಾಮಾಯಣದರ್ಶನಂ, ಪು-೮೫೯]

"ಇಲ್ಲಿಯ ಒಂದೊಂದು ಮಾತು ಊರ್ಮಿಳೆಯು ಸಾಧನೆಗೆ, ಅವಳು ಕಂಡುಕೊಂಡ ಪರಮಸತ್ಯಕ್ಕೆ, ಆಕೆ ಯಾವ ಗದ್ದಲ ಗಡಿಬಿಡಿ ಪ್ರಚಾರವೂ ಇಲ್ಲದೆ ಸ್ವಯಂಶಕ್ತಿಯಿಂದ ಏರಿದ ಎತ್ತರಕ್ಕೆ ಪ್ರತಿಮೆಗಳಾಗಿವೆ. ಅಸ್ನಾತಳಾಗಿಯೇ ಆರ್ಯನನ್ನು ನೋಡಬಯಸುನೆಂದು ಹೇಳುವ ಸೀತಾದೇವಿಯ ಮನೋಧರ್ಮಕ್ಕೂ, ತನ್ನ ಸಾಧನೆಯೂ ಏನೂ ಅಲ್ಲವೆಂಬ ಪರಮವಿನಮ್ರ ಭಾವನೆಯ ಈ ಊರ್ಮಿಳಾದೇವಿಗೂ ಎಂಥಾ ಅಂತರ! ಸೀತಾ ರಾಮ ಲಕ್ಷ್ಮಣರಂಥ ಮಹಾವ್ಯಕ್ತಿತ್ವಗಳ ಎದುರು ತಾನೊಂದು ಹನಿ ಎಂದು ಭಾವಿಸುವ; ಸಂತೋಷ ಸಂದರ್ಭದಲ್ಲಿ ಕಷ್ಟದ ಪ್ರದರ್ಶನ ಅನುಚಿತ ಅಸಾದು ಎಂದು ಆಲೋಚಿಸುವ; ಎಲ್ಲ ಸಾಧನೆಯ ಪರಮ ಗುರಿಯೆಂದರೆ ಎಲ್ಲ ಕಡೆಯೂ ತನ್ನನ್ನು ಮೆರೆಸಿಕೊಳ್ಳುವುದಲ್ಲ, ಇಲ್ಲಗೈದುಕೊಳ್ಳುವುದು ಎಂಬ ಆಧ್ಯಾತ್ಮಿಕ ನಿಲುವಿಗೆ ಮುಟ್ಟುವ ಆಕೆಯ ವ್ಯಕ್ತಿತ್ವ ಅತ್ಯಂತ ಅಪೂರ್ವ ಉಜ್ವಲ ಪರಿಣಾಮಕಾರಿ".[೫೪]

ಊರ್ಮಿಳೆಯು ಮಿಂದು ಮಡಿಯುಟ್ಟು ತನ್ನ ಪತಿದೇವರನ್ನು ನೆನೆಯುತ್ತಾ ಸಿಂಗರಿಸಿಕೊಂಡು ಸುತ್ತಣ ಪ್ರಕೃತಿ ಶಕ್ತಿಗಳಿಗೆ ದೇವತೆಗಳಿಗೆ ನಮಿಸಿ ಬೀಳ್ಕೊಂಡು ತನ್ನಂತ್ತೆಯ ಮಂದಿರವನ್ನು ಪ್ರವೇಶಿಸುತ್ತಾಳೆ. ಸುಮಿತ್ರೆಯು ಸೊಸೆಯನ್ನು ಅಪ್ಪಿ "ನಿನ್ನ ತಾಳಿಯ ಪುಣ್ಯಮೈಸಲೆ, ಮಗಳೆ ಮರಳ್ದುದು ಕಾಡು ಪಾಲಾದೆಮ್ಮಕುಲದೇಳ್ಗೆ"[೫೫] ಎಂಬ ಮಾತುಗಳು ರಾಮಾಯಣಕ್ಕೆ ಊರ್ಮಿಳೆಯ ತಪಃಫಲದಿಂದಲೇ ಅಂತಿಮ ಗುರಿಸಿಕ್ಕದ್ದನ್ನು ಸೂಚ್ಯವಾಗಿಯೇ ಧ್ವನಿಸುತ್ತದೆ.

ಅರಮನೆಯಲ್ಲಿಯೇ ಕೈಕೆಯು ಶೋಕದ ಸಾಗರದಲ್ಲಿ ಮುಳುಗಿ ವನವಾಸ ಅನುಭವಿಸುತ್ತಿದ್ದು ಆಕೆಯ ಶೋಕಕ್ಕೆ ಪರಿಸಮಾಪ್ತಿಯೇ ಇಲ್ಲವೇನೋ ಎಂಬಂತೆ ಎಲ್ಲರೂ ಯೋಚಿಸುವಾಗ ಕೈಕೆಯ ಮನಕ್ಕೆ ತಂಪನ್ನು ನೀಡುವವಳು ಊರ್ಮಿಳೆ. ಕೈಕೆಯನ್ನು ತನ್ನ ಹಿತೋಕ್ತಿಗಳಿಂದ ಸಮಾಧಾನಗೊಳಿಸಿ ರಾಮ-ಭರತರ ಸಂದರ್ಶನಕ್ಕೆ ಕರೆದೊಯ್ಯುವ ಸಜ್ಜನಿಕೆಯು ಊರ್ಮಿಳೆಯನ್ನು ಮತ್ತಷ್ಟು ಎತ್ತರಕ್ಕೆ ಕರೆದೊಯ್ಯುತ್ತದೆ. ಹದಿನಾಲ್ಕು ವರ್ಷಕಾಲ ವನವಾಸದಿಂದ ಅಗಲಿದ್ದ ಊರ್ಮಿಳಾ-ಲಕ್ಷ್ಮಣರ ಸಮಾಗಮದಲ್ಲಿ ಊರ್ಮಿಳೆಯ ಚಿತ್ರ ಕೊನೆಗೊಳ್ಳುವುದಿಲ್ಲ. ಸೀತೆಯ ಉಪಚಾರದಲ್ಲಿ ತನ್ನನ್ನು ತಾನು ಮರೆಯುವಲ್ಲಿ ಮಹಾಕವಿ ಊರ್ಮಿಳಾ ಪಾತ್ರಕ್ಕೆ ಪೂರ್ಣತೆಯನ್ನು ತಂದು ಕೊಡುತ್ತಾರೆ. ಊರ್ಮಿಳೆ ಸಂಯಮ, ತ್ಯಾಗ, ಪೂಜ್ಯತೆಯ ಪ್ರತೀಕವಾಗಿ, ಮಹಾ ಮೌನದ ತಪಃಶಕ್ತಿಯ ಪ್ರತಿರೂಪವಾಗಿ ಮಹಾಪತಿವ್ರತೆಯಾಗಿ ಸಹೃದಯರ ಮನಸ್ಸಿನಲ್ಲಿ ನಿಲ್ಲುವಂತೆ ಚಿತ್ರಿಸಿ, ಮಹಾಕವಿ ಕುವೆಂಪು ಆಕೆಯ ಪಾತ್ರವನ್ನು ಉಧ್ಧಾರಿಸಿರುವ ರಸಋಷಿಯಾಗಿದ್ದಾರೆ.

-----------

೫೪. ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೩೨೬

೫೫.ಕುವೆಂಪು, ಶ್ರೀರಾಮಾಯಣದರ್ಶನಂ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು ೨, ಎರಡನೇ ಆವೃತ್ತಿ೨೦೦೪, ಪು.೮೬೦

## ೭. ಮಂಡೋದರಿ

ಪಂಚ ಮಹಾಪತಿವ್ರತಿಯರಲ್ಲಿ ಒಬ್ಬಳಾದ ಮಂಡೋದರಿಯು ರಾವಣನ ಪಟ್ಟಮಹಿಷಿ. ದಾನವ ಶಿಲ್ಪಿಯಾದ ಮಯನ ಮಗಳು. ವಾಲ್ಮೀಕಿ ಮಹಾಕವಿಯಿಂದ ಅವಜ್ಞೆಗೆ ಒಳಗಾಗಿರುವ ಪಾತ್ರಗಳಲ್ಲಿ ಮಂಡೋದರಿಯೂ ಒಬ್ಬಳು. "ಕುವೆಂಪು ವಿರಚಿತ ಶ್ರೀರಾಮಾಯಣ ದರ್ಶನದಲ್ಲಿ ಮೈವೆತ್ತ ಮಂಡೋದರಿ ಒಬ್ಬ ಅಪೂರ್ವ ಮಹಾಸತಿಯಾಗಿ ಸೌಂದರ್ಯದಧಿಪತಿಯಾಗಿ, ಸಂಸ್ಕೃತಿಯ ಶ್ರೇಷ್ಠ ಪ್ರತಿನಿಧಿಯಾಗಿ ತನ್ನ ಪತಿಯ ಆತ್ಮೋದ್ಧಾರಕಾತರೆಯಾಗಿ ಸೀತಾದೇವಿಯ ಪಾತಿವ್ರತ್ಯ ರಕ್ಷಣೆಯ ವಜ್ರಕವಚವಾಗಿ ಲಂಕೆಯ ಯೋಗಕ್ಷೇಮದ ಮಾತೃಹೃದಯವಾಗಿ ಓರ್ವ ಅನ್ಯಾದೃಶ ಸ್ತ್ರೀ ಶಕ್ತಿಯಾಗಿ ಬೆಳಗುತ್ತಾಳೆ".[೫೬]

ಮಂಡೋದರಿಯ ಪ್ರಸ್ತಾಪವನ್ನು ನಾವು ಮೊದಲು ಕೇಳುವುದು ಚಂದ್ರನಖಿಯಿಂದ. ರಾವಣನ ಸೋದರಿಯಾದ ಚಂದ್ರನಖಿಯು ರಾಮನನ್ನು ಮೋಹಿಸಿ ಬಂದು ಆತನ ಜೊತೆಗಿರುವ ಸತಿ ಸೀತೆಯನ್ನು ಕಂಡು ಅವಳ ಭುವನ ಮನೋಹರವಾದ ಸೌಂದರ್ಯದೊಂದಿಗೆ ತನ್ನ ಅತ್ತಿಗೆಯ ಸೌಂದರ್ಯವನ್ನು ಹೋಲಿಸುತ್ತಾಳೆ. ಇಡೀ ಲಂಕೆಯಲ್ಲಿ ಅನುಪಮ ಸೌಂದರ್ಯದ ಗಣಿ ಎಂದರೆ ಮಂಡೋದರಿ. ಮೊದಲೇ ಶಿಲ್ಪಿಯ ಮಗಳು; ಇಷ್ಟೊಂದು ರೂಪಲಾವಣ್ಯಗಳನ್ನು ಪಡೆದಿದ್ದರೂ ಲಂಕೇಶ್ವರನಾದ ರಾವಣನ ಪಟ್ಟಮಹಿಷಿಯಾಗಲು ಸಾಧ್ಯವಾಗುತ್ತಿತ್ತೇ? ಮಂಡೋದರಿಯು ಸೌಂದರ್ಯದಲ್ಲಿ ಮಾತ್ರವಲ್ಲದೆ ಗುಣದಲ್ಲಿಯೂ ಸೀತೆಯನ್ನು ಹೋಲುತ್ತಿದ್ದಳು.

ಮಂಡೋದರಿಯನ್ನು ಮಹಾಕಾವ್ಯದಲ್ಲಿ ಮೊದಲು ಕಾಣುವುದು ರಾವಣನ ಸವಿಪ್ರೇಮದ ಆವರಣದಲ್ಲಿ. ರಾವಣನು ಮಂಡೋದರಿಗೆ ಪವಿತ್ರ ಸ್ಥಾನವನ್ನು ಕೊಟ್ಟಿರುತ್ತಾನೆ. ಮಹತ್ತರವಾದ ಕಾರ್ಯವಿರುವುದರಿಂದ ನಿಶ್ಚಿತವಾಗಿದ್ದ ಔತಣಕೂಟವನ್ನು ವಿಹಾರಯಾತ್ರೆಯನ್ನು ಮುಂದೂಡಬೇಕೆಂದು ಕೋರುವ ರಾವಣನು ಸತಿಯನ್ನು ಎಷ್ಟು ಗೌರವಿಸುತ್ತಿದ್ದ; ಆಕೆಯ ಭಾವನೆಗೆ ಎಷ್ಟು ಮನ್ನಣೆ ನೀಡುತ್ತಿದ್ದನೆಂದು ಅರಿವಾಗುತ್ತದೆ. ಮಂಡೋದರಿಯು ಲಂಕಾಧೀಶ್ವರನು ಕೋರಿಕೊಂಡನೆಂದು ತತಕ್ಷಣವೇ ಒಪ್ಪದೇ ಪತಿಯ ಮೇಲಿನ ವಾತ್ಸಲ್ಯ ಮಮತೆಯ ಪರಿಧಿಯಲ್ಲಿ ಕಾರಣವನ್ನು ಕೇಳುತ್ತಾಳೆ. ಮಂಡೋದರಿ ಚತುರೆ ರಾವಣನ ಕಾರ್ಯಗಳಾವುದೆಂದು ತಿಳಿಯಲು ಪ್ರಯತ್ನಸುತ್ತಾಳೆ. ತಮ್ಮ ರಾಜಕಾರಣವು ನಮ್ಮ ಔತಣಕ್ಕಿಂತಲೂ ಮಿಗಿಲಾದುದೇ? ಎಂದು ಪ್ರಶ್ನಿಸುವಲ್ಲಿ ಮಂಡೋದರಿ ದಿಟ್ಟತನ, ಹಾಗೂ ರಾವಣನೊಂದಿಗಿರುವ ಅನ್ಯೋನ್ಯ ಸಂಬಂಧದ ಅರಿವಾಗುತ್ತದೆ. ರಾಮ ಲಕ್ಷ್ಮಣರಿಂದ ಚಂದ್ರನಖಿಗಾಗಿರುವ ಅವಮಾನ ಹಾಗೂ ಖರ, ದೂಷಣ, ತ್ರಿಶರರೆಂಬ ಸಹೋದರರ ವಧೆಯನ್ನು ತಿಳಿಸುವ ರಾವಣೇಂದ್ರ ಹಿಂದೆ ಸೀತೆಯ ಸ್ವಯಂವರ ಕಾಲದಲ್ಲಿ ತನಗಾದ ಅಪಮಾನ, ಆಕೆಗಾಗಿ ತಪಗೈದು ಶಕ್ತಿ ಸಂಪಾದಿಸಿ ಹೋಗುವಷ್ಟರಲ್ಲಿ ರಾಮನ ಪಾಲಾದದ್ದನ್ನು ನೆನೆದು ಅದೆಲ್ಲದರಿಂದ ಉಂಟಾದ ದ್ವೇಷದ ಫಲವಾಗಿ ಸೀತೆಯನ್ನು ತರಲು ಹೊರಟಿರುವುದಾಗಿ ತಿಳಿಸುತ್ತಾನೆ.

----------

೫೬. ಕೊ.ಚನ್ನಬಸಪ್ಪ, ಗಂಗೋತ್ರಿ, ಪು.೪೨೦

ನಿನಗೆ ದಾಸಿಯಂ
ಮತ್ತೊರ್ವಳಂ ತರ್ಪೆನಾ ಜನಕಜಾತೆಯಂ
ನೆಲದರಿಕೆವೆಸರ ಆ ಸೀತೆಯಂ!

[ಶ್ರೀರಾಮಾಯಣದರ್ಶನಂ, ಪು-೨೧೭]

ರಾವಣನು ಸುಂದರವಾದನೇಕ ಹೆಣ್ಣುಗಳನ್ನು ತಂದು ತನ್ನರಮನೆಯಲ್ಲಿ ಇಟ್ಟುಕೊಂಡಿದ್ದರೂ ಮಂಡೋದರಿಯ ಸ್ಥಾನಕ್ಕೆ ಚ್ಯುತಿಯಿರಲಿಲ್ಲ; ಮಂಡೋದರಿ ರಾವಣನ ಹೃದಯ ಸಾಮ್ರಾಜ್ಞಿ. ಇನ್ನುಳಿದ ಹೆಣ್ಣುಗಳು ರಾವಣನೇ ಹೇಳಿರುವಂತೆ ಅವಳ ದಾಸಿಯರಿಗೆ ಸಮಾನ.ಸೀತೆಯನ್ನು ಕೂಡ ಮಂಡೋದರಿಯ ದಾಸಿಯನ್ನಾಗಿ ಮಾಡುತ್ತೇನೆ ಎನ್ನುತ್ತಾನೆಯೇ ವಿನಃ ಪಟ್ಟ ಮಹಿಷಿಯ ಸ್ಥಾನ ಕೊಡುತ್ತೇನೆ ಎನ್ನುವುದಿಲ್ಲ. ಸೀತೆಯನ್ನು ಕದ್ದೊಯ್ಯುವುದು ದ್ವೇಷದಿಂದಲೇ ಹೊರತು ಮೋಹದಿಂದಲ್ಲ.

"ರಾವಣನು ಮಹಾಕಾಮಿಯಿರಬಹುದು ಸಾವಿರಾರು ಹೆಂಗಳೆಯರನ್ನು ಅಂತಃಪುರದಲ್ಲಿ ತುಂಬಿಕೊಂಡಿರುವ ಸ್ತ್ರೀಲೋಲನಿರಬಹುದು. ಆದರೆ ಅವರೆಲ್ಲ ಅವನ ಪಾಲಿಗೆ ಸೀತೆಯನ್ನು ಸೇರಿಸಿ, ಮಂಡೋದರಿಗೆ ದಾಸಿಯರು ಮಾತ್ರ. ಅವನ ಮೊದಲ ಒಲವು ಮನ್ನಣೆ ಸ್ಥಾನ ಮಂಡೋದರಿಗೆ ಮಾತ್ರ. ಸೀತೆಯನ್ನು ತಂದರೂ, ವಾಲ್ಮೀಕಿ ಕೃತಿಯಲ್ಲಿನಂತೆ, ಆಕೆಗೆ ಪಟ್ಟಮಹಿಷಿಯಾಗಂದು ಎಂದೂ ರಾವಣನ ನಾಲಿಗೆಯಲ್ಲಿ ಬರದು. ಇಲ್ಲಿ ಮಂಡೋದರಿಗೆ ರಾವಣನಿತ್ತಿದ್ದ ಸ್ಥಾನಮಾನಗಳ ಹಿರಿಮೆ ಸ್ಪಷ್ಟವಾಗಿದೆ".[೫೭]

ರಾವಣನಿಗೆ ಮನಕ್ಷೋಭೆ ಉಂಟಾದಾಗ ಅದರ ಶಮನಕ್ಕೆ ಆತನು ಶಮನಕ್ಕೆ ಆತನು ಶರಣಾಗುವುದು ಮಂಡೋದರಿಗೆ. ಬೇಸರವಾದಾಗ ಆತ ಬಯಸುವುದು ಮಂಡೋದರಿಯ ಸಾಮಿಪ್ಯವನ್ನು ಮಂಡೋದರಿಗೆ ಕಣ್ಣಲ್ಲಿ ನೀರು ಬಂದರೆ ರಾವಣನಿಗೂ ಬರುತ್ತದೆ. ತನ್ನ ಪ್ರಿಯ ಸತಿಯನ್ನು ಪ್ರೀತಿಸುವ ರಾವಣ ಆಕೆಯ ಬಯಕೆಗಳ ಈಡೇರಿಕೆಗೆ ಕಾತರನಾಗುತ್ತಾನೆ. ಸೀತೆಯ ವಿಷಯ ಒಂದರಲ್ಲಿ ಮಾತ್ರ ಮಂಡೋದರಿಯನ್ನು ಹೊರಗಿಡಲು ಪ್ರಯತ್ನಿಸುತ್ತಾನೆ. ಮಂಡೋದರಿಯ ಮಾತಿಗೆ ಗಮನಕೊಡದೆ ಮುಂದುವರಿಯುತ್ತಾನೆ. ರಾವಣನು ಮಂಡೋದರಿಯ ನೋವನ್ನು ಸಹಿಸಲಾಗದೆ ಆಕೆ ಇಚ್ಛಿಸಿದ್ದನ್ನು ಕೊಡಲು ಸಿದ್ಧನಾಗಿ ಕೇಳಿದಾಗ ಮಂಡೋದರಿಯು ಬಯಸುವುದು ರಾವಣನ ಹೃದಯ ಸ್ಥಾನವನ್ನು ಮಾತ್ರ.

"ಸತಿಗರಿಕೆಯೇಂ,
ಜೀವೇಶ? ಪತಿಹೃದಯವಂ ಪಡೆವುದಲ್ಲದೆಯೆ
ಬೇರಾವುದರಕೆ?

[ಶ್ರೀರಾಮಾಯಣದರ್ಶನಂ, ಪು-೩೩೧]

ರಾವಣನು ಮಂಡೋದರಿಯ ಹರಕೆಗೆ ಅಚ್ಚರಿಗೊಂಡು 'ನಿನ್ನವನೇ ನಾನೀಗಲೂ' ಎಂದು ಉತ್ತರಿಸುತ್ತಾನೆ. 'ಆ ಪುಣ್ಯ ನನಗೆಂದಿಗೋ' ಎಂದು ನಿಟ್ಟುಸಿರು ಬಿಡುವ ಮಂಡೋದರಿಯ ಮನದಲ್ಲಿ ರಾವಣನ ಪರಸ್ತ್ರೀ ವ್ಯಾಮೋಹದ ಬಗ್ಗೆ ಹೆಪ್ಪುಗಟ್ಟಿರುವ ನಿರಾಶೆ ಇದೆ ಎಂದೂ ತಿಳಿಯುತ್ತದೆ. ಸೀತೆಯ ಅಪಹರಣವನ್ನು ಸಹಿಸದ ಮಂಡೋದರಿ ಆಡುವ ಮಾತುಗಳು ಮುಂದಿನ ಭವಿಷ್ಯತ್ತಿನಸೂಚನೆಗಳಾಗಿ ಬರುತ್ತವೆ.

----------

೫೭. ಕೊ.ಚನ್ನಬಸಪ್ಪ, ಗಂಗೋತ್ರಿ, ಪು.೩೩೭

"ಉಸಿರಿನಲ್ಲಿ ಬೆಸೆದು ಒಲಿದೆದೆಗಳಂ
ಕಿಳ್ತೆಳೆದು ತಂದು ಯುಕ್ತಿಯನಿಂತು ಗಳಪುವರೆ
ನಿಶಿತಮತಿ? ಹದಿಬದೆಯ ಹೃದಯದುರಿ ಲಂಕೆಯಂ
ದಹಿಸದೇ? ಕುಲಕ್ಷಯಕೆ ಕೂಣಿಯೊಡಿದೆ ಮಿಳ್ತು!..."

[ಶ್ರೀರಾಮಾಯಣದರ್ಶನಂ, ಪು-೩೩೨]

ರಾವಣನ ಕ್ಷೇಮ ಚಿಂತನೆಯಲ್ಲಿ ಸದಾ ಕಾದೂಡುವ ಸತಿ ಮಂಡೋದರಿಯು ಹದಿಬದೆಯಿಂದ ಲಂಕೆಯ ನಾಶವಾಗುವುದನ್ನು ತಡೆಯಲು ರಾವಣನ ಮನಸ್ಸನ್ನು ಚುಚ್ಚಿ ಮಾತನಾಡುತ್ತಾಳೆ. ಆತನ ತಪ್ಪುಗಳನ್ನು ತದ್ದಲು ಪ್ರಯತ್ನಸುತ್ತಾಳೆ. ಪಾತಿವ್ರತ್ಯದಬಗ್ಗೆ ಹೀಯಾಳಿಸಿ ಮಾತನಾಡುವ ಪತಿಗೆ ಪಾತಿವ್ರತ್ಯದ ಹಿರಿಮೆಯನ್ನು ಅರ್ಥೈಸಲು ಪ್ರಯತ್ನಿಸುತ್ತಾಳೆ.

"ಪ್ರಾಣೇಶ, ದೈತ್ಯೇಂದ್ರ,
ಮತ್ತೊರ್ವನಿದಿದ್ದರೀತೆರನ ರಾವಣಂ
ತೋರುತ್ತಿದ್ದಳ್ ನಿನಗೆ ಹದಿಬದೆಯರಿರ್ಪುದಂ,
ಹದಿಬದೆತನದ ಹಿರಿಮೆಯಂ, ನಿನ್ನ ಈ ಮಯನ
ಮಗಳಬಲೆ!"

[ಶ್ರೀರಾಮಾಯಣದರ್ಶನಂ, ಪು-೩೩೨]

ಮಂಡೋದರಿಯ ಈ ರೀತಿಯ ಕೆಚ್ಚಿನ ಆತ್ಮಸ್ಥೈರ್ಯ ಸ್ವಾಭಿಮಾನದ ನುಡಿಗಳು ಆಕೆಯ ವ್ಯಕ್ತಿತ್ವದ ಎತ್ತರವನ್ನು ಸಹೃದಯರಿಗೆ ತೋರಿಸುತ್ತಾರೆ ಹಾಗೂ ರಾವಣೇಂದ್ರನ ಎದೆಯನ್ನು ದಿಗಿಲುಗೊಳ್ಳುವಂತೆ ಮಾಡುತ್ತದೆ. ರಾವಣನು ಮಂಡೋದರಿಯೊಂದಿಗೆ ಎಷ್ಟು ಅವಿನಾಭಾವ ಸಂಬಂಧ ಹೊಂದಿದ್ದನೆಂಬುದಕ್ಕೆ ಸಾಕ್ಷಿಯಾಗಿ ಬರುವಂತದ್ದು; ರಾವಣನ ಮೇಲಿನ ಮಂಡೋದರಿಯ ವ್ಯಾಪಕವಾದ ಪ್ರಭಾವವನ್ನು ಬಿಂಬಿಸುವಂತದ್ದು; ರಾವಣನು ಮಂಡೋದರಿಯ ಪ್ರೇಮಕ್ಕೆ ಹಂಬಲಿಸಿ ನುಡಿವ ಮಾತುಗಳು:

"ದೇವಿ
ಕರುಣಿಸುಪಸಂಹರಿಸು ದಿಟ್ಟಿಸಿಡಿಲಂ, ರಾವಣನಿಗೆ
ಜಗಪಾಲ ದಿಗು ಪಾಲರಾಟೋಪದಾಗ್ರಹಂ
ಸೀರ್ಪುಲ್ಗೆ ಸಾಟಿ; ದಿಟಮಾದೊಡಂ, ನಿನ್ನೊಲ್ಮೆ
ಹುಬ್ಬುಗಂಟಿಕ್ಕೆ ಧೈರ್ಯಚ್ಯುತಂ, ದೆಸೆಗೇಡಿ, ತಾನ್
ಪರದೇಶಿ, ಮೇಣ್ ಶೂನ್ಯಚಿತ್ತನ್! ನೀನೆನಗೆಶಾಂತಿ,
ಸತ್ವಮಾತ್ಮಂ: ನೀನೆನಗೆ ತುತ್ತತುದಿಯಾಸೆ,
ನೆಲೆ ನೆಚ್ಚು , ಸೈಪು! ದೇವನೆ ಪೇಸಿ ಬಿಟ್ಟೊಡಂ
ಕೆಚ್ಚೆನೆಲ್ಲೆನ್; ಪ್ರೇಮಮಯಿ ನೀಂ ತೊರೆಯೆ ಅಯ್ಯೋ
ಶೂನ್ಯನೆಂ ಬಲ್ಲೆಯೀಯೆನ್ನ ದೌರ್ಬಲ್ಯಮಂ"

ಮಂಡೋದರಿ ಕೋಪಗೊಂಡರೆ ರಾವಣನು ಸಹಿಸಲಾರನು; ದಿಕ್ಕು ದಿಕ್ಕುಗಳನ್ನು , ದೇವತೆಗಳನ್ನು ಹುಲ್ಲುಕಡ್ಡಿಯಂತೆ ಕಾಣುವ ಲಂಕೇಶ್ವರನು ಮುದ್ದಿನ ಮಡದಿಯ ಮುಂದೆ ಮಾತ್ರವೇ ಧೀನನಂತೆ ವರ್ತಿಸುತ್ತಾನೆ ಮಂಡೋದರಿಯು ಆತನನ್ನು ತೊರೆದರೆ ಅವನಿಗೆ ಶೂನ್ಯವಷ್ಟೆ ಉಳಿಯುತ್ತದೆಂದು ಮಂಡೋದರಿಗೆ ನಿವೇದಿಸತ್ತಾನೆ. ಪ್ರೇಮಮಯಿ ಮಂಡೋದರಿಯ

ಮುಂದೆ ತನ್ನಂತರಂಗವನ್ನು ಬಿಚ್ಚಿಡುತ್ತಾನೆ ಮಂಡೋದರಿಗೆ ರಾವಣನ ಪ್ರೀತಿ , ವಾತ್ಸಲ್ಯ ತುಂಬಿರುವ ಮನಸ್ಸು ಹಾಗು ದೌರ್ಭಲ್ಯಗಳ ಬಗ್ಗೆ ಚೆನ್ನಾಗಿಯೇ ತಿಳಿದಿರುತ್ತದೆ. ಮಂಡೋದರಿಯ ದಿವ್ಯ ವ್ಯಕ್ತಿತ್ವವು ರಾವಣನನ್ನು ಹಲುಗಿಸುವ ಶಕ್ತಿ ಹೊಂದಿರುತ್ತದೆ.

ಸೀತೆಯನ್ನು ಕದ್ದು ತಂದಿರುವುದು ರಾವಣನಿಗೆ ಶ್ರೇಯಸ್ಕರವಲ್ಲ ಎಂದು ತಿಳಿದಿರುವ ಮಂಡೋದರಿಯು ರಾವಣನಿಗೆ ಬುದ್ದಿಮಾತುಗಳನ್ನು ಹೇಳುತ್ತಾಳೆ. ಹದಿಬದೆಯನ್ನು ಕದ್ದು ತಂದಿರುವುದರಿಂದ ಲಂಕೆಯು ಅಪಾಯಕ್ಕೆ ಸಿಲುಕುತ್ತದೆಂದು ಚಿಂತಿಸುತ್ತಾಳೆ. ಸೀತೆಯನ್ನು ನೋಡಬಯಸಿದರೂ ರಾವಣನು ಮಂಡೋದರಿಯನ್ನು ತಡೆಯುತ್ತಾನೆ. ಮಂಡೋದರಿಯಂತ ಪುಣ್ಯ ಪಾತಿವ್ರತೆಯಿಂದ ಸೀತೆಯ ದೃಢತೆಯು ಹೆಚ್ಚಬಾರದೆಂದು ಜಾನಕಿಯನ್ನು ತೋರಿಸುವುದಿಲ್ಲ; ರಾವಣ ಮಾತುಗಳಲ್ಲೇ ಅದು ವೇದ್ಯವಾಗುತ್ತದೆ.

" ನಿನ್ನ ದರ್ಶನದಿಂದ ಪಾಣ್ಬೆಗಕ್ಕುಂ ಮಹಾ
ಪತಿವ್ರತೆಯ ದೃಢತೆ; ಸೀತೆಯ ಮಾತದಂತಿರ್ಕೆ "
[ಶ್ರೀರಾಮಾಯಣದರ್ಶನಂ, ಪು-೩೩೩]

ಮಂಡೋದರಿಯ ಮೇಲೆ ಇಷ್ಟೊಂದು ಪ್ರೀತಿ ವಾತ್ಸಲ್ಯ ತುಂಬಿಕೊಂಡಿದ್ದರೂ ; ಆಕೆಯಲ್ಲಿ ಅಪಾರ ಗೌರವ ಹೊಂದಿದ್ದರೂ ಸ್ರೀ ದೌರ್ಬಲ್ಯದಿಂದ ರಾವಣ ಹೊರತಾಗುವುದಿಲ್ಲ. ಸೀತೆಯನ್ನು ನೋದಿಕೊಳ್ಳಲು ಚಂದ್ರನಖಿ ಇರುವಳೆಂದು ತಿಳಿದ ಮಂಡೋದರಿಯು ಸೊಸೆ ತಾರಾಕ್ಷಿಯನ್ನಾದರೂ ನೇಮಿಸಿ ಎನ್ನುವಲ್ಲಿಯೇ ತಿಳಿಯುತ್ತದೆ ಚಂದ್ರನಖಿಯ, ಬಗೆಗೆ ಆಕೆಗಿರುವ ಭಾವನೆ ತನ್ನ ಸೊಸೆ ಇಂದ್ರಜಿತುವಿನ ಪತ್ನಿ ಎಂಬುದನ್ನು ನೆನಪಿಸುವ ರಾವಣನಿಗೆ ; ಮಂಡೋದರಿ ಸೀತೆ ಯಾರೆಂಬ ನೆನಪು ಮಾಡಿಕೊಡುವ ಮಾತುಗಳು ರಾವಣನಲ್ಲಿ ಕ್ರೋದ ಉಕ್ಕಿಸುತ್ತದೆ.

" ಸೀತೆಯುಮವನಿಜಾತೆ; ರಾಮನದಯಿತೆ.!"

ರಾವಣನಿಗೆ ಈ ವಾಕ್ಯಗಳು ಮನಮುರಿಯಂತೆ ಮಾಡುತ್ತದೆ. ಆದರೆ ಮಂಡೋದರಿಯ ಉದ್ದೇಶ ರವಣನನ್ನು ಸೀತೆಯಿಂದ ವಿಮುಖನನ್ನಾಗಿ ಮಾಡಬೇಕೆಂಬುದು. ಆದರೆ ರಾವಣನು ಅಷ್ಟು ಬೇಗ ಸೋಲಲಾರ, ' ನಿನ್ನಿಂದೆ ಕದ್ದೊಯ್ದುಳಂ ಮರಳಿ ತಂದೆನಾಂ ಗೆಲ್ದು'[೫೮] ಹೆಣ್ಣಿಗೆ ದೇಹವಲ್ಲ; ಹೃದಯ ಅಗತ್ಯ, ನನಗೆ ಸೀತೆ ಎಂದಾದರೂ ಸೋತೇ ಸೋಲುತ್ತಾಳೆಂಬ ನಂಬಿಕೆಯನ್ನು ವ್ಯಕ್ತಪಡಿಸುತ್ತಾನೆ. ಆದರೆ ಮಂಡೋದರಿ ಪತಿವ್ರತೆ; ಮತ್ತೊಬ್ಬ ಪತಿವ್ರತೆಯ ಮನಸ್ಸನ್ನು ಚೆನ್ನಾಗಿ ಅರಿಯಬಲ್ಲಳು ಎಂಬುದು ಆಕೆಯಾಡುವ ಮಾತುಗಳಲ್ಲಿ ನೋಡಬಹುದು:

"ಶಿವ ಕೃಪೆಯಿಂದೇ, ಕೇಳ್
ಪುಸಿಗೈವಳಾ ಭ್ರಾಂತಿಯಂ ಸೀತೆ! "
[ಶ್ರೀರಾಮಾಯಣದರ್ಶನಂ, ಪು-೩೩೪]

-----------

೫೮. ಕುವೆಂಪು, ಶ್ರೀರಾಮಾಯಣದರ್ಶನಂ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು ೨, ಎರಡನೇ ಆವೃತ್ತಿ೨೦೦೪, ಪು.೩೩೩

ರಾವಣನಿಗೆ ಪಾತಿವ್ರತ್ಯದ ತಾಪವನ್ನು ತಿಳಿಸಲಾಗದ ಮಂಡೋದರಿ ಶಿವನ ಕೃಪೆಯಿಂದ ಸೀತೆ ನಿನ್ನೆಲ್ಲಾ ಭ್ರಾಂತಿಗಳನ್ನುಮುರಿಯುತ್ತಾಳೆಂದು ಭವಿಷ್ಯವನ್ನು ನಿವೇದಿಸುತ್ತಾಳೆ. ಮಂಡೋದರಿಯ ಸಾತ್ವಿಕ ಶಕ್ತಿಯ ಮುಂದೆ ರಾವಣನು ಸೋಲುತ್ತಾನೆಂಬುದಕ್ಕೆ ಸಾಕ್ಷಿ; ಆತನ ಕಾಮಶಕ್ತಿಯನ್ನು ಮಂಡೋದರಿಯ ಆತ್ಮಶಕ್ತಿ ಪರಿವರ್ತಿಸುತ್ತದೆಂಬುದಕ್ಕೆ ಸಾಕ್ಷಿ; ರಾವಣನ ನಿರ್ಮಲ ಹೃದಯದ ಮಾತುಗಳು :

"ನೀಂ ಮಹಿಮಳಾನಲ್ಪನೆಂ ದೇವಿ, ನಿನ್ನೊಳ್ಪು
ಶಿಕ್ಷಿಸಲಿ ಧನ್ಯನಾಂ!"

ಈ ಮಾತುಗಳಿಂದಲೇ ಮಂಡೋದರಿಯ ಮನದಲ್ಲಿ ಶಾಂತಿ ಮೈದೋರುತ್ತದೆ. ಬಹುಶಃ ಮಂಡೋದರಿಯ ಮನಸ್ಸಿಗೆ ರಾವಣನ ಆತೋದ್ಧಾರದ ಕುರುಹುಗಳು ಗೋಚರವಾಗಿರಬಹುದು. ಸೀತೆಯ ದರ್ಶನವನ್ನು ಪಡೆಯಬೇಕೆಂದು ಅಭಿಲಾಷೆ ಹೊತ್ತ ಮಂಡೋದರಿಗೆ ಪತಿಯ ಆಜ್ಞೆ ಮೀರಲಾಗದು! ಆದ್ದರಿಂದಲೇ ಮಂಡೋದರಿಯು ಸತತವಾಗಿ ಏಳುದಿನವೂ ಸೀತೆಯನ್ನು ದೂರದಿಂದ ಕಂಡು ಕೈ ಮುಗಿದು ಹಿಂತಿರುಗುತ್ತಿರುತ್ತಾಳೆ. ಮಂಡೋದರಿಯು ಸೀತೆಗೆ ಮೊದಲಬಾರಿಗೆ ಗೋಚರವಾಗುವ ರೀತಿ ಅಚ್ಚರಿಉಂಟು ಮಾಡುತ್ತದೆ.

ಆ ಅಮೃತ
ರಾತ್ರಿಯೆ ಲಲನೆಯಾಕೃತಿಯಾಂತು ಬಂದವೋಲ್,
ಪಾಲ್ ಬೆಳ್ಪನೆಯ ಸೀರೆ ಸಿಂಗರಿಸಿದೊಂದಾಳ್ತನಂ
ನಡೆಗುಣ್ಪಿನಿಂ ಬಗೆಗೆ ಭಯ ಭಕ್ತಿಯಯೊಡರ್ಚಿ
ಬಂದಳೊರ್ವಳ್, ಭೂಮಿ ದೇವಿಯೆ ಕುಮಾರ್ತೆಯಂ
ಸಂತೈಸಲೈತರ್ಪವೊಲ್!

[ಶ್ರೀರಾಮಾಯಣದರ್ಶನಂ, ಪು-೩೩೯]

ಬೆಳದಿಂಗಳಿನಂತೆ ಕಂಗೊಳಿಸುವ ಮಂಡೋದರಿಯ ಆಕೃತಿ ಸೀತೆಯ ಮನಕ್ಕೆ ತಂಪು ತರುತ್ತದೆ. ಭೂಜಾತೆಗೆ ತನ್ನನ್ನು ಸಮಾಧಾನಿಸಲು ಬಂದ ಅಮೃತ ರಾತ್ರಿ ಹೆಣ್ಣಿನ ರೂಪ ಪಡೆದಿದೆ ಎಂಬಂತೆ ತೋರುತ್ತದೆ. ಸತತವಾಗಿ ಏಳುದಿನ ಈ ಅನುಭವ ಪಡೆದ ಸೀತೆ ಎಂಟನೆಯ ದಿನಕ್ಕೆ ತಾನೇ ಆ ಆಕೃತಿಯನ್ನು ಮಾತನಾಡಿಸುತ್ತಾಳೆ.

ಆರಮ್ಮ
ತಂಗೆ, ನೀನ್? ನೋಡುತಿಹೆನೇಳಿರುಳ್ಗಳಿಂ; ಬಂದು
ಗೋಳಾಡುತಾವುದನೊ ಸಂಕಟವನೊರೆಯುತಿಹೆ;
ಆರನೋ ಕರೆಯುತಿಹೆ; ಆರನೋ ಬೇಡುತಿಹೆ;
ಕೈಮುಗಿದದಾರ್ಗೊ ರಕ್ಷೆಯ ಪಡೆಯಲೋಸುಗಂ
ನೋಂತವೋಲಿದೆ ನೋಂಪಿಯಂ

[ಶ್ರೀರಾಮಾಯಣದರ್ಶನಂ, ಪು-೩೩೯]

ಮಂಡೋದರಿಯ ಈ ಸ್ಥಿತಿ ಅರಿಯದ ಸೀತೆ ತನ್ನಂತಯೇ ದಾನವ ಎಳೆದು ತಂದಿರುವ ಹೆಣ್ಣಿರಬೇಕೆಂದು ಭಾವಿಸಿ ನಮ್ಮಂಥ ದುಃಖಿಗಳು ಈ ಲಂಕೆಯೊಳಗೆ ಇನ್ನೆಷ್ಟು ಮಂದಿ

ಇರುವರೋ ಎಂದು ಸಂಕಟಪಡುತ್ತಾಳೆ. ಸೀತೆಯೇ ಮಾತನಾಡಿಸಿದಾಗ ಮಂಡೋದರಿಯು ತನ್ನಂತರಂಗವನ್ನು ಬಿಚ್ಚಿಡುತ್ತಾಳೆ:

"ನಾನಕ್ಕನೆನ್
ನಿನಗೆ ತಂಗೆ, ವಯಸ್ಸಿನಿಂದಂತೆದುಕ್ಕದಿಂ!
ನಿನ್ನ ವೋಲತಿ ದುಃಖಿ, ಲಂಕೆಯೊಳಗಂತಿರ್ಕೆ,
ಸೃಷ್ಟಿಯೊಳಗಿಲ್ಲಮೆಂದರಿ............."

[ಶ್ರೀರಾಮಾಯಣದರ್ಶನಂ, ಪು-೩೪೦]

ಮಂಡೋದರಿಯು ಲಂಕಾ ಸಾಮ್ರಾಜ್ಞಿಯಾದರೂ ದಃಖದಲ್ಲಿ ಸೀತೆಗೆ ಅಕ್ಕನೆಂದೂ ಸೃಷ್ಟಿಯಲ್ಲಿಯೇ ತನ್ನಂಥ ದುಃಖಿ ಇಲ್ಲವೆಂದು ಹೇಳುತ್ತಾಳೆ. ಈ ಮಾತುಗಳನ್ನು ಕೇಳಿದ ಸಹೃದಯರಿಗೆ ಮೊದಲು ಮಹಾರಾಣಿ ಮಹಾದಃಖಿಯೇ? ಎನಿಸಬಹುದು. ಒಂದು ಹೆಣ್ಣೆಂದು ಭಾವಿಸಿ ನೋಡಿದರೆ ಸಹಜವೆನಿಸುತ್ತದೆ. ತಾನೊಲಿದು ಬಂದ ಪತಿ ಲಂಕೇಶ್ವರನಾದರೂ ಆತನ ಮನೋದೌರ್ಬಲ್ಯ ಆಕೆಯನ್ನು ಸುಡುತ್ತದೆ ತನ್ನ ಕಣ್ಣಮುಂದೆಯೇ ಲೋಕದ ಸುಂದರ ಸ್ತ್ರೀಯರನ್ನು ಹೊತ್ತುತರುವ ಅವರೊಡನೆ ಸುಖಿಸಬಯಸುವ ಪತಿ! ಲಂಕಾ ಸಾಮ್ರಾಜ್ಞಿಯಾದರೂ ಮಂಡೋದರಿ ಸೃಷ್ಟಿಯೊಳಗಿನ ಮಹಾ ದುಃಖಿನಿ ಎಂಬುದು ನಿಜ. ಕಣ್ಮುಂದೆ ನಿಂತಿರುವ ಆಕೃತಿ ಮಂಡೋದರಿ ಎಂದು ತಿಳಿದಾಗ ಸೀತೆ ಆಕೆಗೆ ನಮಸ್ಕರಿಸುತ್ತಾಳೆ. ಅಸುರಿಗೆ ನಮಸ್ಕರಿಸಬಾರದೆಂದು ಸೀತೆಗೆ ನಾನೆ ನಿನ್ನ ದುಃಖ ಕಾರಣನಾದ ರಾವಣನ ಪತ್ನಿ; ನಾನು ನಿರ್ಭಾಗ್ಯೆ ಎಂದು ಪರಿತಪಿಸುತ್ತಾಳೆ. ಆದರೆ ಸೀತೆ ಮಂಡೋದರಿಯನ್ನು ಗ್ರಹಿಸುವ ಬಗೆಯೇ ಬೇರೆ:

"ನೀನಸುರಿ?
ನೀನಸುರಿಯಲ್ತು ; ದೇವತೆ. ಪತಿವ್ರತೆಯಾಗಿ
ನಮಗೆಲ್ಲಮಾದರ್ಶಮಾತೆ. ನಿನಗಾಂ ನಮಿಸೆ
ಶೀಘ್ರದಿಂದೆನಗೆ ಮಂಗಳಮಪ್ಪುದೆಂದು ನಾಂ
ಬಲ್ಲೆನ್........"

[ಶ್ರೀರಾಮಾಯಣದರ್ಶನಂ, ಪು-೩೪೦]

ಸೀತೆಯ ದರ್ಶನಕ್ಕೆ ರಾವಣೇಂದ್ರನ ಮನೋಸಾಮ್ರಾಜ್ಞಿ ಇಷ್ಟು ದಿನ ಕಾದಿದ್ದು ಸಾರ್ಥಕವಾಗುತ್ತದೆ. ಮಂಡೋದರಿಯು ರಾವಣನ ಬಗೆಗಿಟ್ಟಿರುವ ಕಾಳಜಿಯು; ಸೀತೆಯ ಬಗೆಗಿಟ್ಟಿರುವ ಗೌರವವೂ ಇಲ್ಲಿ ಅನಾವರಣಗೊಳ್ಳುತ್ತದೆ;

" ಆ ಮಂಗಳಂ ನಿನಗೆ ಶೀಘ್ರದಿನಕ್ಕೆ!
ನಿನ್ನ ಮಂಗಳಂಮೆನಗೆ ಮಂಗಳಂ ! ನನ್ನಂತೆ
ದೇವಿ, ನೀನು ಪ್ರಾರ್ಥಿಸಾ, ನನ್ನ ಪತಿಯೆರ್ದೆಗೆ
ಶುದ್ಧಿ ದೊರೆಕೊಳ್ವಂತೆ ನಾನಾದನೆ ಬೇಡಲ್ಕೆ
ಬರುತಿರ್ದನೀಯೆಡೆಗೆ ನಿನ್ನ ಸಾನಧ್ಯಕ್ಕೆ......"

[ಶ್ರೀರಾಮಾಯಣದರ್ಶನಂ, ಪು-೩೪೧]

ರಾವಣನ ಆತ್ಮಶುದ್ಧಿಯನ್ನು ಬಯಸುವ ಮಹಾಪತಿವ್ರತೆ ಮಂಡೋದರಿ ಸೀತೆಯನ್ನು ತನ್ನ ಪತಿಗೆ ಹದಿಬದೆತನದ ವ್ರತದಿಂದ ಆತ್ಮಶುದ್ಧಿ ದೊರಕುವಂತೆ ಪ್ರಾರ್ಥಿಸಬೇಕೆಂದು ಬೇಡಿ ಮುಂದಿನ ಸರ್ವರ ಶಾಂತಿ ಸುಖಕ್ಕೆ ಆಶಿಸಿ ನುಡಿಯುತ್ತಾಳೆ;

" ಹದಿಬದೆತನಕೆ ಮೀರ್ವ
ಸಾಧನೆಯಿಲ್ಲ, ತಂಗಿ.....ಕೊಳೆಗೆ ತಗುಳಲ್ಕಗ್ನಿ
ಕೊಳೆಯುಮುರಿಯಪ್ಪುದಂತೆಯೆ ನಿನ್ನ ನೋಂಪಿಯಿಂ
ಕಿಡುಗೆನ್ನ ಪತಿಯ ಹೃದಯ ಪಾಪ ಕಿಲ್ಬಿಷಂ
ಸನ್ಮತಿಯುದಿಸಿ ಶಾಂತಿ ಸುಖಮಕ್ಕೆ ಸರ್ವರಿಗೆ! "

[ಶ್ರೀರಾಮಾಯಣದರ್ಶನಂ, ಪು-೩೪೧]

ಸೀತೆಯ ಕಡುನೋಂಪಿ ರಾವಣನ ಭ್ರಮೆಗಳನ್ನು ನಾಶಗೊಳಿಸುತ್ತದೆ ; ರಾವಣನ ಮನಸ್ಸನ್ನು ಪರಿವರ್ತಿಸಿ ಆತ್ಮಶುದ್ಧಿ ಮಾಡುತ್ತದೆಂದು ದೃಢವಾಗಿ ನಂಬಿದವಳು ಅದಕ್ಕಾಗಿ ದೇವತೆಗಳಲ್ಲಿ ಪ್ರಾರ್ಥಿಸುವವಳು ಮಂಡೋದರಿ. "ವಾಲ್ಮೀಕಿಯ ಮಂಡೋದರಿ ರಾವಣ ಸತ್ತಾಗ ಆಡುವ ಮಾತುಗಳನ್ನು ಬಿಟ್ಟರೆ ಮತ್ತೆಲ್ಲೂ ಸೀತೆಯ ಬಗ್ಗೆ ಅನುಕಂಪ ಸ್ನೇಹ ಪ್ರೀತಿ ಮೆಚ್ಚುಗೆಯ ಭಾವನೆಗಳನ್ನು ವ್ಯಕ್ತಪಡಿಸುವುದೇ ಇಲ್ಲ. ಬದಲಾಗಿ ಆಕೆಯ ಬಗ್ಗೆ ಮತ್ಸರ ದ್ವೇಷ ತಿರಸ್ಕಾರಗಳನ್ನೇ ಕಾರುತ್ತಾಳೆ, ಇದು ಸಾಮಾನ್ಯ ಸ್ತ್ರೀ ಸಹಜವಾಗಿದೆ. ಆದರೆ ಕುವೆಂಪು ಸೃಜಿಸಿರುವ ಮಂಡೋದರಿ ಸೀತೆಯನ್ನು ಪ್ರಥಮ ಬಾರಿಗೆ ಭೇಟಿಯಾಗುವ ಸಂದರ್ಭದಲ್ಲೇ ತನ್ನ ಮಹೋಜ್ವಲ ವ್ಯಕ್ತಿತ್ವದ ಅಮೃತ ಮುದ್ರೆಯನ್ನು ಸೀತೆಯಮೇಲೆ ಹಾಗೂ ಸಹೃದಯರ ಮೇಲೆ ಒತ್ತಿ ಆ ಪ್ರಸಂಗವನ್ನು ಕಾವ್ಯದ ಅವಿಸ್ಮರಣೀಯ ಭಾಗಗಳಲ್ಲಿ ಒಂದನ್ನಾಗಿ ಮಾಡಿಬಿಡುತ್ತಾಳೆ".[೫೯]

ರಾವಣನ ಆತ್ಮಶುದ್ಧಿಗಾಗಿ, ಉದ್ಧಾರಕ್ಕಾಗಿ ಬೇಡುವ ಮಂಡೋದರಿಯು ರಾವಣನಿಗೆ ಮನಃಪರಿವರ್ತನೆಯಾಗುವಂತೆ ಬುದ್ಧಿ ಮಾತುಗಳನ್ನು ಹೇಳಿ ವಾತ್ಸಲ್ಯದ ಮಹಾಪೂರವನ್ನೇ ಹರಿಸುತ್ತಾಳೆ. ಕೊನೆಯಬಾರಿಗೆ ಸೀತಾ ಮನೋದಾಢ್ಯ ಪರೀಕ್ಷಣಕ್ಕಾಗಿ ತಾನೊಬ್ಬನೇ ಅಶೋಕವನಕ್ಕೆ ಹೋಗುವೆನೆಂದು ಹೊರಟಾಗ ಆತನ್ನು ತಡೆದು ನಿಲ್ಲಿಸಿ ರಾವಣನೊಂದಿಗೆ ಸಂವಾದಿಸುತ್ತಾಳೆ. 'ಇಂದ್ರವಿಜಯಿಗೆ ನೂರುಮಡಿ ವೀರ ವಿಕ್ರಮಬಲ' ಎಂದು ರಾವಣನ ಮನಃಪರಿವರ್ತನೆಗೆ ಪ್ರಯತ್ನಿಸಿ ಯಶಸ್ವಿಯಾಗುತ್ತಾಳೆ. "ಪತಿವ್ರತೆಯ ಹೃದಯ, ಪತಿವ್ರತೆಯ ಶಕ್ತಿ ಪತಿವ್ರತೆಗಲ್ಲದೆ ಬೇರೆ ಯಾರಿಗೆ ತಿಳಿದೀತು? ರಾವಣನಂತರಂಗದ ಅಲೆ ಅಲೆಯನ್ನೂ ಅರಿತು ಅರ್ಥೈಸಿ ಹೆಜ್ಜೆ ಹೆಜ್ಜೆಗೆ ಅವನಿಗೆ ಸನ್ಮಾರ್ಗ ದರ್ಶನ ಮಾಡಿಸಲು ಅವಿರತ ಯತ್ನ ಮಾಡುತ್ತಾಳೆ ಮಂಡೋದರಿ; ಅನಲೆ ಬಿತ್ತರಿಸಿದ ಸೀತೆಯ ಅತಿಮಾನುಷ ಶಕ್ತಿಯನ್ನು ಆತನಿಗೆ ನಿವೇದಿಸುತ್ತಾಳೆ. ಈಗಾಗಲೇ ಒಂದು ಕಡೆ ಸೀತೆ, ಮತ್ತೊಂದು ಕಡೆ ಸತಿ – ಇವರ ನಿರ್ಮಲಾಂತರಂಗದ ನಿರಂತರ ಪ್ರಾರ್ಥನೆ ಒತ್ತಡ ಪ್ರಭಾವಗಳ ಕಾರಣದಿಂದಾಗಿ ಪಕ್ವಮನನಾಗಿದ್ದ ರಾವಣ ಇನ್ನು ತನಗೆ ರಣಮೋಹವೇ ಹೊರತು ಸೀತಾಮೋಹ ಅಳಿದು ಹೋಯಿತು ಎಂದು ಸತಿಗೆ ಆಶ್ವಾಸನೆ ನೀಡುತ್ತಾನೆ".

ಲಕ್ಷ್ಮಣನಿಂದ ಇಂದ್ರಜಿತುವಿನ ಮರಣವಾಯಿತೆಂಬ ವಾರ್ತೆ ತಿಳಿದ ಮಂಡೋದರಿಯು ತೀವ್ರ ಯಾತನೆಯನ್ನು ಅನುಭವಿಸುತ್ತಾಳೆ. ರಾವಣ ಮಗನನ್ನು ಕಳೆದುಕೊಂಡ ದುಃಖ ಹಾಗೂ ಮಂಡೋದರಿಯ ಯಾತನೆಯನ್ನು ನೋಡಲಾಗದೆ ಸೀತೆಯನ್ನು ಕೊಲ್ಲುತ್ತೇನೆಂದು ಮುಂಬರಿಯುತ್ತಾನೆ. ಇದನ್ನು ತಡೆದವಳು ಮಂಡೋದರಿ! ತನ್ನ ಸುತನ ಮರಣಕ್ಕೆ ಕಾರಣಳಾದ ಸೀತೆಯ ಮೇಲೆ ಕೋಪವಾಗಲಿ ದ್ವೇಷವಾಗಲೀ ಮಂಡೋದರಿಗೆ ಉಂಟಾಗಿಲ್ಲ. ಮೊದಲಿನ ಮಮತೆಯಿಂದಲೇ ಅವಳ ರಕ್ಷಣೆಗೆ ಮಂಡೋದರಿಯು ಮುಂದಾಗುತ್ತಾಳೆ. ಆದ್ದರಿಂದಲೇ ಈಕೆ ಮಹಾಮಹಿಮಳಾಗಿ ಪ್ರೇಮಮಯಿಯಾಗಿ ಗೋಚರಿಸುತ್ತಾಳೆ.

-----------

೫೯. ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೩೪೦

ಸೋದರರನ್ನು, ಸುತರನ್ನು, ಬಾಂಧವರನ್ನು ಕಳೆದುಕೊಂಡು ಲಂಕೇಶ್ವರನು ಒಂಟಿಯಾದಾಗ ದುರ್ಗೆಯನ್ನು ಆರಾಧಿಸಿ ಒಲಿಸಿಕೊಳ್ಳುತ್ತಾನೆ. ಈ ಸಮಯದಲ್ಲಿ ಆತನಿಗಾದ ಸ್ವಪ್ನದರ್ಶನದಿಂದ ಪೂರ್ಣ ಮನಃ ಪರಿವರ್ತನೆಯಾಗುತ್ತದೆ. ಮಹಾ ಪತಿವ್ರತೆಯಾದ ತನ್ನ ಪ್ರಿಯಸತಿಯಿಂದಲೇ ತನ್ನ ಆತ್ಮೋದ್ಧಾರವಾಯಿತೆಂದು ಅರಿತು ಮಂಡೋದರಿಗೆ ಕೃತಜ್ಞತೆಯನ್ನು ಸಮರ್ಪಿಸುವ ನುಡಿಗಳಿವು:

"ಸಮ್ಮತವೊ ನಿನಗೆ? ಪೇಳ್ ದೇವಿ!
ಪಾಪಿಯಂ ಕೈ ಬಿಡದೆ ಪುಣ್ಯಕೊಯ್ಯುವ ದೇವಿ
ನನಗೆ ನೀನೊರ್ವಳೆಯೆದಲ್!...."

[ಶ್ರೀರಾಮಾಯಣದರ್ಶನಂ, ಪು-೭೭೫]

ಈ ಪ್ರಶಂಸೆಯ ನುಡಿಯ ಜೊತೆಗೆ ಸೀತೆಯ ಬಗೆಗೆ ತನಗೆ ಮಾತೃವಾತ್ಸಲ್ಯವಿದೆ ಎಂದು ತನ್ನ ಸ್ವಪ್ನದರ್ಶನವನ್ನು ನೆನೆದು ನುಡಿಯುವನು. ಲೋಕವೇ ಅವನನ್ನು ಮೆಚ್ಚುವಂತೆ ಮಾಡುವ ಈ ನುಡಿಗಳು ರಾವಣನ ಹೃದಯದಾಳದಿಂದ ಹೊರಬರುತ್ತವೆ:

"ನಿನಗಿಂ ಮಿಗಿಲ್ ಸೀತೆ
ನನಗೆ ದೇವತೆ, ಮಾತೆ! ಶ್ರದ್ಧೆಗೆಟ್ಟಿರ್ದೆನಗೆ
ಶ್ರದ್ಧೆಯಂ ಮರುಕೊಳಿಸುತಾತ್ಮದುದ್ಧಾರಮಂ
ತಂದ ದೇವತೆ, ಪುಣ್ಯವಂತೆ!"

[ಶ್ರೀರಾಮಾಯಣದರ್ಶನಂ, ಪು-೭೭೬]

ಇಷ್ಟು ದಿನ ಈ ಪುಣ್ಯಕ್ಕಾಗಿಯೇ ಕಾತರಿದ್ದ ಮಂಡೋದರಿಗೆ ರಾವಣನ ಮನಃಪರಿವರ್ತನೆಯಿಂದ ಅಮೃತತ್ವ ಪಡೆದಷ್ಟು ಸಂತಸವಾಗುತ್ತದೆ. ರಾಮನು ಅಪ್ರಾಕೃತನಾಗಿರುವುದರಿಂದ ಮುಕ್ತಿಯಲ್ಲದೇ ಬೇರೆ ಜಯವಿಲ್ಲವೆಂದು ಹೇಳುತ್ತಾಳೆ. ಪತಿಯು ರಾಮನು ಬಿಟ್ಟ ಬ್ರಹ್ಮಾಸ್ತ್ರವನ್ನು ವಕ್ಷದಲ್ಲಿ ಹೊತ್ತು ಬಂದಾಗ ಪತಿಯಾಣತಿಯಂತೆ ಅದನ್ನು ಕಿತ್ತು ರಾವಣನಾತ್ಮ ರಾಮ ಹೃದಯದಲ್ಲಿ ಸೇರುವಂತೆ ಮಾಡುವ ಪತಿವ್ರತೆ ಪತಿಯಾತ್ಮದೊಂದಿಗೆ ಬೆಸೆದುಕೊಂಡು ಇಚ್ಛಾಮರಣಿಯಾಗಿ ಪತಿ ಪಥಗಾಮಿಯಾಗುತ್ತಾಳೆ. ಇದಕ್ಕಿಂತಲೂ ಹೆಚ್ಚಿನ ಶ್ರೇಷ್ಠತೆಯು ಯಾವ ಪತಿವ್ರತೆಗೆ ದೊರಕುತ್ತದೆ? ಇಲ್ಲಿ ಮಂಡೋದರಿ ಪಾತ್ರಚಿತ್ರಣ ಧ್ವನಿಪೂರ್ಣವಾಗಿದ್ದು, ಔನತ್ಯವನ್ನು ಪಡೆದುನಿಂತಿದೆ.

### ೭. ಚಂದ್ರನಖಿ

ವಾಲ್ಮೀಕಿ ಕವಿಯು ಭಯಾನಕವಾಗಿ ಚಿತ್ರಿಸಿರುವ ಲಂಕೇಶ್ವರನ ಸಹೋದರಿ ಶೂರ್ಪನಖಿಯನ್ನು ಮಹಾಕವಿ ಕುವೆಂಪು 'ಶ್ರೀರಾಮಾಯಣದರ್ಶನಂ' ಕಾವ್ಯದಲ್ಲಿ 'ಚಂದ್ರನಖಿ'ಯನ್ನಾಗಿ ಮಾಡಿ ಹೊಸತನವನ್ನು ತುಂಬಿ ಆಕೆಯ ಪಾತ್ರವನ್ನು ಉದ್ಧಾರಿಸಿದ್ದಾರೆ. "ರಾಮಾಯಣದಲ್ಲಿ ಉಲ್ಕೆಯಂತೆ ಇದ್ದಕ್ಕಿದ್ದಂತೆ ಚಿಮ್ಮಿ ಅನಾಹುತವನ್ನು ಸೃಷ್ಟಿಸಿ ಆಶ್ಚರ್ಯಕರವಾಗಿ ಅದೃಶ್ಯವಾಗಿ ಹೋಗುವ ಶೂರ್ಪನಖಿ, ಈ ಕಾವ್ಯದಲ್ಲಿ ರಸಿಕರ ತುಂಬುಗಮನಕ್ಕೆ ಅನುಕಂಪಕ್ಕೆ ಮೆಚ್ಚುಗೆಗೆ ಗೌರವಕ್ಕೆ ಪಾತ್ರಳಾಗುವ ವಿಶಿಷ್ಟವ್ಯಕ್ತಿಯಾಗಿ ಕಂಗೊಳಿಸುತ್ತಾಳೆ. ಇಲ್ಲಿ ಅವಳ ಹೆಸರು ಶೂರ್ಪನಖಿಯಲ್ಲ ಚಂದ್ರನಖಿ, ಇಲ್ಲಿ ಕೇವಲ ಅವಳ ಹೆಸರು ಮಾತ್ರ ಬದಲಾವಣೆಯಾಗಿಲ್ಲ, ಉಸಿರು ಸಹ".[೬೦]

ಚಂದ್ರನಖಿಯ ಮೊದಲು ಕಂಡು ಬರುವ ಸನ್ನಿವೇಶ ಸಹೃದಯರಿಗೆ ಆಕರ್ಷಣೀಯವೆನಿಸುತ್ತದೆ. ಸೀತಾರಾಮಲಕ್ಷ್ಮಣರು ವನವಾಸ ಮುಗಿಸಿ ಅಯೋಧ್ಯೆಗೆ ಮರಳುವ ಸಿದ್ಧತೆಯಲ್ಲಿದ್ದಾಗ ಚಂದ್ರನಖಿಯ ಪ್ರವೇಶವಾಗುತ್ತದೆ. ಚಂದ್ರನಖಿ ರಾಮನ ರೂಪಲಾವಣ್ಯಕ್ಕೆ ಮಾರುಹೋಗಿ ಮೋಹಿಸಿ ಬಂದರೂ ವಿನಯಶೀಲಳಾಗಿ ವರ್ತಿಸಿ ಸ್ವಾಗತ ಬಯಸುತ್ತಾಳೆ. ರಾಮನು ಇಂದೋ ನಾಳೆಯೋ ನಾವು ಇಲ್ಲಿಂದ ಹಿಂದಿರುಗುವವರಿದ್ದೇವೆ ಎಂದರೂ ಅವರನ್ನು ಆತಿಥ್ಯ ಸ್ವೀಕರಿಸಿಯೇ ಹೋಗಬೇಕೆಂದು ಒತ್ತಯಿಸಿ ತನ್ನ ಆಸೆಯನ್ನು ನೇರವಾಗಿಯೇ ವ್ಯಕ್ತಪಡಿಸುತ್ತಾಳೆ. ರಾವಣನಿಂದ ಕತ್ತಲೆಯ ಕುರುಡಿನಲ್ಲಿ ಹತನಾದ ತನ್ನ ಪತಿಯ ವಿಷಯ ತಿಳಿಸಿ ನಾಥನಿಲ್ಲದ ತರುಣಿಯ ಮನೋ ಆವೇಗವನ್ನು ಭಿನ್ನಯಿಸಿ ಕೋರಿಕೆಯನ್ನು ಮುಂದಿಡುತ್ತಾಳೆ:

"ನಾನಂದಿನಿಂದೀವರೆಗೆ
ಮಳೆಯ ನೀರ್ಗಾಣದೆಯೆ ಬಂಜರಾದೊಳ್ನೆಲದ
ಪಾಂಗಿದೆ ಬರ್ದುಕುತಿಹೆನೆಂತೊ ರಿಕ್ತತೆಗತ್ತು
ಮಳೆಯಾಗಿ ಕರೆಯಯ್ಯ, ಹೊಳೆಯಾಗಿ ಹರಿಯಯ್ಯ;
ಹಚ್ಚನೆಯ ಹಸುರು ಪಯಿರಿನ ಬೆಳೆಯ ಸಿರಿಯಾಗಿ
ಬಾರಯ್ಯ ಕಲ್ಪತರು ನೀನಲ್ತೆ ಬೇಳ್ಪರಿಗೆ?"

[ಶ್ರೀರಾಮಾಯಣದರ್ಶನಂ, ಪು-೨೦೯]

ಚಂದ್ರನಖಿಯು ಬೇಡುವ ಈ ನುಡಿಗಳಲ್ಲಿ ಆಕೆಯ ಬರಿದಾದ ಎದೆಯ ಬಯಕೆಯು ಭಾವಗೀತಾತ್ಮಕವಾಗಿ ಅಭಿವ್ಯಕ್ತಿ ಪಡೆದಿದೆ. ರಾಮನನ್ನು ಚಂದ್ರನಖಿ ತನ್ನ ಸ್ತ್ರೀ ಸಹಜವಾದ ಬಯಕೆಯಿಂದಲೇ ಮೋಹಿಸುತ್ತಾಳೆ. ರಾಮನನ್ನು ಪ್ರಿಯವಾದ ಮಾತುಗಳಿಂದಲೇ ಒಲಿಸಿಕೊಳ್ಳಲು ಬಯಸಿ, ರಾಮನು ರಾಕ್ಷಸರ ವಿವಾಹಕ್ರಮವನ್ನು ಪರಿಹಾಸ್ಯ ಮಾಡಿದಾಗಲೂ ಕೋಪಗೊಳ್ಳದೆ ವರ್ತಿಸುತ್ತಾಳೆ. ರಾಮನು ಪ್ರಿಯಸತಿಯನ್ನು ತೋರಿಸಿ ಈಕೆಯಲ್ಲಿ ಚಲ್ವಿಗೇನೂ ಕಡಿಮೆಯಿಲ್ಲವೆಂದೂ; ತುಂಬಿದ ಹೊಟ್ಟೆಗೆ ಅಮೃತಾನ್ನವೂ ಸೇರುವುದಿಲ್ಲವೆಂದು ನಯವಾಗಿ ತಿರಸ್ಕರಿಸಿದಾಗ ಚಂದ್ರನಖಿ ತನ್ನ ಆಸೆಯ ಈಡೇರಿಕೆಗಾಗಿ ಚತುರತೆಯಿಂದ ಪ್ರಯತ್ನಿಸುತ್ತಾಳೆ:

----------

೬೦. ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೩೩೩

ಒಪ್ಪಿದೆನ್, ಈ ಸತಿಗೆ
ಹೆಗಲೆಣೆಯನಾಂ ಕಂಡೆನಿಲ್ಲ ನನ್ನತ್ತಿಗೆಯ
ರೂಪಿರ್ಪುದಿದಕೆ ಹೊಯಿಕೈಯಪ್ಪುದಾದೊಡಂ
ಗುಣಕೆ ಮಚ್ಚರಮೇಕೆ?

[ಶ್ರೀರಾಮಾಯಣದರ್ಶನಂ, ಪು-೨೧೦]

ಸೀತೆಯ ಸೌಂದರ್ಯವನ್ನು ನೋಡಿ ಮೆಚ್ಚಿ ತನ್ನತ್ತಿಗೆಯ ಸೌಂದರ್ಯವನ್ನು ಹೋಲಿಸುವ ಚಂದ್ರನಖಿಯು 'ಗುಣಕ್ಕೆ ಮತ್ಸರವೇಕೆ?' ಎನ್ನುವುದು ಆಕೆಯ ಹೃದಯದ ನಿರ್ಮಲಾಂತರಂಗವನ್ನು ತೋರಿಸುತ್ತದೆ. ಆಕೆಯ ತರ್ಕವು ಸಹೃದಯರ ಮೆಚ್ಚುಗೆಗೆ ಪಾತ್ರವಾಗುತ್ತದೆ.

"ಸಿಹಿಗೆಂತು ರುಚಿಯಿಹುದೊ
ಕಹಿಗುಮಂತೆಯೆ ಬೇರೆ ರುಚಿಯಿರದೆ? ಭೋಜನದ
ರಸಿಕಂಗೆ ಬೇರೆ ಬೇರೆಯ ರುಚಿಯ ರಸಗಳೊಳ್
ಭೇದಭಾವಮದೇಕೆ? ನಿಮ್ಮುತ್ತರದ ರತಿಯ
ಸಾತ್ವಕ ರಸದ ಜೊತೆಗೆ ನಮ್ಮ ದಕ್ಷಿಣ ರತಿಯ
ರಾಜಸವನನುಭವಿಸಿ ನೋಳ್ಪುಡೆ ಕಳಂಕಮೇಂ
ರಾಜ ರಸಿಕತೆಗೆ?"

[ಶ್ರೀರಾಮಾಯಣದರ್ಶನಂ, ಪು-೨೧೦]

ಮಾತಿನಲ್ಲಿ ಚತುರುಯಾಗಿರುವ ಚಂದ್ರನಖಿ ಲಂಕೇಶ್ವರನ ಸಹೋದರಿಯಾದರೂ ಯಾವ ಅಹಂಕಾರವಿಲ್ಲದೆ ನಾಚಿಕೆ ಬಿಟ್ಟು ತನ್ನ ಆಸೆ ಈಡೇರಿಸಿಕೊಳ್ಳಲು ಪ್ರಯತ್ನಿಸಿದ್ದಾಳೆ. ರಾಮನ ಶ್ರೇಷ್ಟತೆಗೆ ಹಾಗೂ ನಿರ್ಮಲತೆ ಅರಿಯದಿದ್ದರೂ; ರಾಜರಸಿಕತೆಯನ್ನು ಚೆನ್ನಾಗಿ ಬಲ್ಲವಳು, ರಾವಣನ ಸ್ತ್ರೀ ವ್ಯಾಮೋಹವನ್ನು ಕಂಡವಳು; ಮತ್ತೊಬ್ಬ ರಾಜನಲ್ಲಿ ಈ ರಸಿಕತೆಗಳಿರಬಹುದೆಂದು ಚಿಂತಿಸಿ ಈ ರೀತಿಯ ಚತುರತೆಯ ನುಡಿಗಳನ್ನಾಡಿದ್ದಾಳೆ. ಸೀತೆ ಸಿಹಿಯಾದರೆ, ತನ್ನನ್ನು ತಾನು 'ಕಹಿ' ಎಂದು ಒಪ್ಪಿಕೊಡರೂ ತನಗೂ ಒಂದು ಸ್ಥಾನವಿರುವುದನ್ನು ಆಕೆ ತೋರ್ಪಡಿಸಿಕೊಂಡಿದ್ದಾಳೆ.

ರಾಮನು 'ಹದಿಬದೆ' ಧರ್ಮವನ್ನು ಚಂದ್ರನಖಿಗೆ ಉಪದೇಶಿಸಿ, ಲಂಕೇಶ್ವರನ ಸಹೋದರಿಗೆ ಬೆಲೆವೆಣ್ಣುಗಳಾಡುವ ಮಾತು ಶೋಭಿಸುವುದಿಲ್ಲವಂದು ಹೇಳಿ ಅಲ್ಲಿಂದ ಹೋಗಲು ಹೇಳಿದಾಗ ಲಕ್ಷ್ಮಣನು ಪ್ರವೇಶಿಸುತ್ತಾನೆ. ಚಂದ್ರನಖಿಯ ಮನಸ್ಸು ಲಕ್ಷ್ಮಣನ ಕಡೆ ಹರಿಯುತ್ತದೆ. ಲಕ್ಷ್ಮಣನು ಆಕೆಯ ಮೋರೆಯನ್ನು ಬಾಣದಿಂದ ವಿಕಾರಗೊಳಿಸಿದಾಗ ಕೋಪಗೊಂಡು ಭೀಷಣ ರೂಪತಾಳಿದ ಚಂದ್ರನಖಿಯು ಶೂರ್ಪನಖಿಯಾಗಿ ಬದಲಾಗುತ್ತಾಳೆ. ಸೇಡಿನ ಕಿಡಿ ಹತ್ತಿಕೊಳ್ಳವುದು ಇಲ್ಲಿಂದಲೇ, ಖರ ದೂಷಣ ತ್ರಿಶರರನ್ನು ರಾಮಲಕ್ಷ್ಮಣರ ಸಂಹಾರಕ್ಕೆ ಕಳುಹಿಸುತ್ತಾಳೆ. ಆದರೆ ಅವರೇ ರಾಮಲಕ್ಷ್ಮಣರಿಂದ ಹತರಾದಾಗ ಕೆರಳಿದ ಸಿಂಹಿಣಿಯಂತೆ ರಾವಣನತ್ತ ದವಿಸುತ್ತಾಳೆ. ತನಗಾದ ಅಪಮಾನವನ್ನು ಸಹೋದರರ ವಧೆಯನ್ನು ವಿವರಿಸಿ ಸೇಡು ತೀರಿಸಿಕೊಳ್ಳಲು ಹುರಿದುಂಬಿಸುತ್ತಾಳೆ. ಸೀತೆಯ ಸೌಂದರ್ಯವನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸುತ್ತಾಳೆ. ರಾವಣನ ಮನಸ್ಸಿನಲ್ಲಿ ಸೀತೆಯನ್ನು ಮೋಹಿಸುವಂತೆ ವಿಷದ ಬೀಜಗಳನ್ನು ಬಿತ್ತುತ್ತಾಳೆ. ರಾಮಲಕ್ಷ್ಮಣರನ್ನು ಸೆರೆಹಿಡಿದು ನೀಡಬೇಕೆಂದು ಬೇಡುತ್ತಾಳೆ. ರಾವನನ ಕೋಪತಾಪಗಳ ಉರಿಗೆ ಕಾಮದ ತುಪ್ಪವನ್ನು ಸುರಿದು ಪ್ರಜ್ವಲಿಸುವಂತೆ ಮಾಡಿದವಳು ಚಂದ್ರನಖಿ.

ರಾಮನು ಅಸಮಾನ್ಯನು ಆತ ಒಬ್ಬನೇ ಆದರೂ ಆತನೇ ಒಂದು ಪಡೆ ಇದ್ದಂತೆ ಎಂದು ಹೇಳಿ, ಹೆಣ್ಣಾದ ನಾನು ಹೇಳಿದೆನೆಂದು ದುಡುಕಬಾರದೆಂದು ರಾವಣನಿಗೆ ಎಚ್ಚರಿಸುವುದನ್ನು ಮರೆಯದ ಬುದ್ಧಿವಂತೆ ಚಂದ್ರನಖಿಗೆ ರಾವಣನ ಸಮಾಧಾನದ ನುಡಿಗಳು ಹೆಚ್ಚಿನ ಮನ್ನಣೆಯನ್ನು ಒದಗಿಸುತ್ತವೆ:

"ಪೆಣ್ಣಾದೊಡಂ ನೀನೆನಗೆ
ಮತಿಯೊಳುಂ ಧೃತಿಯೊಳುಂ ಗಂಡಿಗೆಣೆ, ನಿನ್ನೆಣಿಕೆ
ಹಗುರವಲ್ತೆನಗೆ. ಕಲುಹಿದೆನು ನಾನದನರಿತೆ
ನಿನ್ನನವರಿರ್ಪೆಡೆಗೆ ತಿಳಿಯಲವರಾಳ್ಮೆಯಂ"

[ಶ್ರೀರಾಮಾಯಣದರ್ಶನಂ, ಪು–]

ರಾವಣನು ತನ್ನ ಸಹೋದರಿಯ ಬಗ್ಗೆ ಹೊಂದಿದ್ದ ನಂಬಿಕೆ ವಿಶ್ವಾಸಗಳು ಇಲ್ಲಿ ವ್ಯಕ್ತವಾಗಿವೆ. ಪರಸ್ಪರರಲ್ಲಿದ್ದ ಪ್ರೀತಿ, ವಾತ್ಸಲ್ಯಗಳ ಅನಾವರಣದೊಂದಿಗೆ ಚಮದ್ರನಖಿಯಲ್ಲಿದ್ದ ಪುರುಷ ಸಮಾನವಾದ ಧ್ಯೇಯ, ಶಕ್ತಿಗಳ ಬಗ್ಗೆ ತಿಳಿದು ಬರುತ್ತದೆ. ರಾವಣನ ಹಿತಕ್ಕಾಗಿ, ತನ್ನಹಿತಕ್ಕಾಗಿ 'ಸೀತಾಪಹರಣ' ದುರ್ಮಂತ್ರವನ್ನು ಉಪದೇಶಿಸುವವಳು ಚಂದ್ರನಖಿಯೇ.

ಕೈತವದೊಳವನಿಜಾತೆಯನೆಂತುಟಾದೊಡಂ
ಕವರ್ತೆಗೊಳ್, ಬೇಗೊಯ್ದುವನೀರುಹಂಬೋಲೆ
ನಿಸ್ತೇಜನಾದಪಂ ನಿರ್ವೀರ್ಯನಾದಪಮ,
ತನಗೆ ತಾಂಮಳ್ಗುವನೊಣಗಿ ಬಾಡಿ, ಶುಷ್ಕತರುದಲ್
ದಹನಕೆ ಸುಲಭ ಸಾಧ್ಯಂ! ಕಜ್ಜಮೆರೆಡುಂ ನಿನಗೆ
ಕೈಗೂಡುವುದು: ಪಡೆವೆ ಲಲನೆಯಂ; ವೈರಿಯುಂ
ಹತನಹನ್..........

[ಶ್ರೀರಾಮಾಯಣದರ್ಶನಂ, ಪು–೨೨೦]

ಈ ರೀತಿ ರಾಮನ ಮನಕ್ಕೆ ಕಾಮದ ಬೆಂಕಿಯನ್ನು ಪ್ರಜ್ವಲಿಸುವಂತೆ ಮಾಡಿ ತನ್ನ ಬಯಕೆಯನ್ನು ತೀರಿಸಿಕೊಳ್ಳಲು ಪ್ರಯತ್ನಸುತ್ತಾಳೆ. ಇಡೀ ಲಂಕೆಯೇ ಹದಿಬದೆಯ ತಾಪದಲ್ಲಿ ಬೇಯುವಂತೆ; ಸಾವಿರಾರು ಜನರ ಹೃದಯ ಬೆಂಕಿಗಾಹುತಿಯಾಗುವಂತೆ ಸಂಸ್ಕೃತಿ ಲಂಕೆ ನಾಶವಾಗುವಂತೆ ಮಾಡಿದವಳು ಚಂದ್ರನಖಿಯು ಅನೇಕ ಆತ್ಮಗಳ ಉದ್ಧಾರಕ್ಕೆ ಕೂಡ ಕಾರಣಳಾದಳೆಂಬುದು ಗಮನಾರ್ಹ ಸಂಗತಿ.

"ಸೀತಾಪಹರಣಕ್ಕೆ ಪ್ರಧಾನ ಕಾರಣಗಳಾದ ಈಕೆ ಸೀತೆಯನ್ನು ಲಂಕೆಗೆ ತಂದ ಮೇಲೆ ಏನು ಮಾಡಿದಳು! ಇಡೀ ರಾಷ್ಟವೇ ಪ್ರಚಂಡ ಸಮರದ ದಳ್ಳುರಿಗೆ ಸಿಕ್ಕಿ ತನ್ನ ಆತ್ಮೀಯರಾದ ಸಹಸ್ರಾರು ಜನ ಅದಕ್ಕೆ ಆಹುತಿಯಾದಾಗ, ಲಂಕೆಯುದ್ದಗಲಕ್ಕೂ ಕಣ್ಣೀರಿನ ಪ್ರವಾಹ, ನಿಟ್ಟುಸಿರಿನ ಬಿರುಗಾಳಿ ಹರಿದಾಗ ಚಂದ್ರನಖಿಯ ಮನದ ಪ್ರತಿಕ್ರಿಯೆಯೇನು? ಇತರ ರಾಮಾಯಣಗಳು ಈ ಬಗ್ಗೆ ಮೌನವಹಿಸಿವೆ. 'ಶ್ರೀ ರಾಮಾಯಣ ದರ್ಶನಂ' ಆಕೆಯ ಉತ್ತಮ ಪಾತ್ರವನ್ನು ಅತ್ಯಂತ ಗಂಭೀರವಾಗಿ ಔಚಿತ್ಯಪೂರ್ಣವಾಗಿ ಮನೋವಿಜ್ಞಾನ ಸಮ್ಮತವಾಗಿ ಕಲಾತ್ಮಕವಾಗಿ ನಿರ್ಮಿಸಿ ಕೃತಕೃತ್ಯವಾಗಿದೆ; ಅದಕ್ಕೊಂದು ಪರಿಪೂರ್ಣತೆಯನ್ನು ಹೊಸ ಆಯಾಮವನ್ನು ಒದಗಿಕೊಟ್ಟಿದೆ".[೬೧]

----------

೬೧. ಅದೇ ಪು.೩೬೦

ಸೀತೆಯನ್ನು ಲಂಕೆಗೆ ಅಪಹರಿಸಿ ತಂದು ಗುಪ್ತಗೃಹದಲ್ಲಿರಿಸಿ ರಾವಣ ಮೊದಲು ಕರೆತಂದಿದ್ದು ಚಂದ್ರನಖಿಯನ್ನು. ಅಣ್ಣನ ಈ ಸಾಹಸವನ್ನು ಕಂಡ ಚಂದ್ರನಖಿ ಅಣ್ಣನ ಪ್ರಣಯ ಬೇಟೆಯೊಂದಿಗೆ ತನ್ನ ಪ್ರಣಯ ಬೇಟೆಯೂ ಯಶಸ್ವಿಯಾಗುತ್ತದೆಂದು ಭಾವಿಸಿ ಸಂತಸಗೊಂಡು ಸೀತೆಯನ್ನು ರಾವಣನಿಗೆ ಒಲಿಯುವಂತೆ ಮಾಡುವುದಾಗಿ ಭರವಸೆ ಕೊಡುತ್ತಾಳೆ. ಆದರೆ ಮೈಮರೆತು ಬಿದ್ದಿದ್ದ ಜಾನಕಿಯನ್ನು ಕಂಡು ಅವಳಾಡುವ ಮಾತುಗಳಲ್ಲಿ ಆಕೆಯು ಕುಶಾಗ್ರಮತಿಯೆಂದೂ, ಸೂಕ್ಷ್ಮಪ್ರಜ್ಞೆವುಳ್ಳವಳೆಂದು ತಿಳಿಯುತ್ತದೆ. ಮುಂದಿನ ಭವಿಷ್ಯದ ನುಡಿಗಳು ರಾವಣನಿಗೆ ನೀಡಿರುವ ಎಚ್ಚರಿಕೆಯಂತೆ ಬಂದಿವೆ.

"ಇನ್ನೆಗಂ
ನೀಂಗೆಲಿದ, ನಿನ್ನ ನಿನ್ನನೊಲಿದತ್ತಿಗೆಯರಂತಲ್ಲಮೀ
ಪೆಣ್ಕಣ! ನಿನ್ನ ಛಲಕಿವಳ ಛಲ ಪಡಿಮಲೆಯೆ
ಗೆಲ್ವರಾರದನರಿಯೆನಯ್! ಮೂರ್ಛೆಯೊಳುಮೆಂತು
ದೃಢತೆ ಪಲ್ಗಚ್ಚಿದಂತಿದೆ, ನೋಡು ಕೋಮಲೆಯ
ಮುಖದಿ!"

[ಶ್ರೀರಾಮಾಯಣದರ್ಶನಂ, ಪು-೩೨೪]

ಸೀತೆಯನ್ನು ಸೂಕ್ಷ್ಮವಾಗಿ ಗಮನಿಸಿ ಭವಿಷ್ಯದ ನುಡಿಗಳನ್ನು ನುಡಿವ ಚಂದ್ರನಖಿ ಸೀತೆಯನ್ನು ಉಪಚರಿಸಿ ನಯ ವಿನಯಗಳಿಂದ ಮಾತನಾಡುತ್ತಾಳೆ. ಸೀತೆಗೆ ತಾನು ಮೊದಲು ಕಂಡ ಚಂದ್ರನಖಿಗೂ ಇಂದಿನ ಚಂದ್ರನಖಿಗೂ ತುಂಬಾ ವ್ಯತ್ಯಾಸಗಳು ಕಾಣಿಸುತ್ತವೆ. ಸೀತೆಯ ಸಾನಿಧ್ಯ ಕಲ್ಲನ್ನು ಚೇತನವಾಗಿ, ಅಶುದ್ಧವಾದದ್ದು ಶುದ್ಧವಾಗಿ ದೇವಾರ್ಪಿತವಾಗಿ ಮಾರ್ಪಡುತ್ತದೆಂಬುದಕ್ಕೆ ಚಂದ್ರನಖಿಯೇ ನಿದರ್ಶನವಾಗಿ ಬರುತ್ತಾಳೆ. ರಾವಣನ ಬಗೆಗೆ ಸೀತೆಯಲ್ಲಿ ಉತ್ತಮವಾದ ಅಭಿಪ್ರಾಯ ಮೂಡಿಸಲು ಚಂದ್ರನಖಿಯು ಮಾತಿನ ಮೋಡಿಯನ್ನು ಹಾಕುತ್ತಾಳೆ.

ಎದೆಗೆಡದಿರಾರ್ಯೆ ಸಂಸ್ಕೃತಿಯ ಮಡಿಲೊಳಗಿರ್ಪೆ;
ಸರ್ವಪರಿಯಿಂ ಸುರಕ್ಷಿತಳೆ ನೀಂ, ಮನ್ನಿಸೌ
ಅಣ್ಣನ ಅಚಾತುರ್ಯಮಂ. ರಾಜಕೀಯಮಂ

[ಶ್ರೀರಾಮಾಯಣದರ್ಶನಂ, ಪು-೩೨೬]

ಅಣ್ಣನ ಅಪರಾಧಕ್ಕೆ ಕ್ಷಮೆಕೇಳಿ ಆತನನ್ನು ತಿದ್ದುತ್ತೇನೆಂದು ಹೇಳುತ್ತಾಳೆ. ಈ ಅಪಹರಣಕ್ಕೆ ತಾನೇ ಮೂಲ ಕಾರಣಳೆಂದು ತಿಳಿದೂ ಸೀತೆಯನ್ನು ಒಲಿಸಿಕೊಳ್ಳಲಾಡುವ ನಾಟಕದ ಮಾತುಗಳಿವು. ಆದರೆ "ಸೀತೆಯ ಸತತ ಸಹಚರ್ಯೆಯಿಂದ ಆಕೆಯ ಮನೋದಾರ್ಢ್ಯದ ಪತಿವ್ರತಾ ತೇಜಸ್ಸಿನ ತಪಃಪ್ರಭೆಯ ಪ್ರಭಾವದಿಂದ ತಾನೇ ಸೀತೆಗೆ ಸೋಲುತ್ತಾಳೆ; ತನ್ನ ಪಾಪಕೃತ್ಯಗಳ ದಟ್ಟಕತ್ತಲನ್ನು ಅರಿತುಕೊಂಡು ಅದರಿಂದ ಹೊರಬರಲು ಪ್ರಯತ್ನನಿರತಳಾಗುತ್ತಾಳೆ".[೬೨]

ಚಂದ್ರನಖಿಯ ರಾಕ್ಷಸತೆ ಕಳೆದು ಸಾತ್ವಕತೆ ಮೈದೋರುವುದು ಸೀತೆಯ ಸಹವಾಸದಿಂದಲೇ, ಸೀತೆಯೊಂದಿಗಿನ ಒಡನಾಟದಿಂದಲೇ ಆಕೆಯ ಮನಃಪರಿವರ್ತನೆಯಾಗುತ್ತದೆ. ಆಕೆಯ ಮಾತುಗಳಲ್ಲಿ, ವರ್ತನೆಗಳಲ್ಲಾದ ಬದಲಾವಣೆಗೆ ಅದನ್ನು ಸ್ಪಷ್ಟಪಡಿಸುತ್ತದೆ. ರಾವಣನಿಗೆ ಆಕೆಯಾಡುವ ಮಾತುಗಳು ಧ್ವನಿಪೂರ್ಣವಾಗಿವೆ:

----------

೬೨. ಅದೇ. ಪು.೩೬೧

ಸೀತೆ ಪೆಣ್ಣಲ್ತು
ನಮ್ಮನ್ನರೊಳ್, ದೈತ್ಯ ರಾಜೇಂದ್ರ: ದೇವಿಯಯ್;
ನೀನಾಕೆಯಂ ಮೊದಲ್ ಕರೆದವೋಲ್ ಆ ಪೂಜ್ಯೆ
ದೇವಿಯೇ ದಿಟಂ!

[ಶ್ರೀರಾಮಾಯಣದರ್ಶನಂ, ಪು-೪೮೬]

ಚಂದ್ರನಖಿಯ ಬಾಯಿಂದ ಬಂದ ಮಾತುಗಳಿಂದ ದೈತ್ಯೇದ್ರನಿಗೆ ಮಂಕು ಬಡಿಯುತ್ತದೆ. ಚಂದ್ರನಖಿಯು ತನ್ನ ಪತಿಗೆ ಸಾವನ್ನು ತಂದು, ತನಗೆ ವೈಧವ್ಯ ಕೊಟ್ಟ ಅಣ್ಣನನ್ನು ಪಾಪಿ ಎಂದು ಮೂದಲಿಸಿ ನನ್ನನ್ನು ಪಾಪದ ರುಚಿಗೆ ತಳ್ಳಿದೆ, ಪೂಜ್ಯಳಿಂದ ಈ ನರಕದ ಅರಿವಾಗುತ್ತಿದೆ ಎಂದು ಹೇಳುತ್ತಾಳೆ. ಚಂದ್ರನಖಿಯ ಪಾತ್ರವು ಇಲ್ಲಿಂದಲೇ ಮನಃಪರಿವರ್ತನೆಗೊಂಡು ಊರ್ಧ್ವಗಾಮಿಯಾಗಿ ಮೇಲೇರುತ್ತದೆ.

"ರಾಮನ ಬಗೆಗಿನ ರಾವಣನ ಕ್ರೋದಾಗ್ನಿಗೆ ಸೀತೆಯ ಬಗೆಗಿನ ಮೋಹದ ಹದವನ್ನು ಕೊಟ್ಟು ಸೀತಾಪಹರಣಕ್ಕೆ ಕಾರಣಳಾದ ಚಂದ್ರನಖಿ, ಆ ಮಹಾಪಾವಿತ್ರ್ಯದ ಧ್ರುವತಾರೆಯಿಂದ ತನ್ನ ಜೀವನದ ಪರಮಪಥವನ್ನು ಗುರುತಿಸಿಕೊಂಡ ಮೇಲೆ, ತಾನು ಹೊತ್ತಿಸಿದ ಆ ಮಹಾಗ್ನಿಯನ್ನು ತನ್ನಣ್ಣನ ಆಪ್ತರು ಆತ್ಮೀಯರು, ಕರುಳಕುಡಿಗಳು, ಅನುಚರರು ಹಾಗೂ ತನ್ನ ಪ್ರೀತಿಯ ನಗರವಾದ ಲಂಕೆಯೇ ದಹಿಸಿ ಹೋಗುತ್ತಿರುವಾಗ ಆಕೆ ಅನುಭವಿಸಿರಬಹುದಾದ ಮಾನಸಿಕ ಯಾತನೆ ಅವರ್ಣನೀಯ. ಅದರಲ್ಲೂ ಆ ಅನಾಹುತಕ್ಕೆಲ್ಲ ತಾನೇ ಮೂಲಕಾರಣ ಎನಿಸಿದಾಗ, ತನ್ನ ಅಪರಾಧ ಬೆಟ್ಟವಾಗಿ ಬೆಳೆದಿದೆಯೆಂದು ಅಂತರಾತ್ಮ ಚುಚ್ಚಿದಾಗ ತಾನೇ ಹೊತ್ತಿಸಿದ ಈ ಅಗ್ನಿಯಲ್ಲಿ ತಾನೇ ಭಸ್ಮವಾದರೂ ಸರಿಯೇ ಮುಂದಾಗುವ ಮಹಾದುರಂತವನ್ನು ತಪ್ಪಿಸಿ ತನ್ನ ಪಾಪಕ್ಕೆ ಕಿಂಚಿತ್ ಪ್ರಾಯಶ್ಚಿತ್ತವನ್ನಾದರೂ ಮಾಡಬೇಕೆನಿಸುತ್ತದೆ ಅವಳಿಗೆ".[೬೩]

ರಾವಣನು ತನ್ನೆಲ್ಲರನ್ನೂ ಸಮರದಲ್ಲಿ ಬಲಿಕೊಟ್ಟು ಒಂಟಿಯಾಗಿರುವಾಗ ಬಂದು ಕಾಲಿಡಿದು ಗದ್ಗದಿಸಿ ಅಳುವ ಚಂದ್ರನಖಿಯನ್ನು ಕಂಡು ಲಂಕೇಶ್ವರನಿಗೆ ಆಶ್ಚರ್ಯವಾಗುತ್ತದೆ. ಮಲಿನ ವಸ್ತ್ರಗಳು, ಸೊರಗಿರುವ ದೇಹದ ತಂಗಿಯನ್ನು ಪ್ರಶ್ನಿಸಿದಾಗ ಚಂದ್ರನಖಿಯಾಡುವ ಮಾತುಗಳು ಆಕೆಯ ಮನಃ ಪರಿವರ್ತನೆಗೆ ಸಾಕ್ಷಿಯಾಗುತ್ತವೆ:

"ಪಾಪಿ; ಪಶ್ಚಾತ್ತಾಪಿ;
ಬಂದೆನಾಂ ಬಯಸಿ ಪ್ರಾಯಶ್ಚಿತ್ತಮಂ"

[ಶ್ರೀರಾಮಾಯಣದರ್ಶನಂ, ಪು-೭೪೧]

ಪಾಪಕ್ಕೆ ಪ್ರಾಯಶ್ಚಿತ್ತ ಬಯಸಿ ಬಂದವಳ ಹೃದಯ ಬೇಗೆಯನ್ನು ಅರಿಯಲಾಗದ ರಾವಣ ನಗುತ್ತಾನೆ ಅಂತರಾಳದ ನೋವನ್ನು ತನ್ನ ಅನುಜನಲ್ಲಿ ತೆರೆದಿಡುತ್ತಾಳೆ ಚಂದ್ರನಖಿ:

"ನಗುವೆ ಏಕಣ್ಣ?
ಮುನ್ನನ್ನಳಲ್ತು ನಾನಿನ್ ..... ನನ್ನ ದೆಸೆಯಿಂದ
ಕಳ್ದುಯ್ದು ಹದಿಬದೆಯನೆಳೆತಂದೆ, ಲಂಕೆಯಂ

----------

೬೩. ಅದೇ ಪು. ೩೬೨

ನಾನೇದುರ್ಗತಿಗೆ ತಂದೆ; ಲೆಕ್ಕಕ್ಕೆ ಮಿಗಿಲ್
ಬೀರಾಳ್ಗಳಂ ತಿಂದೆ; ಸೇನಾನಿಗಳನೆನಿತೊ
ಕೊಂದೆ; ಕುಂಭಕರ್ಣನ ಕೊಂದೆನಲೆಕಾಯನಂ
ಮೇಣಿಂದ್ರಜಿತು ಮೇಘನಾದಾದಿ ಮಕ್ಕಳಂ
ಬೇಳ್ದೆನೆನ್ನಯ ದುರಭಿಮಾನದ ದವಾಗ್ನಿಯಂ
ಪೋಷಿಸಲ್ ಕಾಲ್ಪಿಡಿದು ಬೇಡುವನ್ ನಿನ್ನನೀ
ರಣಮೇಧಮಂ ನಿಲಿಸು"

[ಶ್ರೀರಾಮಾಯಣದರ್ಶನಂ, ಪು-೭೪೧]

ತನ್ನ ಆತ್ಮಶೋಧನೆಯನ್ನು ತಾನೇ ಮಾಡಿಕೊಂಡು ಎಲ್ಲ ದುರಂತಗಳಿಗೆ ಕಾರಣಳಾದ ತಾನು ಪಾಪಿ ಎಂದು, ಯುದ್ಧವನ್ನು ನಿಲ್ಲಿಸಬೇಕೆಂದು ಬೇಡುತ್ತಾಳೆ. ಅಶೋಕವನವಾಸಿ ಸೀತೆಯಲ್ಲಿ ನಿನಗಿನ್ನೂ ಕಾಮ, ಮೋಹವಿದೆಯೇ? ಎಂದು ಕೇಳುತ್ತಾಳೆ. ಚಂದ್ರನಖಿಯ ಈ ಮಾತುಗಳು ರಾವಣನಲ್ಲಿರುವ ಸಾತ್ವಿಕ ಪ್ರಜ್ಞೆಯನ್ನು ಜಾಗೃತಗೊಳಿಸುತ್ತವೆ.

"ದಿಟಂ ನೀಂ ಪೇಳ್ದುದನಿತುಂ ದಿಟಂ ನನಗೆ
ಸತ್ತುದಾ ಸೀತೆಯೊಳ್ ಕಾಮರುಚಿ".

ಸೀತೆಯಲ್ಲಿ ಕಾಮರುಚಿ ಅಳಿದು ಮಾತೃವಾತ್ಸಲ್ಯ ಉದಯಿಸಿದೆ. ಪಾತಿವ್ರತ್ಯಕ್ಕೆ ಮಣಿದಿದ್ದೇನೆಂದು ತಿಳಿಸುವ ರಾವಣ ಚಂದ್ರನಖಿಗೆ ಆಕೆಯು ಬಯಸಿದ, ಮಂಗಳಾಂತ್ಯವನ್ನು ಪರಾಕ್ರಮದಿಂದ ಸಾಧಸುವ ನಿರ್ಧಾರ ತಿಳಿಸುತ್ತಾನೆ. ಅಣ್ಣನ ಹೃದಯ ಪರಿವರ್ತನೆಗೆ ಚಂದ್ರನಖಿಯು ದೈನ್ಯತೆಯ ಕಣ್ಣೀರುಸುರಿಸುತ್ತಾಳೆ. ರಾವಣ ಮನಬಿಚ್ಚಿ ತನ್ನನುಜಿಗೆ ಭವಿಷ್ಯದ ಶುಭವನ್ನು ಹೇಳುವಂತೆ ಸಮಾಧಾನಿಸುತ್ತಾನೆ:

ಮೂಲೋಕಮಿನ್ನೆಗಂ ಮತ್ತಮಿನ್ನಾದೊಡಂ
ಕಂಡರಿಯದಾ ಕಾಣಲಾರದಾ ಕೊಳಗುಳದಿ
ರಘುಕುಲಲಲಾಮನಂ ಜಗದೇಕ ವೀರನಂ
ಗೆಲ್ದು ಸೆರೆಯೊಳ್ ಮಾಡಿತಂದು, ಲಂಕೇಶ್ವರನ
ಸರ್ವಗರ್ವನಿರದೆ ಸೋಲಿಸಿದ ಮೈಥಿಲಿಗೆ
ಕಪ್ಪಮೆನೆ ಕಾಣಿಕೆಯನೊಪ್ಪಿಸುವ ಭವ್ಯತಾ
ದಿವ್ಯದೃಶ್ಯಂ!

[ಶ್ರೀರಾಮಾಯಣದರ್ಶನಂ, ಪು-೭೪೩]

ರಾವಣನ ಉದಾತ್ತನಿಲುವಿಗೆ ಚಂದ್ರನಖಿ ಸಂತೋಷಿಸಿ ಭವ್ಯವಾದ ವಿಗ್ರಹಕ್ಕೆ ಮಣಿವಂತೆ ನೀನು 'ಮಹಚ್ಛಿಲ್ಪಿ' ಎಂದು ಕೊಂಡಾಡುತ್ತಾಳೆ. ರಾವಣನ ಅದಃಪತನಕ್ಕೆ ಕಾರಣಳಾದವಳು; ರಾವಣನ ಊರ್ಧ್ವಗಾಮಿತ್ವಕ್ಕೂ ಕಾರಣಳಾಗಿ ಪುನೀತಳಾಗುತ್ತಾಳೆ.

## ೮. ಅನಲೆ

ಕುವೆಂಪು ಅವರ ಕಲ್ಪನೆಯಲ್ಲಿ ಮೂಡಿಬಂದ ಪಾತ್ರಗಳಲ್ಲಿ ಮುಖ್ಯಳಾದವಳು ಅನಲೆ. ಕುವಂಪು ಅನಲೆಯನ್ನು ಎಲ್ಲರ ನಡುವಿನ ಮಮತೆಯ ಕೊಂಡಿಯಾಗಿ ಚಿತ್ರಸಿದ್ದಾರೆ. ಬಹುಮುಖ್ಯವಾಗಿ ರಾವಣನ ಮಮತೆಯನ್ನು ಪಡೆದ ಪುತ್ರಿ; ವಿಭೀಷಣನ ಮಗಳು. ರಾವಣ ತನ್ನಂತರಂಗವನ್ನು ಬಿಚ್ಚಿಡುವುದು ಈ ಪುಟ್ಟ ಹುಡುಗಿಯ ಮುಂದಯೇ. ದೊಡ್ಡಪ್ಪನನ್ನು ಸೀತೆಯ ಬಗ್ಗೆ ಉತ್ತಮ ಅಭಿಪ್ರಾಯ ಮೂಡಿಸುವಲ್ಲಿ ಯಶಸ್ವಿಯಾಗುವವಳು ಅನಲೆ.

ಅನಲೆ ಚಿಕ್ಕವಳಾದರೂ ಎಲ್ಲರ ಪ್ರೀತಿಗೆ ಪಾತ್ರಳಾಗಿ; ಎಲ್ಲರೂ ಪ್ರೀತಿಸುವ, ಪರಿಗಣಿಸುವ ಪಾತ್ರವಾಗಿ ಮೂಡಿ ಬಂದಿದ್ದಾಳೆ. ಅನಲೆಯ ಪ್ರಸ್ತಾಪವನ್ನು ಮೊದಲು ಕಾಣುವುದು ಮೇಘನಾದ ಮತ್ತು ತಾರಾಕ್ಷಿಯರ ಸಂಭಾಷಣೆಯಲ್ಲಿ. ಆಂಜನೇಯನು ಧೂಮರೂಪದಲ್ಲಿ ಲಂಕೆಯರಮನೆಯಲ್ಲಿ ಸೀತೆಗಾಗಿ ಅನ್ವೇಷಿಸುವಾಗ ಮೇಘನಾದನ ಮಡದಿಯ ಅರಮನೆಗೂ ಬೇಟಿನೀಡುತ್ತಾನೆ. ಆ ಸಂದರ್ಭದಲ್ಲಿ ಇಂದ್ರಜಿತುವಿ ಮಗ ವಜ್ರಾರಿಯ ಬೆಚ್ಚುವಿಕೆಗೆ ತಾಯಿ ತಾರಾಕ್ಷಿ ಹೆದರುತ್ತಾಳೆ. ಅನಲೆಯೊಂದಿಗೆ ಬೈಗಿನಲ್ಲಿ ಉದ್ಯಾನವನದಲ್ಲಿರುವಾಗ ಉಲ್ಕೆಯೊಂದು ಆಕಾಶದಿಂದ ಲಮಕೆಯ ಮೇಲೆ ಬಿದ್ದುದನ್ನು ಕಂಡು ಅದು ಅಪಶಕುನವೆಂದು ಹೇಳಿ 'ಆ ಮಹಾತಾಯಿ ಸೀತೆಯನ್ನು ಮರಳಿ ಕಳಿಸಬಾರದೇ ಮಾವ' ಎಂದು ಮಾತಿಗೆ ನುಡಿದಾಗ ಮೇಘನಾದನ ಪ್ರತಿಕ್ರಿಯೆ ಭಿನ್ನವಾದದ್ದು:

"ಆ ತಂಗಿ ಕಕ್ಕನ ಮಗಳ್, ನಿನಗೆ
ಸಖಿಯಲ್ತೆ ಅನಲೆ! ಅವಳುಪದೇಶಮಂ ಕೇಳ್ದು
ನೀನು ವಿಭೀಷಣಾರ್ಯನ ತೆರದೊಳರೆಯುತಿಹೆ
ನನಗೆ ತಂದೆಗುಪದೇಶಕ್ಕೆ ಕೊರತೆಯುಂಟೇನ್?"

[ಶ್ರೀರಾಮಾಯಣದರ್ಶನಂ, ಪು-೪೪೯]

ಎಲ್ಲರನ್ನು ಗೌರವಿಸುವ ಮೇಘನಾದನು ವಿಭೀಷಣನಂತೆಯೇ ಬುದ್ಧವಂತೆಯೂ, ಸಾಧು ಸ್ವಭಾವದವಳೂ ಆದ ಅನಲೆಯು ತಂದೆಯಂತೆಯೇ ಉಪದೇಶದಲ್ಲಿ ಚತುರೆ ಎಂದು ಆಕೆಯ ಉಪದೇಶದಿಂದಲೇ ತಾರಾಕ್ಷಿಯು ಹೀಗೆ ನುಡಿಯುತ್ತಿರುವಳೆಂದು ಪರಿಹಾಸ್ಯಮಾಡುತ್ತಾನೆ. 'ಈಚಿಕ್ಕ ವಯಸ್ಸಿನ ಬಾಲೆ ಅನಲೆ ಎಲ್ಲ ಕಡೆಯೂ ಎಲ್ಲರಿಗೂ ಸಖಿಯಾಗಿ, ಆತ್ಮೀಯಳಾಗಿ ತನ್ನ ಮೃದುವಾದ ಪ್ರಾಮಾಣಿಕವಾದ, ನಿರ್ಮಲವಾದ, ಸ್ನೇಹಶೀಲವಾದ ವರ್ತನೆಯಿಂದ ಮತ್ತು ಮಾತುಗಾರಿಕೆಯಿಂದ ಅವರ ಮನಸ್ಸು ಗೆದ್ದಿದ್ದಾಳೆಂಬುದನ್ನು, ಸರ್ವರಿಗೂ ಶುಭತರುವ ಸದುದ್ದೇಶದ ಅಭಿಪ್ರಾಯಗಳನ್ನು ನೇರವಾಗಿ ನಿಶ್ಕಪಟವಾಗಿ ಮಂಡಿಸುತ್ತಿದ್ದಳೆಂಬುದನ್ನು ಈ ಮಾತುಗಳು ಸ್ಪಷ್ಟಪಡಿಸುತ್ತವೆ; ಅಷ್ಟೇ ಅಲ್ಲ ತಂದೆ ವಿಭೀಷಣನಂತೆಯೇ ಆಕೆಯು ಧರ್ಮ ನೀತಿಗಳ ಋಜ ಜೀವನದ ಹರಿಕಾರಳಾಗಿದ್ದಾಳೆಂಬುದನ್ನು ಈ ಪುಟ್ಟ ಪ್ರಸಂಗ ಸೂಚಿಸುತ್ತದೆ".[೬೪]

ಆಂಜನೇಯನು ಲಂಕೆಯ ಸಂಸ್ಕೃತಿ, ಸಾತ್ವಿಕತೆಯನ್ನು, ಕಾಣುವುದು ಅನಲೆಯಲ್ಲಿ. ವಿಭೀಷಣ ಮತ್ತು ಸರಮೆಯರ ಮುಂದೆ ವೀಣೆ ನುಡಿಸಿದ ದೇವತೆಯನ್ನು ಮೆಚ್ಚುತ್ತಾನೆ.

----------

೬೪. ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೩೬೯

ಅನಲೆಯು ಅರ್ಥಕ್ಕೇ ನಿಲ್ಲಿಸಿ ಆಡುವ ಮಾತುಗಳು ಆಕೆಯ ಮಹಿಮೆಗೆ ಹಿಡಿದ ಕನ್ನಡಿ ಎನ್ನಬಹುದು:

ಮನವೇಕೋ ಬೆಚ್ಚುತ್ತಿದೆ;
ಸುಖವೊ ದುಃಖವೊ ತಿಳಿಯೆನೆದೆಯನಳ್ಳಾಡುತಿದೆ;

[ಶ್ರೀರಾಮಾಯಣದರ್ಶನಂ, ಪು-೪೫೮]

ಯಾವುದನ್ನೋ ಶಂಕಿಸುತ್ತಿರುವ ಹೃದಯದ ತಲ್ಲಣವನ್ನು ಪುಟ್ಟ ಅನಲೆ ಗ್ರಹಿಸುತ್ತಾಳೆ. ಆದರೆ ಸರಮೆ ಮಗಳ ಮನೋಧರ್ಮವು ಮೊದಲಿನಂತಿಲ್ಲವೆಂದು ವಿಭೀಷಣನಿಗೆ ಹೇಳುವುದು ತಾಯಿಯ ಸೂಕ್ಷ್ಮತೆಯನ್ನು ಎತ್ತಿತೋರುತ್ತದೆ.

ಅಶೋಕವನಿಕಾ ಮಧ್ಯೆ ರಾಮನ ತಪಸ್ವಿನಿಯ
ಕಂಡಾಮೊದಲ್ಗೊಂಡು ಮೇಣಾಮಹೀಯನಿಯ
ವಾಗಮೃತಧಾರೆಯಂ ಸವಿದಾ ಮೊದಲ್ಗೊಂಡು
ಅನ್ಯಳಂತಿಹಳೆಮ್ಮ ಕನ್ಯೆ!

[ಶ್ರೀರಾಮಾಯಣದರ್ಶನಂ, ಪು-೪೫೮]

ಅನಲೆಯು ಸೀತೆಯ ಸಹವಾಸದಲ್ಲಿ ಅನ್ಯಳಾಗಿ ತೋರುತ್ತಿರುವುದು ನಿಜ. ಚಿಕ್ಕವಳಾದರೂ ಪ್ರಜ್ಞಾವಂತ ಮನಸ್ಸಿನ ತುಮುಲ ಮುಚ್ಚಿಟ್ಟುಕೊಳ್ಳಲು ಸಾಧ್ಯವೇ? ಅನಲೆಗೆ ಸೀತೆಯನ್ನು ತಂದಂದಿನಿಂದ ವಿಭೀಷಣ ತಂದೆಯ ಮಾನಸಿಕ ತುಮುಲದ ಅರಿವಾಗಿರುವುದರಿಂದಲೇ ತಂದೆಯನ್ನು ಸಂತೈಸುವಂತೆ ತನ್ನೊಳಗನ್ನು ಆಡುತ್ತಾರೆ:

"ಬೊಪ್ಪಯ್ಯ, ಮುಚ್ಚುವಿಕೆ ನನಗೆ
ನಿಮ್ಮಾತ್ಮಮಂ ಸುಡುತಿರ್ಪಳಲ ಬೇಗೆಯಂ?
ನನಗಿನ್ ಮಿಗಿಲ್ ದಃಖಿಗಳ್ ನೀಮ್, ಧರಾತ್ಮಜೆಯ
ದೆಸೆಗೆ! ಮರುಗಿಹಿರಿ ನೀಂ ಪಿರಿಯಯ್ಯಗಾಗಿಯಂ;
ಮತ್ತೆಮ್ಮ ಕುಲಕೆ ಕೀರ್ತಿ ದೇಶದವನತಿಗೆ
ಧರ್ಮಭ್ಯದಯಕಾಯುಂ......"

[ಶ್ರೀರಾಮಾಯಣದರ್ಶನಂ, ಪು-೪೫೮]

ಅನಲೆಯು ಚಿಕ್ಕವಳಾದರೂ ತನ್ನ ತಂದೆಯ ಮನಸ್ಸಿನ ತುಮುಲವನ್ನು ಅರಿತಿದ್ದಾಳೆ. ತಂದೆಯ ಉಭಯ ಸಂಕಟವು ಆಕೆಯಲ್ಲೂ ಮೂಡಿದೆ. ಧರ್ಮ, ಕೀರ್ತಿ, ಒಂದೆಡೆಯಾದರೆ ತನ್ನ ಒಡಹುಟ್ಟಿದವನ ಸ್ಥಿತಿ ಹಾಗೂ ಲಂಕಾ ಸಾಮ್ರಾಜ್ಯದ ಅವನತಿ ಒಂದೆಡೆ. ಈ ಉಭಯ ಸಂಕಟದಲ್ಲಿ ತತ್ತರಿಸಿರುವ ವಿಭೀಷಣನ ಮನಸ್ಸನ್ನು ಪೂರ್ಣ ತಿಳಿದಿರುವ ಅನಲೆ ಪ್ರೌಢೆಯಾಗಿ ತೋರುತ್ತಾಳೆ. ಈ ತುಮುಲ ಹೊಂದಿರುವ ಅನಲೆ ದೊಡ್ಡಪ್ಪನ ಮನಃ ಪರಿವರ್ತನೆಗೆ ಯೋಚಿಸದಿರುವಳೇ? ಸ್ವಭಾವಿಕವಾಗಿಯೇ ಆ ಕಾರ್ಯದಲ್ಲಿ ಅನಲೆ ಮುಂದಾಗುತ್ತಾಳೆ. ದೈತ್ಯ ಸಭೆಯಲ್ಲಿ ಎಲ್ಲರೂ ರಾವಣನ ಅಭಿಪ್ರಾಯಕ್ಕೆ ಪೂರಕವಾಗಿ ವರ್ತಿಸುತ್ತಾರೆ. ಆದರೆ ವಿಭೀಷಣನು ಧರ್ಮಜ್ಞ, ಈತನು ಸೀತೆಯನ್ನು ರಾಮನಿಗೆ ಒಪ್ಪಿಸಬೇಕೆಂದು ಲಂಕೆಯ ನಾಶವನ್ನು ತಡೆಯಬಹುದೆಂದು, ಲಂಕೆ ಸೀತೆಯ ಪಾತಿವ್ರತ್ಯದ ಮಂಜಿನಲ್ಲಿ ಕರಗಿಹೋಗುವುದು ನಿಶ್ಚಯವೆಂದು ನುಡಿದಾಗ ರಾವಣನ ಮನಸ್ಸು ತುಗುಯ್ಯಾಲೆಯಂತಾಗಿ ಸ್ತಿಮಿತವನ್ನು ಕಳೆದುಕೊಳ್ಳುತ್ತದೆ. ಅಸ್ವಸ್ಥನಂತೆ ಅರಮನೆಗೆ

ತೆರಳುವಂತೆ ಮಾಡುತ್ತದೆ. ರಾವಣನ ಶುಶ್ರೂಷೆಗೆ ಅನಲೆ ಬರುತ್ತಾಳೆ. ರಾವಣನ ಹೃದಯಕ್ಕೆ ತಂಪು ನೀಡುವ ವಾತ್ಸಲ್ಯಶಕ್ತಿ ಇರುವುದು ಅನಲಾಕುಮಾರಿಗೆ, ವಿಭೀಷಣ ಅಣ್ಣನ ಕ್ಷೇಮಕಾತರನಾಗಿ ರಾವಣನರಮನೆಗೆ ಬಂದಾಗ ಅವರಿಬ್ಬರ ನಡುವಿನ ಸಂಭಾಷಣೆಯು ಈ ಕಾವ್ಯದ ಪ್ರಮುಖ ಸನ್ನಿವೇಶವೆಂದೇ ಹೇಳಬಹುದು. ರಾವಣನು ನಿದ್ದೆಯಲ್ಲಿ ಎಚ್ಚರವಾದಾಗ ಅನಲೆಯ ಮುದ್ದುಮುಖ ನೋಡಿ ಸಂತಸಗೊಳ್ಳುತ್ತಾನೆ. 'ನೀ ನೆನ್ನನಗಲಿದೋಲೆನಗೊಂದು ಕನಸಾದುದಕ್ಕಾ"[೬೫] ಎನ್ನುವ ನುಡಿಗಳನ್ನು ನಗುತ್ತಾ ಹೇಳಿದರೂ ಕಂಬನಿ ತುಂಬಿರುತ್ತದೆ ಕಣ್ಣುಗಳಲ್ಲಿ ಅದನ್ನರಿತ ಅನಲೆ ಸಂತೈಸುತ್ತಾಳೆ.

" ನಿದ್ದೆಗೆಯ್,
ದೊಡ್ಡಯ್ಯ,ನಾನೆಲ್ಲಿಗೂ ತೆರಳ್ದೆನಿಲ್ಲೀಯೆಡೆಯೆ
ಇರ್ದಪೆನ್"

[ಶ್ರೀರಾಮಾಯಣದರ್ಶನಂ, ಪು-೫೬೫]

ರಾವಣನು ಅನಲೆಯನ್ನು ಎಷ್ಟು ಮಮತೆಯಿಂದ ಕಾಣುತ್ತಿದ್ದ, ಪ್ರೀತಿಸುತ್ತಿದ್ದ ಎಂಬುದಕ್ಕೆ ಸಾಕ್ಷಿ ಆತನಾಡುವ, ಮಾತುಗಳು:

"ದಿಟವೊರೆದೆ, ಅಕ್ಕ, ಆರ್ ತೊರೆದೊಡಂ
ನಿನೆನ್ನನುಳಿವಳಲ್ತು!"

[ಶ್ರೀರಾಮಾಯಣದರ್ಶನಂ, ಪು-೫೬೫].

ವಿಭೀಷಣ ಮತ್ತು ರಾವಣರ ನಡುವಿನ ಬಿಸಿಯಾದ ವಾದಗಳ ಘರ್ಷಣೆಯಾದಾಗ ದಿಕ್ಕೇ ತೋಚದೆ ಅಳುವವಳು ಅನಲೆ. ಈ ಸ್ಥಿತಿ ಕಂಡ ರಾವಣನು ಧಿಗ್ಗನೆಂದು ತನ್ನ ಆ ಪ್ರೀತಿಯ ಪುತ್ಥಳಿ ಅನಲೆಯನ್ನು ಬರಸೆಳೆದು ಅಪ್ಪಿ ಮುದ್ದಾಡುತ್ತಾನೆ. "ನನಗೆ ಸಾವು ಬಂದರೂ ನಿನಗೆ ನೋವಾಗುವಂತೆ ನಾನು ಮಾಡಲಾರೆ ಅಳಬೇಡ"[೬೬] ಎನ್ನುತ್ತಾನೆ. ಹಾಗೂ ವಿಭೀಷಣನಿಗೆ ಮನಬಿಚ್ಚಿನುಡಿಯುತ್ತಾನೆ:

" ಅನಲೆ
ನಿನ್ನ ಮಗಳಲ್ತೆನ್ನವಳ್! ಇವಳೆನ್ನ ಕಾಪಿಡುವ
ದೇವಿ!"

" ಪುಣ್ಯ ಪ್ರಚೋದಿಯೆನಗಿದೊಂದೆ
ಸೌಂದರ್ಯಮನೆಲೆಯೀ ಮುದ್ದುಚೆಲ್ವು!"

[ಶ್ರೀರಾಮಾಯಣದರ್ಶನಂ, ಪು-೫೬೬]

"ಕವಿಯೇ ಹೇಳುವಂತೆ ಹೆಣ್ಣು ಮಕ್ಕಳಿಲ್ಲದ ದಶಗ್ರೀವನೆದೆಯ ಅಕ್ಕರೆಯ ಅರಗಿಳಿಯ ಹರಣವನ್ನು ಪೊರೆಯುವ ಪಂಜರವಾಗಿದ್ದಳು ಅನಲೆ. ಉಳಿದೆಲ್ಲ ಸೌಂದರ್ಯವೂ ರಾವಣನಲ್ಲಿ

----------

೬೫. ಕುವೆಂಪು, ಶ್ರೀರಾಮಾಯಣದರ್ಶನಂ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು ೨, ಎರಡನೇ ಆವೃತ್ತಿ೨೦೦೪, ಪು.೫೬೪

೬೬. ಅದೇ. ಪು. ೫೬೬

ಕಾಮಪ್ರಚೋದನೆಯನ್ನು, ಪಾಪಪ್ರಚೋದನೆಯನ್ನು ಮಾಡಿದರೆ ಅನಲೆಯ ಮುದ್ದು ಚೆಲುವೊಂದೇ ಇಡೀ ಜಗತ್ತಿನಲ್ಲಿ ಅವನಿಗೆ ಪುಣ್ಯಪ್ರಚೋದಿನಿಯಾಗಿದ್ದುದು. ಎಲ್ಲೆಮೀರಿ ಹರಿಯುತ್ತಿದ್ದ ರಾವಣನ ಮೋಹಪ್ರವಾಹಕ್ಕೆ ಪುಣ್ಯದ ಅಡ್ಡಗಟ್ಟೆಯಾಗಿ, ಅವನೆದೆಯ ಕೆಸರು ಕೊಚ್ಚೆಯನ್ನೆಲ್ಲ ನಿರ್ಮಲ ತೀರ್ಥವಾಗಿ ಪರಿವರ್ತಿಸುವ ದೈವಿಕ ಕೃಪೆಯ ಮೂರ್ತಿಯಾಗಿ ನೈತಿಕ ಅವಲಂಬನೆಯಾಗಿ ಮಹತ್ವದ ಪಾತ್ರಧಾರಿಯಾಗಿದ್ದವಳು ಅನಲೆ".[೬೭]

ವಿಭೀಷಣನು ಲಂಕೆಯನ್ನು ತೊರೆಯಲು ನಿಶ್ಚಯಿಸಿದಾಗ ದೊಡ್ಡಯ್ಯನನ್ನು ಕಾಪಾಡುತ್ತಿದ್ದ ಧರ್ಮವೇ ಲಂಕೆಯನ್ನು ತೊರೆಯುತ್ತಿದೆ ಎನಿಸಿ ತಾನು ಧರ್ಮಕ್ಕಾಗಿ ತಂದೆಯ ಜೊತೆ ತೆರಳಲು ನಿಶ್ಚಯಿಸಿ ದೊಡ್ಡಪ್ಪನಿಗಾಡುವ ಮಾತುಗಳಿವು:

" ಮನ್ನಿಸೆನ್ನನ್; ತಂದೆಯೊಡವೋಗಿ ಧರ್ಮವನ್
ಸೇವಿಪೆನ್"
" ಇಲ್ಲಿರ್ದ ಧರ್ಮಕ್ಕೆ ಸೇವೆಗೆಯ್!"
" ಧರ್ಮಮಂ ಪೊರಗಟ್ಟಿ ಸೇವಿಪ್ಪುದೆಂತು?"
[ಶ್ರೀರಾಮಾಯಣದರ್ಶನಂ, ಪು-೩೭೯]

ಅನಲೆಯ ದಿಟ್ಟನುಡಿಗಳಿವು. ಧರ್ಮದ ಪರದೋರಣೆಯು ಆಕೆಯ ಮನೋಧರ್ಮದ ಗಟ್ಟಿತನವನ್ನು ಎತ್ತಿ ತೋರುತ್ತವೆ. ರಾವಣನು ಲಂಕೇಶ್ವರನಾದರೂ ಆತನ ಮುಂದೆ ನೇರವಾದ ನುಡಿಗಳನ್ನು ಇಟ್ಟು ದಿಟ್ಟತನದಿಂದ ಆಡಲು ಅನಲೆಗಲ್ಲದೆ ಇನ್ನಾರಿಗೆ ಸಾಧ್ಯ! ಆದರೆ ರಾವಣ ಅನಲೆಯನ್ನು ಬಿಟ್ಟಿರಲಾರದೆ ಆಕೆಯನ್ನು ಬೇಡುತ್ತಾನೆ:

ನನ್ನನ್ನರಂ?
ನಿನ್ನನ್ನರುಳಿಯೆ ಧರ್ಮಮುದ್ಧಾರಮಾದಪುದೆ?
ನಿನ್ನಯ್ಯಗಿಂ ಮಿಗಿಲ್ ನೀನ್‌ವೇಳ್ಕುಮೆನಗಲ್ತೆ!
[ಶ್ರೀರಾಮಾಯಣದರ್ಶನಂ, ಪು-೩೭೯]

ರಾವಣನ ಈ ಸ್ಥಿತಿಗೆ ಕರಗುವ ವಿಭೀಷಣನೇ ಮಗಳಿಗೆ ಲಂಕೆಯಲ್ಲಿ ಉಳಿಯುವಂತೆ ಅಪ್ಪಣೆ ಕೊಡುತ್ತಾನೆ.ಯಾರನ್ನೂ ಏನೂ ಬೇಡದವನು ಅನಲೆಗಾಗಿ ಬೇಡುತ್ತಾನೆ. ರಾವಣನ ಸ್ವಾಭಿಮಾನ ಉಡುಗಿ ಹೋಗ ದೈನ್ಯತೆ ಉಕ್ಕುತ್ತದೆ. ಇದು ಆತನ ಅಂತರಂಗವನ್ನು ಕರಗಿಸುವ, ಕದಲಿಸುವಾ, ವಾತ್ಸಲ್ಯಶಕ್ತಿ ಅನಲೆಗಿದೆ ಎಂದು ತಿಳಿಸುತ್ತದೆ.

ಅನಲೆಯು ಲಂಕಾನಗರಿಯ ಎಲ್ಲರ ಮನೆ ಮನಗಳಲ್ಲಿ ಸುಳಿದು ನಲಿದು ಅಕ್ಕರೆ ಪ್ರೀತಿಗಳನ್ನು ಪಡೆಯುತ್ತಳೆ. ಅಶೋಕವನಕ್ಕೂ ಕಾಲಿಟ್ಟು ಸೀತೆಯ ಮಾತೃವಾತ್ಸಲ್ಯ ಸವಿದ ಪುಣ್ಯವಂತೆ ಅನಲೆ. ಈಕೆ ಮಂಡೋದರಿಗೆ ಸೀತೆಯ ಅತಿಮಾನುಷ ಶಕ್ತಿಯನ್ನು ತಿಳಿಸುತ್ತಾಳೆ. ಸೀತೆಯು ಭೀಷ್ಮ ಮೌನಿಯಂತೆ, ಯೋಗಿನಿಯಂತೆ, ಕುಳಿತಿರುವಾಗ ಅನುಪಮ ಜ್ಯೋತಿಯೊಂದು

----------

೬೭. ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೩೭೩

ಪರ್ಣಶಾಲೆಯನ್ನು ಪ್ರವೇಶಿಸಿದುದನು, ಆಕೆ ಯಾರೋ ಅದೃಶ್ಯ ವ್ಯಕ್ತಿಯೊಡನೆ ಸಂವಾದಕ್ಕೆ ತೋಡಗಿದುದನ್ನು ಕಂಡು ಮೈಮರೆತುದನ್ನು ಹೇಳಿರುತ್ತಾಳೆ. ಸೀತೆಯ ಅತಿಮಾನುಷಸಿದ್ಧಿಯನ್ನು ಕಾಣುವ ಮಹಾಯೋಗ ಅನಲೆಯದಾಯಿತು. ಸತಿಯ ಬಾಯಿಂದ ಅನಲೆಯ ಮಹದ್ದರ್ಶನದ ಸಂಗತಿಯನ್ನು ಕೇಳಿದರೂ ರಾವಣನು ಸತಿಯನ್ನು ಸಂತೈಸಲು ಪ್ರಯತ್ನಿಸುತ್ತಾನೆ. ಸತ್ಯವನ್ನು ತಿಳಿದ ಅವನು ನಿಟ್ಟುಸಿರು ಬಿಟ್ಟರೂ; ತೋರಿಸಿಕೊಳ್ಳದ ರಾವಣನ ನುಡಿಗಳು:

ಅನಲೆ! ನಮಗನಲೆಯೇ ದಿಟಂ! ರಾಮಪಕ್ಷಕಾ
ತಂದೆ; ಸೀತೆಯ ಪಕ್ಷಕೀ ಮಗಳ್! ಇರ್ವರುಂ
ದ್ರೋಹಿಗಳ್! ಅಕ್ಕರೆಯ ನನಗಿಕ್ಕಿದುರಿಯಾಯ್ತು!
ಬೇಡವೆಂದೆನ್ ಬಿಡದೆ ಬೇಡಿದಳ್; ಕಾಡಿದಳ್
ನೋಡಿ ಬರುವಾಸೆಗಾಣತಿಯನಿತ್ತೆ ನೊಪ್ಪಿದನ್;
ಮಾಡಿದಳ್ ಮನೆಯನಶೋಕವನದೊಳ್! ಕಟ್ಟು
ಕತೆಗಳನ್ ಕಟ್ಟಿ, ಕಣ್ಣಾರೆ ಕಂಡುದೆನುತ್ತೆ,
ಮತಿಗೆಟ್ಟು ನಂಬುವಳ್; ನಂಬಿಸುವಳಿತರರಂ!

[ಶ್ರೀರಾಮಾಯಣದರ್ಶನಂ, ಪು–೬೫೦]

ರಾವಣನ ಮನಸ್ಸು ಪರಿವರ್ತಿಸುವ ಅನಲೆಯ ಬಗ್ಗೆ ಸಹೃದಯರ ಪ್ರೀತಿ ಹೆಚ್ಚುತ್ತದೆ. ಧರ್ಮಜ್ಞತೆ, ಛಲ, ಸೂಕ್ಷ್ಮ ತಿಳುವಳಿಕೆಗಳಿಂದ ತುಂಬಿದ ಅನಲೆಯು ಇತರರ ಮೇಲೆ ಪ್ರಭಾವ ಮುದ್ರೆ ಒತ್ತುವ ಚತುರೆ ಎಂಬುದು ರಾವಣನ ಮಾತುಗಳಿಂದಲೇ ತಿಳಿಯುತ್ತದೆ.

ಶ್ರೀರಾಮನಿಂದ ಹತನಾದ ಕುಂಭಕರ್ಣನು ಅನಲೆಯ ಪ್ರೀತಿಯ ಚಿಕ್ಕಪ್ಪ. ಅನಲೆ ತೀವ್ರಾಘಾತತಕ್ಕೆ ಒಳಗಾಗಿ ಚಿಕ್ಕ ತಂದೆಯ ಪ್ರೀತಿಯನ್ನು ನೆನೆದು ದುಃಖದಿಂದ ಗೋಳಾಡುತ್ತಾಳೆ. ಕುಂಭಕರ್ಣ ಮತ್ತು ಅನಲೆಯ ನಡುವೆ ಇದ್ದ ಬಾಂಧವ್ಯದ ಗಟ್ಟಿತನ ವ್ಯಕ್ತವಾಗುತ್ತದೆ. ತೀವ್ರದುಃಖಿಯಾದ ಅನಲೆಯು ಸಮಾಧಾನ ಪಡೆಯಲು ಸೀತೆಯಲ್ಲಿಗೆ ಬರುತ್ತಾಳೆ. ಸೀತೆ ವಾತ್ಸಲ್ಯದಿಂದ ಮುಂಡಾಡಿ ಅನಲೆಯ ಸ್ಥಿತಿಗೆ ಕನಿಕರಿಸಿ ಕಂಬನಿಮಿಡಿಯುತ್ತಾಳೆ. ಅನಲೆ ತನ್ನ ಶೋಕನಿಲ್ಲಿಸಿ ಸೀತೆಯ ಕಣ್ಣೊರೆಸುತ್ತಾಳೆ. ಸೀತೆಮಾತೆಯ ಹೃದಯದಲ್ಲಿ ಉರಿಯುತ್ತಿರುವ ಬೆಂಕಿ ಲಂಕೆಯನ್ನು ಸುಡುತ್ತಿರುವುದನ್ನು ಸ್ಪಷ್ಟವಾಗಿ ಅರಿತಿದ್ದ ಅನಲೆಯು ಸೀತೆಯ ಕಣ್ಣೀರು ಲೋಕ ವಿನಾಶಕಾರಿ ಎಂದು ಲಂಕೆಯನ್ನು ನಿರ್ನಾಮಗೊಳಿಸುತ್ತದೆಂದು ಅರಿತು ಸೀತೆಯ ಕಣ್ಣೀರನ್ನು ತಡೆಯುತ್ತಾಳೆ.

ತೀವ್ರ ಶೊಕದ ಸಮಯದಲ್ಲಿಯೂ ಅನಲೆ ಚತುರತೆಯ ಚುರುಕುನಿಂದ ವರ್ತಿಸುತ್ತಾಳೆ. " ಕುಂಭಕರ್ಣನು ಸಾವಿನಿಂದ ಜರ್ಝರಿತನಾದ ಲಂಕೇಶ್ವರನನ್ನು ಸಾಂತ್ವನಗೊಳಿಸುವ ಸಲುವಾಗಿ ಮೇಘನಾದ ಕೈಗೊಳ್ಳಲಿರುವ ಮಹಾಯಾಗದ ಸ್ವರೂಪವನ್ನು, ಭೀಕರ ಪರಿಣಾಮಗಳನ್ನು ಆಕೆ ಸೀತೆಗೆ ನಿವೇದಿಸುತ್ತಾಳೆ; ಅದನ್ನು ತಡೆಯುವುದಕ್ಕಾಗಿ ತಾನು ತಾರಾಕ್ಷಿ ಮಂಡೋದರಿ ಚಂದ್ರನಖಿ ಎಲ್ಲರೂ ನೆರವಾಗುವೆವೆಂದು ಹೇಳುತ್ತಾ ಆಕೆ ಮುಂದಿಡುವ ಪ್ರಶ್ನೆ ಅವಳ ಕಾರ್ಯಕಾರಣ ವಿವೇಕವನ್ನು ಹೃದಯದೊಳಗಿನ ನೈತಿಕ ಧೈರ್ಯವನ್ನು, ಸಾಂದರ್ಭಿಕ ಕ್ರಿಯಾಶೀಲತೆಯನ್ನು ಸೂಚಿಸುತ್ತವೆ; ಯಾಗಕ್ಕೆ ಅಡ್ಡಿಯಾದರೆ ಉದ್ಭವಿಸುವುದು ಸಣ್ಣ ಪ್ರಮಾನದ ನಷ್ಟ; ತಾತ್ಕಲಿಕ ನಷ್ಟ; ಯಾಗವು ಯಶಸ್ವಿಯಾದರೆ ಸಂಭವಿಸುವುದು ಬೃಹತ್ ಪ್ರಮಾಣದ ದೀರ್ಘಕಾಲಿಕವಾದ ನೈತಿಕವಾದ

ನಷ್ಟ. ಅನಲೆ ತನ್ನ ವೈಯಕ್ತಿಕ ಸ್ವಾರ್ಥವನ್ನು ತೊರೆದು ಸಮಷ್ಟಿ ಲಾಭವನ್ನು ಶುಭವನ್ನು ಹಾರೈಸುತ್ತಿದ್ದಾಳೆ ಎಂಬುದು ಗಮನಾರ್ಹ".[೬೮]

ಪೆಣ್

ತಟಸ್ಥಮಿರಲೇಕೆ ಗಂಡುಗಳಿಂತು ಮೈಮರೆತು
ಕ್ರೋಧ ಮೂರ್ಛಿತರಾಗಿ, ಸರ್ವನಾಶಕೆ ಮಲೆತು
ಪೆಣ್ ಪೆಣೆದು ನಿಲ್ಲಲ್!

[ಶ್ರೀರಾಮಾಯಣದರ್ಶನಂ, ಪು-೬೦೪]

ಅನಲೆ ಕೇಳುವ ಪ್ರಶ್ನೆ ಹಾಗೂ ಅದರಲ್ಲಿಡಗಿರುವ ಉತ್ತರ ಸಾರ್ವಕಾಲಿಕ, ಸರ್ವಮಾನ್ಯವಾದುದ್ದು. ಅನಲೆಯು ಸರ್ವಮಂಗಳವನ್ನು ಬಯಸುವ ಉದಾರಚೇತನ. ಆದ್ದರಿಂದಲೇ ಎಲ್ಲರ ಕಲ್ಯಾಣವನ್ನು ಒಟ್ಟಿಗೆ ಬಯಸಿರುವಂತೆ ಸೀತೆಯಲ್ಲಿ ದೊಡ್ಡಯ್ಯನ ಬಗ್ಗೆ ಕರುಣೆ ತೋರುವಂತೆ ಪ್ರಾರ್ಥಿಸುತ್ತಾಳೆ:

ದೊಡ್ಡಯ್ಯ ನಿಂದಿಲ್ಲಿಗೈತರಲ್, ನಮ್ಮಿದಿರ್
ತಾಯಾಗಿ ತೋರ್ಪವೊಲ್ ತೋರಿ, ಕಂದಂಗೆಂತೊ
ಅಂತೆ, ಹಿತವನೊರೆ ಸದ್ಬುದ್ಧಿಯಂ, ನಿಚ್ಚಮಂ
ನಿನ್ನನೆಯೆ ನೆನೆದಾತನಾತ್ಮಕ್ಕೆ ನಿನ್ನೊಂದು
ಪೊಳೆಯತೊಡಗಿದೆ ಮಹಿಮೆ ಮರುಗುವಂದದಿಮನಂ
ಕರುಗುವಂದದಿ ಹೃದಯವವನಂತರಾತ್ಮಮಂ
ಮಿಡಿದು ನುಡಿ, ದೇವಿ, ಬೀರದ ಪೆರ್ಮೆ ಕನಿಕರಕೆ
ಶರಣಪ್ಪವೋಲ್!

[ಶ್ರೀರಾಮಾಯಣದರ್ಶನಂ, ಪು-೬೦೫-೬]

ರಾವಣನ ಹೃದಯವನ್ನು ಅರಿತಿದ್ದ ಅನಲೆಯು ಲಂಕೇಶ್ವರನನ್ನು ಕನಿಕರದಿಂದ ನೋಡಿ ಮಾತೃವಾತ್ಸಲ್ಯ ನೀಡಿ ಉದ್ಧಾರಿಸಲು ಬೆಡು ಬೇಡುತ್ತಾಳೆ. ಮುಂದೆ ರಾವಣನಿಗಾಗುವ ದರ್ಶನಕ್ಕೆ ಇದೇ ಸೂಚನೆ ಮೇಘನಾದನ ಮರಣದಿಂದ ದುಃಖಿತಳಾಗಿ ಚಿತೆಯೇರಲು ನಿರ್ಧರಿಸಿದ ತಾರಾಕ್ಷಿಯನ್ನು ಸಮಾಧಾನಗೊಳಿಸಲು ಪ್ರಯತ್ನಿಸಿದವಳು. ರಾವಣನಿಗೆ ಸುದ್ದಿ ಮುಟ್ಟಿಸುವಳು ಅನಲೆ. ರಾವಣನು ಸೀತೆಯನ್ನು ಕೊನೆಯಬಾರಿಗೆ ನೋಡಲು ಬಂದು, ಮಾತನಾಡಿಸದೇ ಹೊಂದಕ್ಕೆ ಹೋದಾಗ ಧ್ಯಾನಸ್ಥಳಾದ ಸೀತೆ ತೆಗೆವ ಉದ್ಗಾರ ಅನಲೆಯ ಮಹಿಮೆಯನ್ನು ಸಾರುತ್ತವೆ; " ಫಲಿಸಿತನಲಾ ಪ್ರಾರ್ಥನಂ, ಬಾರನಿನ್ ಬಳಿಗವನ್ ಈ ಜನ್ಮದೊಳ್".[೬೯]

----------

೬೮. ಡಾ. ಎಚ್.ಜೆ. ಲಕ್ಕಪ್ಪಗೌಡ, ಶ್ರೀರಾಮಾಯಣದರ್ಶನಂ : ಪಾತ್ರಲೋಕ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬. ಪು.೩೬೬

೬೯. ಕುವೆಂಪು, ಶ್ರೀರಾಮಾಯಣದರ್ಶನಂ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು ೨, ಎರಡನೇ ಆವೃತ್ತಿ೨೦೦೪, ಪು.೬೫೩

ದೊಡ್ಡಯ್ಯನಾದ ರಾವಣನ ಮರಣವಾರ್ತೆ ತಿಳಿದು ತೀವ್ರದುಃಖನ ಅನುಭವಿಸುವ ಅನಲೆಯು ಬಹುಬೇಗನೆ ಚೇತರಿಸಿಕೊಂಡು ರಾಮಸೀತೆಯ ಸಮಾಗಮದ ಕಾತರತೆಯಿಂದ ವಿಭೀಷಣನೊಡನೆ ಸೀತೆಯಲ್ಲಿಗೆ ಧಾವಿಸಿ ಅವರಿಬ್ಬರ ಸಂವಾದಕ್ಕೆ ಸೇತುವೆಯಾಗುತ್ತಾಳೆ. ಸೀತೆಯು ರಾಮದರ್ಶನಕೆ ನಡೆಯುವಾಗ ಹಿಂಬಾಲಿಸುತ್ತಾಳೆ.

ಕೊನೆಯ ಬಾರಿಗೆ ಅನಲಾ ಕಾಣಿಸುವುದು ಆಕೆಯ ವ್ಯಕ್ತಿತ್ವದ ಪರಿಪೂರ್ಣತೆಯನ್ನು ತೋರಿಸುತ್ತದೆ. ಸೀತೆಯ ಅಗ್ನಿ ಪ್ರವೇಶ ಕಂಡು ದುಃಖಿಸಿದವಳಿಗೆ ರಾಮನು ಅಗ್ನಿ ಪ್ರವೇಶಮಾಡಿ ಸೀತೆಯೊಂದಿಗೆ ಶುಚಿಭೂತವಾಗಿ ಸೀತಾಹಸ್ತವನ್ನಿಡಿದು ಬಂದುದನ್ನು ಕಂಡು ಬೆರಗಾಗುತ್ತಾಳೆ. ರಾಮನ ಪಾದಗಳಿಗೆರಗಿ ತನ್ನ ಆತ್ಮನಿವೇದನೆ ಮಾಡಿಕೊಳ್ಳುತ್ತಾಳೆ.

" ದೇವಿಯಂ ನಿಂದಿಸಿದ ನಿನ್ನನೆನಿತೆನಿತೊ ನಾಂ
ಬಯ್ದೆನಯ್ 'ಹದಿಬದೆಯ ನನ್ನಿವುಗಿಸುವುದಿರಲಿ,
ತನ್ನಂ ಪರೀಕ್ಷಿಸುವರಾರೊ? ತಾನೇಂ ಪೊರೆತು
ದುರಿತ ದೋಷಕೆ?' ಎನುತೆ ಶಂಕಿಸಿದೆನಾನಿಂದೆ
ಭಸ್ಮವಾಯಿತು, ತಂದೆ ನೀನೊಡ್ಡಿದೀ ಚಿತೆಯ
ಲೋಕಪಾವಕ ಪವನ ಸುಖನಿಂದೆ; ಪೂಜ್ಯಯಂ
ಪಾಲಿಸುವ ನೆವದಿಂ ನೀನುಂ ಪರೀಕ್ಷಿತನಲಾ!"

[ಶ್ರೀರಾಮಾಯಣದರ್ಶನಂ, ಪು-೮೪೬]

ರಾಮಾಯಣ ಸೃಷ್ಠಿಯಾದನಂದಿನಿಂದ ಸೀತೆಯ ಅಗ್ನಿ ಪ್ರವೇಶ ಮಾತ್ರ ಕಂಡು ರಾಮನನ್ನು ಸಹೃದಯರು ಟೀಕಿಸುತ್ತಿದ್ದರು; ಅದಕ್ಕೆ ಸರಿಯಾದ ಪರಿಹಾರ ಸೃಷ್ಠಿಸಿರುವ ಕುವೆಂಪು ಅವರು ಸಹೃದಯರ ಭಾವವನ್ನು ಅನಲೆಯ ಮೂಲಕ ವ್ಯಕ್ತಪಡಿಸಿ ಆಕೆಯ ವ್ಯಕ್ತಿತ್ವದ ಪ್ರಾಮಾಣಿಕ ಪರಿಶುದ್ಧ ಅನಿಸಿಕೆಗೆ ಎಲ್ಲರ ಮುದ್ರೆಯನ್ನು ಒತ್ತಿಸುತ್ತಾರೆ.

ಕುವೆಂಪು ಅವರು ಸೃಜಿಸಿರುವ ಮಹತ್ವಪೂರ್ಣವಾದ ಪಾತ್ರ ಅನಲೆ. ರಾವಣನ 'ಹೆಣ್ಣು ಮಕ್ಕಳಿಲ್ಲದ ಹೃದಯಕ್ಕೆ' ಹತ್ತರವಾದವಳು ಅನಲೆ; ಲಂಕೆಯ ಪ್ರತಿಯೊಬ್ಬರ ಪ್ರೀತಿಯ ಕಣ್ಣಾದವಳು ಅನಲೆ: ಆಕೆಯಿಂದಲೇ ಎಲದಲರೆದೆಯಲ್ಲಿಯೂ ತಂಪು ಮೂಡುತ್ತದೆ. ರಾವಣನ ಬಗ್ಗೆ ಸೀತೆಗೆ ಕರುಣೆ ಮೂಡುತ್ತದೆ. ರಾವಣನ ಆತ್ಮ ಉದ್ಧಾರಕ್ಕೆ ಹಂಬಲಿಸುತ್ತದೆ. ಎಲ್ಲರ ನಡುವಿನ ಪ್ರೇಮ ಸೇತುವೆ ಅನಲೆ. 'ಶ್ರೀರಾಮಾಯಣದರ್ಶನಂ' ನಲ್ಲಿ ಮೂಡಿಬಂದಿರುವ ಅಪರೂಪದ ಪಾತ್ರವಿದು. ಸಹೃದಯರ ಸ್ಮೃತಿಯಲ್ಲಿ ಅಮರವಾಗುಳಿವ ಪಾತ್ರ ಅನಲೆಯದು. ಸರ್ವರ ಪ್ರೀತಿಗೆ ಪಾತ್ರಳಾಗಿ, ಪ್ರೇಮ ಸೇತುವೆಯಾಗಿ ಬಾಲೆಯಾದರೂ ವಯಸ್ಸಿಗೆ ಮೀರಿದ ಬುದ್ಧವಂತಿಕೆಯನ್ನು ಪ್ರದರ್ಶಿಸಿ ಎಲ್ಲರಲ್ಲಿ ಚೈತನ್ಯ ತುಂಬುವವಳು ಅನಲೆ.

೯. ತ್ರಿಜಟೆ

ರಾವಣನು ಸೀತೆಯನ್ನು ನೋಡಿಕೊಳ್ಳಲು ನೇಮಿಸಿದ್ದ ದಾಸಿಯರಲ್ಲಿ ತ್ರಿಜಟೆಯೂ ಒಬ್ಬಳು; ಈಕೆಯು ಸೀತೆಯ ಪ್ರೀತಿಯ ಪಾತ್ರವಾಗಿದ್ದ ದಾಸಿ; ಸೀತೆಯ ಒಡನಾಟದಿಂದ ರಾಕ್ಷಸತ್ವ ಅಳಿದು ಸಾತ್ವಿಕ ಸ್ತ್ರೀಯಾಗಿ ಮಾರ್ಪಟ್ಟಿರುತ್ತಾಳೆ. ರಾವಣ ಮತ್ತು ಸೀತೆಯ ನಡುವಿನ ಸಂಭಾಷಣೆಗೆ ತ್ರಿಜಟೆಯೇ ಮಧ್ಯವರ್ತಿ. ಸೀತೆಯನ್ನು ಕಣ್ಣಾಗಿ ಕಾಡುವ ಈಕೆ ಸೀತೆಯ ಬೇಕುಬೇಡಗಳನ್ನು ಗಮನಿಸುತ್ತಾಳೆ. ರಾವಣನು ಬರುವುದನ್ನು ಕಂಡು ಸೀತೆ ಭಯದಿಂದ ಕಂಪಿಸಿ ದುಃಖದಿಂದ ಕುಸಿದಾಗ ಆಕೆಯನ್ನು ಮೇಲೆತ್ತಿ ಉಪಚರಿಸುವಳು ತ್ರಿಜಟೆ. ಸೀತೆಯ ಈ ಸ್ಥಿತಿ ಕಂಡು ಕೋಪಗೊಂಡ ರಾವಣ ಕೋಪತೋರಿಸುವುದು ತ್ರಿಜಟೆಯ ಮೇಲೆ.

ನಿನ್ನ ಸೇವಾಫಲಮೊ
ಮೇಣ್ ಸ್ತ್ರೀ ಸಹಜ ಛಲವೊ? ದೇವಿಗೀ ಪಾಂಗಿದೇನ್
ತ್ರಿಜಟೆ?"

ಸೀತೆಯು ಕೊರಗಿ, ಸೊರಗಿ ಮಲಿನವಸ್ತ್ರಯಾಗಿದ್ದನ್ನು ಕಂಡು ಸಿಡಿಯುವ ರಾವಣನು ಎಲ್ಲಕ್ಕೂ ತ್ರಿಜಟೆಯನ್ನೇ ಗುರಿಮಾಡುತ್ತಾನೆ:

"ಸೀತೆಯೋ ಪ್ರೇತವೋ ಪೇಳ್,ತ್ರಿಜಟೆ
ನಿದ್ದೆ ಪಾಸಣಿಸು ಮೀಹಂಗಳಂ ಕಾಣದೀ
ಪೆಣ್ ಪೆಣ್ಣೊ? ಮೇಣ್ ಪೆಣ್ಣೊಡಲಿನಸ್ಥಿಪಂಜರವೋ?
ಬಿನ್ನನಿರ್ದೀಕೆ ಪೀಡಿಪೆಯೆನ್ನ ಹರಣಮನ್?
ಮಾಣ್ ಪ್ರೇತ ಮೌನಮಂ, ಪ್ರೇತಪರಿಚಾರಿಕೆ,
ಮಸಣಗೈಯ್ಯೆದಿಲೀ ಅಶೋಕವನಮಂ!

[ಶ್ರೀರಾಮಾಯಣದರ್ಶನಂ, ಪು-೪೮೩]

ಸೀತೆಯು ಸ್ಥಿತಿಗೆ ತ್ರಿಜಟೆಯೇ ಕಾರಣವೆಂಬಂತೆ ರಾವಣನು ಆಕೆಯನ್ನು ಹೀಯಾಳಿಸುತ್ತಾನೆ. 'ಮಸಣಗೈಯದಿರೀ ಅಶೋಕವನಮಂ' ಎಂದು ಕೋಪದಿಂದ ನುಡಿಯುತ್ತಾನೆ. ಪ್ರೇತ ಪರಿಚಾರಿಕೆ ಎಂದು ನೂಡಿದು ಸೀತೆಯನ್ನು ಚೆನ್ನಾಗಿ ಉಪಚರಿಸಲು ಎಚ್ಚರಿಸುತ್ತಾನೆ. ಸೀತೆಯನ್ನು ತನ್ನ ಅವಿನಯ ನಡೆತೆಗೆ ಕ್ಷಮೆ ಕೋರಿ ಈ ಆತ್ಮಹತ್ಯೆಯ ಪರಿ ವಿಪರೀತವಾಗಿವಾಯಿತೆಂದು; ಹೇಡಿಗಳಿಗಿದು ಭೂಷಣವೆಂದು ಹೇಳಿ ನಿನ್ನ ಈ ಅಕಾರ್ಯಗಳನ್ನು ಬಿಟ್ಟು, ವ್ಯರ್ಥ ಸಾಹಸವನ್ನು ಬಿಟ್ಟು ವಿವೇಕಿಯಂತೆ ಶರಣಾಗು ಎಂದು ಹೇಳುತ್ತಾನೆ. ಇಲ್ಲದ್ದನ್ನು ಹುಡುಕುವುದಕ್ಕಿಂತ ಇರುವುದರಲ್ಲಿ ಸುಖಿಸೆಂದು ಹೇಳಿ ಸೀತೆಗೆ ಕೋಪದ ಕಿಡಿ ಹೊತ್ತಿಸಿದ ರಾವಣನಿಗೆ ಸೀತೆ ನೇರವಾಗಿ ಉತ್ತರಿಸದೇ ದಾಸಿಯಾದ ತದರಿಜಟೆಯನ್ನು ಸಂಬೋಧಿಸಿ ಉತ್ತರಿಸುತ್ತಾಳೆ. ಇದು ಅವಳ ಪ್ರತಿರೋಧದ ಸಂಕೇತವಾಗಿ ಮೂಡಿಬಂದಿದೆ.

" ಪೇಳ್, ತ್ರಿಜಟೆ
ಪಿತ್ತೋತ್ಪನ್ನ ಜಲಕುತ್ತರವಿದಂ ನಿನ್ನ
ಅನ್ನದಾತಂಗೆ: ಕತ್ತೆಯ ತತ್ವಮಂ ಕತ್ತೆ
ಕತ್ತೆಗಳ್ಗುಪದೇಶಿಸಲೇಳ್ಗುಮಲ್ಲದೆಯೆ

ಉತ್ತರದು ರಘಕುಲೋತ್ತಮನ ಸತಿಯ ಮುಂದದಂ
ಗಳಪಲ್ ಪ್ರಯೋಜನಮೆ?

[ಶ್ರೀರಾಮಾಯಣದರ್ಶನಂ, ಪು-೪೯೦]

ರಾವಣನ್ನು ಕತ್ತೆಗೆ ಹೋಲಿಸಿ ಮಾತನಾಡುವ ಸೀತೆಯು ತ್ರಿಜಟೆಯನ್ನು ಸಂಬೋಧಿಸಿ ರಾವಣನಿಗೆ ಉತ್ತರಿಸುವಂತೆಯೇ ರಾವಣ ಕೂಡ ತ್ರಿಜಟೆಯನ್ನೇ ಮುಂದಿಟ್ಟುಕೊಂಡು ಸೀತೆಗೆ ಲಂಕೇಶ್ವರನಾಜ್ಞೆ ಎಂದು ತಿಳಿಸುತ್ತಾನೆ. ರಾವಣ ಸೀತೆಯ ಸಂಭಾಷಣೆ ಎಂಬ ಕತ್ತರಿಗೆ ಸಿಕ್ಕುವ ಅಡಿಕೆ ತ್ರಿಜಟೆ. ಇಬ್ಬರು ಮಹೋನ್ನತರ ನಡುವೆ ನಿಲ್ಲುವ ತ್ರಿಜಟೆಯು ಇಬ್ಬರ ಆಜ್ಞಾಪಾಲಕಿ.

ರಾವಣನ ಮನಸ್ಸನ್ನು ಆತನ ವರ್ತನೆಗಳನ್ನು ತ್ರಿಜಟೆಯು ಸೂಕ್ಷ್ಮವಾಗಿ ಅರಿತಿದ್ದಳೆಂಬುದಕ್ಕೆ ನಿದರ್ಶನ ಆಕೆಯು ರಾವಣನ ಬಗ್ಗೆ ಸೀತೆಯೋಂದಿಗೆ ಆಡುವ ಮಾತುಗಳು:

" ಕಾಮುಕನಪ್ಪೊಡಂ ಮೆಚ್ಚಿ
ಬಗೆಸೋಲ್ತರನಲ್ಲದೆಯೆ ಸೋಂಕನಾವಗಂ;
ಕಠಿಣನಾದೊಡವ ಸಂಸ್ಕೃತನಲ್ತು; ನಾರಿಯಂ
ಮೀರಿ ಕೂಡುವ ಪೇಡಿಯಲ್ತು; ಪೌರುಷಶಾಲಿ
ತಾನಾವಗಂ!"

[ಶ್ರೀರಾಮಾಯಣದರ್ಶನಂ, ಪು-೪೯೨]

ಈ ಮಾತುಗಳು ರಾವಣನ ಹಿರಿಮೆಯನ್ನು ಎತ್ತಿತೋರುತ್ತವೆ. ರಾವಣನು ಕಾಮಿಯಾದರೂ ಬಲತ್ಕಾರದಿಂದ ಎಳೆತಂದರೂ, ಬಲವಂತದಿಂದ ಕೂಡುವವನಲ್ಲವೆಂದು ಆತನು ಸುಸಂಸ್ಕೃತನೆಂದು, ಹೇಡಿಯಲ್ಲವೆಂದು, ತ್ರಿಜಟೆ ಸೀತೆಗೆ ಸತ್ಯವನ್ನು ತಿಳಿಸುತ್ತಾಳೆ. ಚಂದ್ರನಖಿಯನ್ನು ಉದ್ದಾರಿಸಿ ಧವಳಮಾರ್ಗಕ್ಕೆ ತಂದ ನೀನು ನಿನ್ನನ್ನು ಉದ್ಧಾರಿಸಿಕೊಳ್ಳುವ ಕಾಲ ದೂರವಿಲ್ಲವೆಂದು ಸಂತೈಸಿ ತನ್ನ ಸ್ವಪ್ನಸಾಕ್ಷಿಯನ್ನು ಮುಂದಿಡುತ್ತಾಳೆ. ಶುಭಶಕುನದ ಕನಸಿನ ವಾರ್ತೆ ತಿಳಿಸಿದ ಸಖಿಯು ಸೀತೆಗೆ ಆಪ್ತಳಾಗಲೇ ಬೇಕಲ್ಲವೇ? ಸೀತೆಯು ನಂಬಿದ್ದ ಲಂಕೆಯ ಅತ್ಯಲ್ಪ ಜನರಲ್ಲಿ ತ್ರಿಜಟೆಯೇ ಪ್ರಮುಖಳು. ಅದಕ್ಕೆ ಸೀತೆಯ ಮಾತುಗಳೇ ಸಾಕ್ಷಿ;

"ನಿನ್ನನ್ನರಿಂ ಸುಕ್ಷೇಮಮೀಲಂಕೆ
ತ್ರಿಜಟೆ, ರಾಕ್ಷಸ ನೀಚನಪವಚನ ನಿಚಯಮಂ
ನೂಂಕಿ, ಭೀರುಗೆ ಧೈರ್ಯಮಂ ನೀಡಿತಯ್ ನಿನ್ನ
ವಾಣಿ, ಕನಸಿಗೆ ಮಿಗಿಲ್, ನಿನ್ನ ಹರುಷಮೆ ನನಗೆ
ಕೊಟ್ಟಪುದು ಕಲ್ಯಾಣಮಂ"

[ಶ್ರೀರಾಮಾಯಣದರ್ಶನಂ, ಪು-೪೯೩]

ಸೀತೆಗೆ ಧೈರ್ಯ ತುಂಬಿ ಬದುಕಿನ ಆಸೆ ಹುಟ್ಟಿಸುವ ತ್ರಿಜಟೆಯು ಸೀತೆಯ ಆತ್ಮಸಖಿಯಾಗಿ ಮಾರ್ಪಡುತ್ತಾಳೆ. ಪ್ರೀತಿಯಲ್ಲಿ ಸೀತೆಗೆ ತೀರ್ಥಪ್ರಸಾದ ಫಲಜಲಗಳನ್ನು ಕೊಟ್ಟು ಭಕ್ತಿಯಿಂದ

ಉಪಚರಿಸಿ ಮಂಗಳವನ್ನು ಗಾರೈಸುತ್ತಾಳೆ. ಸೀತೆಯ ಜೊತೆ ಸದಾ ಇದ್ದರೂ ಆಕೆಯ ಸ್ವತಂತ್ರ್ಯಕ್ಕೆ ಅಡ್ಡಿಬಾರದ ಈಕೆ ಎಚ್ಚರಿಕೆಯ ಮಾತುಗಳನ್ನಾಡುವುದನ್ನು ಮರೆಯುವುದಿಲ್ಲ:

" ಸುತ್ತಲುಂ
ಕಾಪಿರ್ಪುದಂ ನೆನೆದು ನೆನೆಯದಿರಕಾರ್ಯಮಂ,
ದೇವಿ. ನಿನ್ನ ಹರಣಕ್ಕೊತ್ತೆಯಿಟ್ಟಹೆನೆನ್ನ
ಹರಣಮಂ. ನಿನ್ನುಸಿರುಗೇನಾದೊಡಂ ಕೇಡು
ಸಂಭವಿಸೆ, ನೇಲುವುದು ನನ್ನ ಪೆಣಮದರ ಬಳಿ;
ತಿಳಿ, ಮಗಳೆ!"

[ಶ್ರೀರಾಮಾಯಣದರ್ಶನಂ, ಪು-]

ಸೀತೆಗೆ ಎಚ್ಚರಿಕೆಯಿಂದಿರಲು ಹೇಳುವ ತ್ರಿಜಟೆಯು ತನ್ನ ಉಸಿರೆಂದು ತಿಳಿದು ಸೀತೆಯನ್ನು ಸೇವಿಸುತ್ತಾಳೆ. ತಾಯಿ ವಾತ್ಸಲ್ಯದಿಂದ ತುಂಬಿ ಮಗಳನ್ನು ಉಪಚರಿಸುತ್ತಾಳೆ. ಆಂಜನೇಯನು ಲಂಕೆಯನ್ನು ಧೂಪರೂಪದಲ್ಲಿ ಪ್ರವೇಶಿಸಿರುವುದು ತಳಿಯದ ಲಂಕಾಜನರು ದೆವ್ವದ ಭೂತದ ಕಾಟವೆಂದು ಕಥೆಕಟ್ಟುವಾಗ ಸೀತೆಗೆ ಹನುಮಂತನ ಆಗಮನದಿಂದ ರಾಮನ ಶುಭವಾರ್ತೆ ತಿಳಿದು ಸಂತಸ ಉಂಟಾಗುತ್ತದೆ. ಮಂಗಳ ಶುಭ ಸೂಚನೆಗಳು ತಿಳಿಯುತ್ತವೆ. ಇವಾವುದನ್ನು ಅರಿಯದ ತ್ರಿಜಟೆಯು ದೈತ್ಯೇಂದ್ರನ ಆಳುಗಳು ಭೂತವನ್ನು ಹುಡುಕುತ್ತ ಅಶೋಕವನ ಹೊಕ್ಕಿರುವುದನ್ನು ಅರಿತು ಸೀತಯನ್ನು ಸುರರಕ್ಷಿತ ಸ್ಥಳಕ್ಕೆ ಕರೆತಂದು ಲಂಕೆಯಲ್ಲಿ ಇರುಳಿನಿಂದಲೂ ನಡೆಯುತ್ತಿರುವ ಆವಾಂತರಗಳನ್ನು ಸೀತೆಗೆ ನಿವೇದಿಸುತ್ತಾಳೆ. ಸೀತೆಯು ತ್ರಿಜಟೆಯನ್ನು ಸಮಾಧಾನಪಡಿಸುತ್ತಾಳೆ:

" ಬೆದರದಿರ್,
ರಾಕ್ಷಸೋತ್ತಮ ಭಗಿನಿ; ಭೂತಮಲ್ತದು,ದಿಟಂ
ಧರ್ಮಮಟ್ಟಿದ ದೇವಧೂತಂ!"

[ಶ್ರೀರಾಮಾಯಣದರ್ಶನಂ, ಪು-]

ಸೀತೆಯು ತ್ರಿಜಟೆಗೆ ನಿಜವನ್ನೇ ಹೇಳಿದರೂ ತ್ರಿಜಟೆಗೆ ಅರ್ಥವಾಗದು; ಆಕೆ ವಾಯುರೌಂದ್ರತೆಯನ್ನು ತೋರಿಸುತ್ತಾಳೆ. ಸೀತೆಯನ್ನು ನರಕ್ಷಿಸಲು ಮುಂದಾಗುತ್ತಾಳೆ. ತ್ರಿಜಟೆ ಅಣಿಮಾಡಿದ ಫಲಗಳನ್ನು ಅಂದು ಸೀತೆಯು ಆತ್ಮತೃಪ್ತಿಯಿಂದ ಸವಿಯುತ್ತಾ ದಿನದಿನಕ್ಕಿಂತ ಹೆಚ್ಚಾಗಿ ತಿನ್ನುವುದನ್ನು ಬೆರಗಿನಿಂದಲೇ ನೋಡಿ ತಾಯಿ ಹೃದಯತೃಪ್ತಿಗೊಳ್ಳುವಂತೆ ತ್ರಿಜಟೆಯು ತೃಪಿಗೊಳ್ಳುತ್ತಾಳೆ.

ಯುದ್ಧದ ವಿವರಗಳನ್ನು ಸೀತೆಗೆ ತಿಳಿಸುತ್ತಿದ್ದವರು ಇಬ್ಬರು. ಅವರೆಂದರೆ ಅನಲೆ ಮತ್ತು ತ್ರಿಜಟೆ. ತ್ರಿಜಟೆಯು ಬುದ್ಧಿವಂತಳು ಹಾಗೂ ಎಲ್ಲವನ್ನು ಯೋಚಿಸುವ ಚತುರೆ ಎಂಬುದು ಯುದ್ಧ ವಿವರ ತಿಳಿಸುವಾಗಲೇ ಅರಿವಾಗುತ್ತದೆ. ಯುದ್ಧದ ಸಾವಿ ನೋವುಗಳ ಕಹಿಯನ್ನು ಉಂಡವಳು ಸೀತೆಗೆ ಅದರ ಆಳವನ್ನು ವಿವರಿಸುತ್ತಾಳೆ.

ಧೂಮದ ದುಶ್ಯಕುನ ಕಂಡಂತೆ ಬೆದರಿದ ಭೂಮಿಸುತೆ ಸೀತೆಯು ಆಕಾಶಮುಟ್ಟುತ್ತಿರುವ ಆ ಧೂಮದ ಬಗ್ಗೆ ದುಃಖಿನಿಯಾಗಿದ್ದ ತ್ರಿಜಟೆಯಲ್ಲಿ ಕೇಳುತ್ತಾಳೆ. ತ್ರಿಜಟೆಯು ತಂದೆಯನ್ನು

ಕಳೆದುಕೊಂಡು ನೋವಿನಲ್ಲಿ ಬೇಯುತ್ತಿದ್ದರೂ ತೋರಗೊಡದೆ ಸಂಗ್ರಾಮದ ವಿಶ್ರಾಂತ ಸಮಯವೆಂದೂ ಕಾಳಗದಲ್ಲಿ ಸತ್ತವರನ್ನು ಸುಡುತ್ತಿರುವರೆಂದೂ ಸೀತೆಗೆ ಹೇಳುತ್ತಾಳೆ. ತ್ರಿಜಟೆಯ ಬಾಯಿಂದ ಅಚಾನಕವಾಗಿ ಹೊರಬರುವ ನುಡಿಗಳು ಲಂಕೆಯ ವರ್ಣನೆಯನ್ನೇ ಮಾಡಿ; ಶೋಕ ಸಾಗರದ ಕಟ್ಟೆಯೊಡೆದು ಪ್ರವಾಹದಿಂದ ಲಂಕೆ ಕೊಚ್ಚಿ ಹೋಗುವುದನ್ನು ಸೀತೆಗೆ ಅರಿವು ಮೂಡಿಸುತ್ತವೆ.

"ನಮ್ಮವರ್ ನಿಮ್ಮವರ್ ಮಡಿದ ತಂತಮ್ಮರಂ
ಕಡಲದಂಡೆಗೆ ಪೊತ್ತು, ಪೆಣಬಣಬೆಗಳನೊಟ್ಟೆ,
ಸುಡುತಿಹರ್, ಅದೆ ನಿನಗೆ ಕಾಣ್ಬಾಗಸಕ್ಕೇವ;
ಪೊಗೆಯ ಕೇರ್; ಪಿತೃಲೋಕಕಾತ್ಮಗಳನುಯ್ವತೇರ್!
ಅದೆ ಕೇಳ್ವರೋದನಂ! ಮೇಣ್ ಮಸಣದೋಲಗಂ!
ಲಂಕೆ ಅಳುತಿದೆ,ಮನೆಮನೆಯೊಳುಂ,ಇಂದು:ಮಗನ್
ಮಡಿದ ತಾಯ್; ಪತಿತೀರ್ದಪೆಣ್;ತಂದೆಯಳಿದಿದ್ದ
ಕಂದನ್; ಅಣ್ಣಂಗಳುವ ತಂಗೆ! ಆ ಗೋಳನಾರ್
ಕೇಳ್ವರೌ?........

[ಶ್ರೀರಾಮಾಯಣದರ್ಶನಂ, ಪು-೬೯೭]

ತ್ರಿಜಟೆಯು ತೀವ್ರದುಃಖದಿಂದಾಡುವ ಈ ಮಾತುಗಳು ಲಂಕೆಯ ಭೀಕರವಾದ ಸನ್ನಿವೇಶವನ್ನು ಸಹೃದಯರಿಗೆ ಕಟ್ಟಿಕೊಡುವುದು ಮಾತ್ರವಲ್ಲದೆ ಯುದ್ಧದಿಂದಾಗುವ ಸಾವುನೋವುಗಳ ಚಿತ್ರಣ ಮಾಡುತ್ತದೆ; ಅಲ್ಲದೆ ಮಹಾಪುರುಷರಿಗಾಗಿ ಹೋರಾಡುವ ಸಾಮಾನ್ಯ ಜನರ ಬಲಿದಾನ; ಹೆಂಡತಿ,ತಾಯಿ, ತಂಗೆ, ಮಕ್ಕಳು ಅನಾಥರಾಗಿ ಸಾವಿನ ಕರಿನೆರಳ ಭೀತಿಯಲ್ಲಿ ಬಳಲುವ ಕುಟುಂಬಗಳ ಬಗ್ಗೆ ಅನುಕಂಪ ಹುಟ್ಟಿಸಿ ಎಲ್ಲರ ಕಣ್ ತೆರೆಸುವ ಪ್ರಯತ್ನವಿದೆ.

ತನ್ನ ಸಂಸಾರ ಕೂಡ ಯುದ್ಧದ ಉರಿಯಲ್ಲಿ ಬೇಯುತ್ತಿರುವ ನೋವನ್ನು ತೋಡಿಕೊಳ್ಳುವ ತ್ರಿಜಟೆಯು ಸೀತೆಯೇ ಇದಕ್ಕೆ ಮೂಲಕಾರಣವೆಂದು ಬಗೆದು ಕಿಡಿನುಡಿಗಳನ್ನಾಡುತ್ತಾಳೆ.

"ನಾಳೆ ಇನ್
ನನಗೇನೊ? ನಿನ್ನ ಸೇವೆಯೆಗತಿಯೊ? ಮುಂದೆನಗೆ
ಪತಿಯ ಸೇವೆಯ ಪುಣ್ಯಮೇನೊಳದೊ? ಏನಾತಾಯಿ,
ನಿನ್ನೊರ್ವಳಿಂದೆ ಏನೇನಪ್ಪುದಿರ್ಕುಮೋ
ಆರಾರ್ಗೆ?"

[ಶ್ರೀರಾಮಾಯಣದರ್ಶನಂ, ಪು-೬೯೮]

ತ್ರಿಜಟೆಯಿಂದ ಈ ಮಾತುಗಳನ್ನು ಕೇಳಿ ದುಃಖಗೊಳ್ಳುವ ಸೀತೆ ತನ್ನ ಆತ್ಮ ವಿವೇಚನೆಯನ್ನು ತಾನೇ ಮಾಡಿಕೊಳ್ಳುತ್ತಾಳೆ. ಭೂಗರ್ಭದಿಂದ ಹುಟ್ಟಿದ ನಾನು ಲೋಕದ ಶೋಕವನ್ನೆಲ್ಲ ತಂದು ರಾಮನಿಗೆ ತೂಗುಮಂಚವನಿಕ್ಕಿದೆ"[೨೦] ನನ್ನ ದೆಸೆಯಿಂದ ಲಂಕೆಯ ಹಾಗೂ

----------

೨೦. ಕುವೆಂಪು, ಶ್ರೀರಾಮಾಯಣದರ್ಶನಂ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು ೨, ಎರಡನೇ ಆವೃತ್ತಿ ೨೦೦೪, ಪು.೬೯೯

ಕಿಷ್ಕಿಂದೆಯ ಅದೆಷ್ಟೋ ಮಂಗಳಸೂತ್ರಗಳು ಭಾಗವಾಗಿಯೋ ಎಂದು ಶೋಕಿಸುತ್ತಾಳೆ. ವಿಧಿಯ ಸೂತ್ರದ ಜಗಜ್ಜಾಲದಲ್ಲಿ ವ್ಯಕ್ತಿಗಳು ನೆಪಮಾತ್ರವೆಂದು ಸಮಾಧಾನಿಸಿಕೊಂಡು ತ್ರಿಜಟೆಗೆ ರಕ್ಷೆ ಕಟ್ಟುವ ವಚನವೀಯುತ್ತಾಳೆ:

"ತ್ರಿಜಟೆ,
ನನ್ನ ಮಾಂಗಲ್ಯಮಂ ಪಣವಿಟ್ಟು ಪೇಳ್ವೆನೀ
ಪೂಣ್ಕೆಯಂ; ನಿನಗೆ ವೈಧವ್ಯಮಾದಂದೆನಗೆ
ವೈಧವ್ಯವೆಂದು ತಿಳಿ! ಆ ಭೀತಿಯಂ ಬಿಡು,ಕೆಳದಿ.
ನಾಳೆ ರಣಮೆನಿತು ಘೋರತರಮಕ್ಕೆ ಮೇಣ್ ಎನ್ನಪತಿ
ಬ್ರಹ್ಮಾಸ್ತ್ರವನೆ ತುಡುಗೆ, ನಿನ್ನಯ್ದೆದಾಳಿ ತಾನ್
ಒಂದಿನಿತಲುಗದಿರ್ಕೆ!"

[ಶ್ರೀರಾಮಾಯಣದರ್ಶನಂ, ಪು-೭೯೯]

ಈ ರೀತಿ ಪ್ರತಿಜ್ಞೆಯನ್ನು ಉತ್ತಮ ರಘುಕುಲದ ಸ್ತ್ರೀಯಾದ ಸೀತೆ ತನ್ನ ಪ್ರಿಯ ಸಖಿಗಾಗಿ ಮಾಡುತ್ತಾಳೆ. ತ್ರಿಜಟೆಯ ತಾಳಿಯ ರಕ್ಷಣೆಗೆ ತನ್ನ ತಾಳಿಯ ಭಾಗ್ಯವನ್ನು ಪಣವಾಗಿಡುತ್ತಾಳೆ. ತ್ರಿಜಟೆಗೆ ತನ್ನ ತಪ್ಪಿನರಿವಾಗಿ ಕ್ಷಮೆಯಾಚಿಸಿ " ಮಹಿಮೆ ಮೈದೋರಲೋಸುಗಂ ಮಡಿದರಾ ಸಾವೊಂದು ಸಾವೇ? ಬರ್ದುಕಿಗೆ ಮಿಗಿಲ್ ಅಮೃತಮಲ್ತೆ!"೭೦ ಎಂಬ ಮಹಾವಾಕ್ಯ ನುಡಿದು ಸೀತೆಯನ್ನೇ ಬೆರಗುಗೊಳಿಸುತ್ತಾಳೆ. ಸೀತೆಯು ನೀನೆಲ್ಲಿ ಕಲಿತೆ ಎಂದು ಪ್ರಶ್ನಿಸಿದಕ್ಕೆ ಕೊಡುವ ಉತ್ತರವು ತ್ರಿಜಟೆಯ ವ್ಯಕ್ತಿತ್ವವೂ ಸೀತೆಯ ವ್ಯಕ್ತಿತ್ವದೊಡನೆ ಸೇರಿ ಪೂರ್ಣಪ್ರಕಾಶ ತಳೆದಿರುವುದನ್ನು ಅರಿವಾಗಿಸುತ್ತಾದೆ.

" ನೀನೆ ಗುರುವಲ್ತೆ?"
ತ್ರಿಜಟೆಯೆಂದಳ್ ಧನ್ಯಭಾವದಿಂ" ನಿನ್ನೊಡನೆ
ಇನಿತು ದಿನಮಿರ್ದು ನಿನ್ನಂ ಸೇವೆಗೆಯ್ದುದೇನ್
ಬರಯ ದಾಸ್ಯಮೆ? ತಪಂ ತಾನಲ್ತೆ? ನುಡಿಗೇಳ್ದು,
ನಡೆನೋಳ್ದು, ಸಾನಿಧ್ಯದೊಳೆ ಪಗಲಿರುಳುಮಳ್ದು
ಪೂರ್ವಜನ್ಮದ ಪುಣ್ಯದಿ ನಿನ್ನನ್ನರಿವ
ಕೃಪೆಯೊದಗಿದೆನಗೆ, ಪೇಳ್, ಅಂತು ನುಡಿವನಿತದೇನ್
ಪರಿದೇ?"

[ಶ್ರೀರಾಮಾಯಣದರ್ಶನಂ, ಪು-೭೯೯-೭೦೦]

ತ್ರಿಜಟೆಯು ಸೀತೆಯನ್ನೇ ಗುರುವೆಂದುಕೊಂಡು, ಆಕೆಯ ಸೇವೆಯನ್ನೇ ತಪಸ್ಸೆಂದುಕೊಂಡು ಸೀತೆಯನ್ನರಿವ ಪ್ರಯತ್ನ ಮಾಡಿರುವುದನ್ನು; ' ಹೂವಿನೊಂದಿಗೆ ನಾರು ಸ್ವರ್ಗಸೇರುವಂತೆ' ಸೀತೆಯಿಂದ ತ್ರಿಜಟೆಯು ಮಹೋನ್ನತಿ ಪಡೆದಿರುವುದು ವೇದ್ಯವಾಗುತ್ತದೆ. ತ್ರಿಜಟೆಯ ಹಿರಿತನ, ಧ್ವನಿಪೂರ್ಣ ಮಂಗಳ ಮಾತುಗಳು ಸೀತೆಯನ್ನು ಮೆಚ್ಚಿಸುತ್ತವೆ. ಮಹಾಪತಿವ್ರತೆ ಸೀತೆ ' ತ್ರಿಜಟೆಯ ತಾಳಿಭಾಗ್ಯಕ್ಕೆ' ತನ್ನ ಸೌಭಾಗ್ಯವನ್ನೇ ಫಣವಾಗಿಸಿದಳೆಂದರೆ; ತ್ರಿಜಟೆಯು ಸೀತೆಯೊಂದಿಗೆ ಬೆಳೆಸಿಕೊಂಡಿದ್ದ ಆತ್ಮಾನುಬಂಧದ ಅರಿವಾಗುತ್ತದೆ ಹಾಗೂ ತ್ರಿಜಟೆಯ ತಪಸ್ಸಿಗೆ, ಪರಿಶುದ್ಧತೆಗೆ ಸಿಕ್ಕಫಲವಾಗಿದೆ. ಆದ್ದರಿಂದಲೇ 'ಶ್ರೀರಾಮಾಯಣದರ್ಶನಂ' ನಲ್ಲಿ ಬರುವ ಒಂದು ಚಿಕ್ಕ ಪಾತ್ರವಾದರೂ ತನ್ನ ಆತ್ಮೋನ್ನತಿಯಿಂದ ಸಹೃದಯರ ಮನದಲ್ಲಿ ನಿಲ್ಲುತ್ತದೆ.

## ೧೦. ಧಾನ್ಯಮಾಲಿನಿ

ಶ್ರೀ 'ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ 'ಧಾನ್ಯಮಾಲಿನಿ' ಯಾರು? ಎಂಬುದರ ಬಗ್ಗೆ ಸ್ಪಷ್ಟವಾದ ಸೂಚನೆಗಳಿಲ್ಲ. ಕಾವ್ಯದಲ್ಲಿ ಈಕೆ ಕಾಣಿಸಿಕೊಳ್ಳುವುದು ಕೇವಲ ಎರಡೇ ಬಾರಿ. ಅವೆರಡೂ ಅದ್ಭುತವಾದ ಪ್ರಸಂಗಗಳೇ. ರಾವಣನ ಉಪಪತ್ನಿ ಕಿರುರಾಣಿ ಎಂದಷ್ಟೇ ನಮಗೆ ತಿಳಿಯುವುದು. ಸಂದರ್ಭಾನುಸಾರವಾಗಿ ಆಕೆಯ ಜೀವನದ ವಿವರಗಳು ಬಿಚ್ಚಿಕೊಳ್ಳುತ್ತವೆ. ಕುವೆಂಪು ಅವರು ರಹಸ್ಯಗಳ ಅನಾವರಣಕ್ಕೆ ಸಾಮಾನ್ಯರ ಸಂಭಾಷಣೆಯಲ್ಲಿಯೇ ನಡೆದಿರಬಹುದಾದ ಘಟನೆಗಳ ಪರಿಕಲ್ಪನೆಯನ್ನು ಮೂಡಿಸುತ್ತಾರೆ. ಇದು ಮಹಾಕವಿ ಕುವೆಂಪು ಅವರ ಕಥಾರಚನಾ ವೈಶಿಷ್ಟ್ಯ.

ಧಾನ್ಯಮಾಲಿನಿಯ ಪ್ರಥಮ ದರ್ಶನವಾಗುವುದು ಸೀತೆಯನ್ನು ರಾವಣನು ಕದ್ದೊಯ್ದು ಇಟ್ಟಿರುವ ಅಶೋಕವನದಲ್ಲಿ ಅದೂ ರಾವಣನ ಜೊತೆಯಲ್ಲಿರುವಾಗ; ಸೀತೆಯು ರಾಮನ ಅಗಲಿಕೆಯ ದುಃಖ ಸಹಿಸಲಾಗದೆ ಚಿಂತಿಸುತ್ತಿರುವಾಗ ಸೀತೆಯ ಆತ್ಮವು ತನ್ನತನವನೆ ಮೀರಿ ಅತೀಂದ್ರಿಯಕೆ ನೆಗೆಯುತ್ತದೆ. ಲಂಕೆಯ ಲತಾಂಗಿಯರು ಹೆದರಿ ಗಾಳಿಬೀಸಿ ನೀರೆರಚಿ ಕರೆದು ಅಲುಗಿಸಿದರೂ ಯಾವ ಪ್ರತಿಕ್ರಿಯೆ ಸಿಗದಿದ್ದಾಗ ದೊರೆಗೆ ಸುದ್ದಿಮುಟ್ಟಿಸುತ್ತಾರೆ. ಸೀತೆಯು ಕಣ್ತೆರೆದಾಗ ರಾವಣನ ಜೊತೆ ಧಾನ್ಯಮಾಲಿನಿಯನ್ನು ನೋಡುತ್ತಾಳೆ. ರಾವಣನು ಸೀತೆಗೆ ಯಾವುದೇ ಕೊರತೆ ಇಲ್ಲದೇ ನಿನ್ನನ್ನು ನೋಡಿಕೊಳ್ಳುತ್ತಿರುವರೇ? ಎಂದು ಕುಶಲೋಪರಿಯನ್ನುತಿಳಿಯ ಬಯಸಿ ನಂತರ ಲಂಕೆಯ ಸಿರಿಯನ್ನು ಹೊಗಳುತ್ತಾನೆ. ಸೀತೆಗೆ ನಿನ್ನ ಒಲುಮೆಗಾಗಿ ಕಾತರತೆಯಿಂದಿದ್ದರೂ ತಾಳ್ಮೆಯ ಕಡಿವಾಣವನ್ನು ಹಾಕಿಕೊಂಡಿರುವುದಾಗಿಯೂ;
ಸಾಧನೆಗೆ ಯಾವುದೇ ಅಸಾಧ್ಯವಿಲ್ಲವೆಂದು ನುಡಿಯುವ ನುಡಿಗಳು ಮಹತ್ವವಾದವುಗಳು ;

"ಉಪಾಸಿಸಲ್
ಕಾಲಾಂತರಕೆ ಕಲ್ಲುಮೀಶ್ವರನ ಕೃಪೆಯಾಗಿ
ಪರಿಣಮಿಸಿದಪ್ಪುದೆನೆ ನಿನ್ನ ಕಲ್ಲೆರ್ದೆ ಕರಗಿ
ಮಲ್ಲಿ ತಪ್ಪುದೆನೆ, ನಿನ್ನ ಕಲ್ಲೆರ್ದೆ ಕರಗಿ
ಮಲ್ಲಿ ತಪ್ಪುದು ದಿಟಂ ! ನೋಡೀಕೆಯಿಹಳೆನಗೆ
ಸಾಕ್ಷಿ, ನಿನಗಗಳೆಯೆ ಪೇಳ್ದಳಲ್ಲವೆ ತಂಗೆ
ಚಂದ್ರನಖಿ? ಧಾನ್ಯಮಾಲಿನಿಯನಗೆ ನೋಂತಂಗೆ
ಕಾಲಾಂತರಕ್ಕೋತು ಕೃಪೆದೋರ್ದಳೆಂಬುದಂ ?"

[ಶ್ರೀರಾಮಾಯಣದರ್ಶನಂ, ಪು-೬೯೯-೩೩೭]

ಸೀತೆಯು ಧಾನ್ಯಮಾಲಿನಿಯಂತೆಯೇ ತನಗೆ ಸೋಲುವಳೆಂದು, ಧಾನ್ಯಮಾಲಿನಿಯನ್ನು ಸಾಕ್ಷಿಯಾಗಿಟ್ಟು ಕೊಂಡು ನುಡಿದ ರಾವಣೇಂದ್ರನ ಅಹಂಕಾರವು ಧಾನ್ಯಮಾನಿಯಿಂದಲೇ ಜರ್‍ರನೆ ಇಳಿಯುತ್ತದೆ. ರಾವಣನ ಮನಃಪರಿವರ್ತನೆಗೆ ಧಾನ್ಯಮಾಲಿನಿಯ ಸಾವಿನ ಕ್ಷಣಗಳು ತುಂಬಾ ಪರಿಣಾಮಬೀರೆತ್ತವೆ. ಧಾನ್ಯಮಾಲಿನಿಯ ಸಾಕ್ಷಿ ನೀಡಿದ ರಾವನನಿಗೆ ಸೀತೆಯಿಂದ ಸಿಗುವ ಉತ್ತರ ಧಾನ್ಯ ಮಾಲಿನಿ ರಾವಣರಿಬ್ಬರಗೂ ಅಚ್ಚರಿಮೂಡಿಸುತ್ತದೆ.

"ಬಿದಿಯ ಬೇಳ್ವೆಗೆ ಬಂದ ಪಶು ನೀಂ ದಶಗ್ರೀವ

ಮರುಗುವವನು ನಿನಗೆ ತಾಯ್ ಕೇಡಾಡಿ ಕಂದಂಗೆ
ಮರುಗುವ್ವೋಲ್, ನನ್ನ ಕಲ್ಲೆರ್ದೆ ಕರಗುತಿದೊ ನಿನಗೆ
ಮೆಲ್ಲಿತಪ್ಪುದು ದಿಟಂ! ನೀನೆಂದ ಮಾಳ್ಕೆಯಿಂ,
ಸಾಧನೆಗಸಾಧ್ಯಮಿಲ್ಲೆಂಬರೈ ಉಪಾಸಿಸಲ್
ಕಾಲಾತರಕ್ಕೆ ಕಲ್ಲುಮೀಶವರನ ಕೃಪೆಯಾಗಿ
ಪರಿಣಮಿಪುದೆಂತಂತೆ, ಕಾಲಾಯಾಸಕೆ ಸಮಂ
ನಿನ್ನ ಕಲ್ಲೆರ್ದೆ ಕರಗಿ ಮೆಲ್ಲಿತಪ್ಪುದು ದಿಟಂ!
ನೋಂತಿರ್ಪೆ ನನವರತಮಾತ್ಮದುದ್ಧಾರಕ್ಕೆ
ನಿನಗು!...."

[ಶ್ರೀರಾಮಾಯಣದರ್ಶನಂ, ಪು. ೩೩೮]

ರಾವಣನ ಆತ್ಮೋದ್ಧಾರಕ್ಕೆ ನೋಂತಿರುವ ಸೀತೆಯ ದಿಟ್ಟ ನೇರನುಡಿಗೆ ಬೆಚ್ಚುವ ಧಾನ್ಯಮಾಲಿನಿಗೆ ತನ್ನತಪ್ಪಿನ ಅರಿವಾಗುತ್ತದೆ. ಆಕೆಯು ತನ್ನ ತಪ್ಪಿಗಾಗಿ ಮನನೊಂದು ಪ್ರಾಯಶ್ಚಿತ್ತವನ್ನು ಬಯಸುತ್ತಾಳೆ. ಇಲ್ಲಿಂದ ಅವಳ ಎದೆಯ ಕುದಿತವು ಆರಂಭವಾಗಿ ಆಕೆಯನ್ನೇ ಆಹುತಿ ತೆಗೆದುಕೊಳ್ಳುತ್ತದೆ. ಸೌಂದರ್ಯವತಿಯಾದ ಅಪ್ಸರೆ ರಾವಣನಿಂದ ಒತ್ತಾಯಿಸಲ್ಪಟ್ಟು ಬೇರೊಬ್ಬನ ಹದಿಬದೆಯಾಗಿದ್ದರೂ ತನು ಸೋತು ರಾವಣನಿಗೆ ಶರಣಾಗಿ ಅತಿಕಾಯನೆಂಬ ಪರಾಕ್ರಮಿಯನ್ನು ಪಡೆದಿರುತ್ತಾಳೆ.

ರಾವಣನ ತಮ್ಮನಾದ ಕುಂಭಕರ್ಣನು ಇರುಳು ಕಾಳಗದಲ್ಲಿ ಶತ್ರುಗಳಿಂದ ಹತನಾದಾಗ, ಇಂದ್ರಜಿತು ಮಹಾಯಾಗವನ್ನು ಕೈಗೊಂಡಾಗ ನಿಶಾಯುದ್ಧವನ್ನು ಎದುರಿಸುವ ಸಮರ್ಥ ವೀರನಾದ ಅತಿಕಾಯ ರಾವಣನಿಗೆ ನೆನಪಾಗುತ್ತಾನೆ. ರಾವಣ ಧಾನ್ಯಮಾಲಿನಿಯಲ್ಲಿ ಪಡೆದ ಪರಾಕ್ರಮಿ ಪುತ್ರ ಈತ. ರಾವಣನ ಮಾತುಗಳಿಂದಲೇ ಅತಿಕಾಯ ಧಾನ್ಯಮಾಲಿನಿಯ ಜೀವನದ ಬೆಳಕೆಂದು ತಿಳಿಯುತ್ತದೆ:

ಅತಿಕಾಯನಂ
ಧಾನ್ಯಮಾಲಿನಿಯುದರದಲಿ ತನಗೆ ಸಂಭವಿಸಿ
ಪತಿದೂರೆಯಾದ ಪತಿವ್ರತೆಯ ಸಂಕಟದ
ಜೀವಿತಕೆ ಜೀವಾತುವ್ವೋಲಿರ್ದ ತನ್ನದ್ಭುತ
ಕುಮಾರನಂ, ಬ್ರಹ್ಮವರಬಲ ಸಮರಶೂರನಂ
ಗಿರಿ ಶಿರೋಪಮ ರುಂದ್ರನಂ ಕರೆದು ಬೆಸಸಿದನ್

[ಶ್ರೀರಾಮಾಯಣದರ್ಶನಂ, ಪು–]

ಅತಿಕಾಯನು ಹದಿಬದೆಯ ತನವನ್ನು ಕಳೆದುಕೊಂಡ ಧಾನ್ಯಮಾಲಿನಿಯ ಸಂಕಟದ ಜೀವಿತಕೆ ಜೀವಧಾತು ಎಂಬುದು ತಿಳಿಸುವ ಜೊತೆಗೆ ಆತನ ಪರಾಕ್ರಮದ ಪರಾಕಾಷ್ಠೆಯನ್ನು ತಿಳಿಸುವ ಉದ್ದೇಶವಿದೆ ಇಲ್ಲಿ. ಹಗೆಯನ್ನು ಹಿಮ್ಮೆಟ್ಟಿಸಲು ಕಳಿಸುವ ರಾವಣನ ಮನ ಏನನ್ನೋ ಶಂಕಿಸಿ ಎಚ್ಚರಿಕೆಯ ಮಾತುಗಳನ್ನು ಆಡುತ್ತಾನೆ;

"ವೀರನಹುದಾದೊಡಂ, ನಿನಗೆ
ಸಾವೆಂಬುದೊಂದು ನಗೆ ವಿಷಯಮಾದೊಡಮೊಂದು

ಬಗೆಯ ಭಿನ್ನಪಮೊರೆಯೆ ತವಕಿಸುತಿರ್ಪುದೆರ್ದೆ
ರಾಜಾಜ್ಞೆಯಲ್ತು, ಪತ್ತವರೊಂದು ಭಿನ್ನಪಂ;
ನಿನ್ನ ತಾಯ್ ಧಾನ್ಯಮಾಲಿನಿಯುಸಿರ್ ನಿನ್ನಿಂದೆ,
ನಿನಗಾಗಿ, ತಡೆದಿರ್ಪುದಿಲ್ಲಿ. ಮರೆಯದಿರದನ್
ಸಮರ ಸಂಭ್ರಮದಿ "

[ಶ್ರೀರಾಮಾಯಣದರ್ಶನಂ, ಪು–]

ತಂದೆಯಾಗಿ ಮಗನಿಗೆ ಹೇಳಬೇಕಾದ ಮಾತುಗಳನ್ನೇ ಇಲ್ಲಿ ರಾವಣ ಅತಿಕಾಯನಿಗೆ ಹೇಳಿದ್ದಾನೆ. ಇಲ್ಲಿ ರಾವಣನಿಗೆ ಅತಿಕಾಯನ ಮೇಲಿರುವ ಪ್ರೀತಿ ವಾತ್ಸಲ್ಯ ಹಾಗು ಧಾನ್ಯಮಾಲಿನಿಯ ಮೇಲಿರುವ ಕರುಣೆ, ತನ್ನ ಕಾರ್ಯದ ಬಗೆಗಿರುವ ಪಶ್ಚಾತಾಪಗಳು ಮೇಳೈಸಿಕೊಂಡಿವೆ. ಈ ಮಾತುಗಳು ರಾವಣನ ಅಂತರಂಗವನ್ನು ತೆರೆದಿಡುತ್ತವೆ. ಆದರೆ ಅತಿಕಾಯನ ಮನದಲ್ಲಿ ಬಿರುಗಾಳಿ ಎಬ್ಬಿಸುತ್ತವೆ;

ತನ್ನ ತಾಯ್
ತನಗೆ ತಾಯಹ ಮುನ್ನಮಿನ್ನೋರ್ವನರಸಿಯುಂ
ಹದಿಬದೆಯು ಮಾಗಿರ್ದುದಂ ದಾದಿಯರ ಮೊಗದೆ,
ಪರ್ಚುನುಡಿಯಾಡುತ್ತಿದ್ದವರ ಕಣ್‌ಮಿಸುಗಿನಿಂ,
ಗ್ರಹಿಸಿರ್ದನೆಳವರೆಯದೊಳ್.

[ಶ್ರೀರಾಮಾಯಣದರ್ಶನಂ, ಪು–] .

ಕುಶಾಗ್ರಮತಿಯಾದ ಅತಿಕಾಯನು ಎಳೆಯದ್ದಲ್ಲಿಯೇ ದಾಸಿಯರ ಪಿಸುಧ್ವನಿಯಿಂದಲೆ ಎಲ್ಲವನ್ನೂ ಗ್ರಹಿಸಿದ್ದು; ತಾಯಿಯು ವಿಷಾದದ ಜ್ವಾಲೆಯಲ್ಲಿ ಬೆಂದು ಕೃಶಳಾಗಿದ್ದು ತನಗೇನನ್ನೂ ತೋರಗೊಡದೇ ನಗುತ್ತಿದ್ದದ್ದನ್ನೂ ಗಮನಿಸಿರುತ್ತಾನೆ ಒಂದು ದಿನ ದಾಸಿಯರ ಮಾತಿನ ಇಂಗಿತವನ್ನು ಅರಿಯಲು ತಾಯಿಯನ್ನು ನೇರವಾಗಿಯೇ ಪ್ರಶ್ನಿಸಿರುತ್ತಾನೆ. ಧಾನ್ಯಮಾಲಿನಿಯಿಂದ ಸಿಗುವ ಉತ್ತರ ಆಶ್ರುಧಾರೆಯಷ್ಟೆ. ಮಗನನ್ನೇ ಉಸಿರಾಗಿಸಿಕೊಂಡು ಬದುಕುತ್ತಿರುತ್ತಾಳೆ. ಮಗನ ಹಿತದೃಷ್ಟಿಯಿಂದ ಎಲ್ಲವನ್ನೂ ಮರೆತು ಜೀವಿಸಲು ಪ್ರಯತ್ನಿಸಿದ್ದರೂ ಮನದ ದುಃಖ ಅಳಿಸಲಾಗದಂಥದ್ದು ಆದ್ದರಿಂದಲೇ ಮಹಾಕವಿ ಧಾನ್ಯಮಾಲಿನಿಯ ಬಗೆಗೆ ತಮ್ಮ ಕರುಣಾದೃಷ್ಟಿಯನ್ನು ಬೀರಿದ್ದಾರೆ. ಧಾನ್ಯಮಾಲಿನಿಯನ್ನು ನೆನೆದು ಅವರಾಡುವ ಮಾತುಗಳು ಸರ್ವಕಾಲದಲ್ಲಿಯೂ ಸರ್ವರ ಹೃದಯವನ್ನೂ ಪ್ರವೇಶಿಸಿ ಅನುಕಂಪವನ್ನೂ ಹರಿಸುತ್ತವೆ:

ಪತಿವ್ರತೆಗದೇಂ ಸುಲಭಮೇನ್
ಮರೆಯಲಾ ಪ್ರಥಮಮಂ ಪ್ರೇಮಮಂ, ದಶಕಂಠ
ದುರ್ಮೋಹ ವಜ್ರಘಾತಕೆ ಕೆಡೆದ ಸಂಸಾರ
ಗೋಪುರ ಪವಿತ್ರಮಂ? ಮನವೊಪ್ಪದಿರ್ದುದಕೆ
ತನುವೊಪ್ಪಿದವಳ ಬಾಳ್ ನರಕಮಾದುದು.ಸುತನ
ಸುಸ್ಮಿತ ಸ್ವರ್ಗದಿಂದಾ ನರಕಕೂಪಮಂ
ಬಾಸಣಿಸಿ ಬದುಕುತಿರ್ದದಳು ಧಾನ್ಯಮಾಲಿನಿ

[ಶ್ರೀರಾಮಾಯಣದರ್ಶನಂ, ಪು–೭೦೯]

ದಶಕಂಠನ ದುರ್ಮೋಹದಿಂದ ತನ್ನ ಹದಿಬದೆತನವನ್ನು ಕಳೆದುಕೊಳ್ಳುತ್ತಾಳೆ. ಮನವೊಪ್ಪದಿದ್ದರೂ ಅನಿವಾರ್ಯ ಸ್ಥಿತಿಯಲ್ಲಿ ತನುವೊಪ್ಪಿಬಿಡುತ್ತದೆ. ಅತಿಕಾಯನು ಧಾನ್ಯಮಾಲಿನಿಯ ಜೀವಕ್ಕೆ ಉಸಿರಾಗುತ್ತಾನೆ. ಸೀತೆಯನ್ನು ರಾವಣ ಅಪಹರಿಸಿದ ಮೇಲೆ; ಸೀತೆಯ ಯೋಗಮುದ್ರೆ ಕಂಡಮೇಲಂತೂ ಧಾನ್ಯಮಾಲಿನಿಯ ಧರ್ಮಸ್ಮರಣೆ ಪಶ್ಚಾತಾಪದ ಉರಿಗೆ ದೂಡುತ್ತದೆ:

ಸೀತೆಯಂ ಕಂಡಂದು
ಧಾನ್ಯಮಾಲಿನಿಗೆ, ಸಿದ್ಧಿಯನಾಂತಯೋಗಿಯಂ
ಕಾಣ್ಬ ಯೋಗಭ್ರಷ್ಟನಂತಾಗಿ, ಪೂರ್ವಮಂ
ನೆನೆದು ಕೊರಗಿದಳೊದಗಿದಾತ್ಮ ಪತನಕೆ; ಮತ್ತೆ
ಅನ್ಯರರಿಯದವೋಲೆ ತೊಡಗಿದಳ್ ತನ್ನೊಳೆ
ತಪಶ್ಚರ್ಯೆಯಂ!

[ಶ್ರೀರಾಮಾಯಣದರ್ಶನಂ, ಪು-೭೧೦]

ಧಾನ್ಯಮಾಲಿನಿಯು ಪಶ್ಚಾತಾಪದ ಉರಿತಾಳಲಾರದೆ ತಪಃಶ್ಚರ್ಯೆಯನ್ನು ಅನ್ಯರು ಅರಿಯದಂತೆ ತೆಗೆದುಕಂಡರೂ ಆ ಕೊರಗಿನ ಉರಿಯು ಅತಿಕಾಯನ್ನು ಸುಡುತ್ತದೆ. ತಾಯಿಯ ಸಂಕಟದ ಮರ್ಮವನ್ನು ಅರಿತರೂ ಮನೊವ್ಯಥೆಯನ್ನು ನಿವಾರಿಸಲು ಅತಿಕಾಯನಿಗೆ ದಾರಿ ಸಿಕ್ಕಿರುವುದಿಲ್ಲ. ಅತಿಕಾಯನನ್ನು ನೋಡಿದರಂತೂ ಧಾನ್ಯಮಾಲಿನಿಯ ಸಂಕಟ ಇಮ್ಮಡಿಗೊಳ್ಳುತ್ತಿರುತ್ತದೆ. ದಿಕ್ಕುಕಾಣದ ಅತಿಕಾಯನಿಗೆ ಬೆಳಕುಮೂಡುವುದು ರಣದೀಕ್ಷೆಯಿಂದಲೇ. ರಾವಣನು ಅತಿಕಾಯನಿಗೆ ರಣದೀಕ್ಷೆಕೊಟ್ಟಾಗ ಪರಾಕ್ರಮಿಯಾದರೂ ತಾಯಿಗೆ ಮಿಡಿದು, ತನ್ನ ತಾಯಿಯ ಸಂಕಟ ನಿವಾರಿಸಲಿರುವ ಉಪಾಯವೆಂಬುದು ಅರಿತ ಅವನ ಮನೋಗತದ ನುಡಿಗಳು:

" ನನ್ನಿಂದೆ, ನನಗಾಗಿ ನನ್ನ ತಾಯ್
ಬರ್ದುಕಿ ಬೇಯುತ್ತಿಹಳ್? ನನ್ನ ಸಾವಿರ್ವಗೆ
ತಾಯ್ಗೆನಗೆ, ಶಾಂತಿಯಂ ದಯೆಗೊಯ್ವೊಡಿಂದಿನ
ರಣಂ ತರಲ್ ವೇಳ್ಕುಮಾ ಶಾಂತಿಯಂ!"

[ಶ್ರೀರಾಮಾಯಣದರ್ಶನಂ, ಪು-೭೧೦]

ಹೀಗೆ ಯೋಚಿಸುವ ಅತಿಕಾಯ ರಣದಲ್ಲಿ ವೀರ ಪರಾಕ್ರಮಿಯಾಗಿ ಮಡಿದು ತಾಯಿಗೆ ಸಂಕಟ ಪರಿಹರಿಸುವ ಮನಸ್ಸುಮಾಡಿ ಮುನ್ನುಗ್ಗುತ್ತಾನೆ. ಕವಿಯು ಅತಿಕಾಯನ ಮನದ ಬಯಕೆಯನ್ನು ಉತ್ತಮ ಉಪಮೆಗಳ ಮೂಲಕ ಸೂಚಿಸಿದ್ದಾರೆ:

ಸೊಡರ ಕುಡಿಯಂ ನಂದಿಸಲ್ ನುಗ್ಗುವ ಪತಂಗಂ
ದೀಪದುರಿಯಂ ಮಳ್ಗಿಸುಗೆ ತಾನುವೂ ಶಖಿಗೆ
ಸುಟ್ಟು ಸೀಕರಿವೋಗಿ ಬೇಳ್ವೆಯಪ್ಪಂದದಿಂ
ವಾನರಾಗ್ನಿಯನಾರಿಸಿದ ಧಾನ್ಯಮಾಲಿನಿಯ
ಕಂದನತಿ ಕಾಯನುಳಿದನ್ ಸ್ಥೂಲಕಾಯಮಂ
ರಣಮೇಧಿನಿಯ ಮಧ್ಯೆ: ಮೆರೆದನ್ ಯಶೋದಿವದಿ
ಕೀರ್ತಿಯಕ್ಷಯ ಸೂಕ್ಷ್ಮ ಕಾಯದಲಿ.

[ಶ್ರೀರಾಮಾಯಣದರ್ಶನಂ, ಪು-೭೧೩]

ಅತಿಕಾಯನು ರಣರಂಗದಲ್ಲಿ ಮಡಿದ ಸುದ್ದಿ ತಿಳಿಯುವ ಧಾನ್ಯ ಮಾಲಿನಿಯು ಮೂರ್ಛೆಗೆ ಸಂದಳೆಂದು ತಿಳಿಯುವ ರಾವಣನು ಜೀವನದ ಅನಿಶ್ಚಿತತೆಗೆ ಕೊರಗಿ ದುರಂತಗಳ ಸರಮಾಲೆಯನ್ನು ಕಂಡು ಸಹಿಸಲಾಗದೇ ಕೊರಗುತ್ತಾನೆ. ರಾವಣನ ಮನಃ ಪರಿವರ್ತನೆಗೆ ಸೀತೆ, ಮಂಡೋದರಿ, ಚಂದ್ರನಖಿಯರು ಕಾರಣವಾಗುವಂತೆಯೇ ಧಾನ್ಯಮಾಲಿನಿಯೂ ಕಾರಣವಾಗುತ್ತಾಳೆ. ಲೋಕದ ಎಲ್ಲ ಹೆಣ್ಣುಗಳೂ ತನಗೆ ಸೋಲುವರೆಂದು ಅಹಂಕಾರದಿಂದ ಬೀಗುತ್ತಿದ್ದ; ಧಾನ್ಯಮಾಲಿನಿಯನ್ನು ಸಾಕ್ಷಿಯಾಗಿಟ್ಟುಕೊಂಡು ಸೀತೆ ಕಾಲಾಂತರದಲ್ಲಿ ತನಗೆ ಸೋಲುವಳೆಂದು ನಂಬಿದ್ದ. ಆತನ ನಂಬಿಕೆ ಅಹಂಕಾರವನ್ನು ಇಳಿಸುವವಳು ಧಾನ್ಯಮಾಲಿನಿ. ಸಾವು ಸಮೀಪಿಸಿದಾಗ ಪಶ್ಚಾತಾಪದ ಉರಿಯಲ್ಲಿ ಬೇಯುತ್ತಿದ್ದ ಧಾನ್ಯಮಾಲಿನಿಯ ಮಾತುಗಳು ಇಡೀ ಕಾವ್ಯಕ್ಕೆ ಒಂದು ಮಹತ್ವದ ಸ್ಥಾನವನ್ನು ಒದಗಿಸಿಕೊಡುತ್ತದೆ:

"ಮುನಿಯದಿರ್, ಸ್ವಾಮಿ ಮೆಯ್ ಸೋಲ್ತುದುದಿಟಂ; ಮನಂ
ಸುಡುತಿರ್ದುದನೇಗಳುಂ. ಮಯ್ಯನಲ್ಲದೇಂ
ಮನವನಿತ್ತೆನೆ ರಾಕ್ಷಸಂಗೆ? ಕೈ ಬಿಡದಿರೀ
ದಾಸಿಯಂ. ಮನವನಲ್ಲದೆ ತನುವನೋಡುವನೆ
ಜಗದೀಶ್ವರಂ? ನನಗೆ ನೀನೆ ಸರ್ವೇಶ್ವರಂ
ಸೀತೆಯಂ, ಪೂಜ್ಯೆಯಂ, ಆಲೋಕಮಾತೆಯಂ
ಪಶುರಾಕ್ಷಸಂ ಮುಟ್ಟೆ ಪೊತ್ತುತಂದಾ ಕತದಿನ್
ಅಪವಿತ್ರಳಾದಳೇನಾ ಪತಿವ್ರತೆ? ಸ್ವಾಮಿ,
ತನ್ನ ಮುಡಿಯಂ ನೋಡು, ನಿಚ್ಚಮುಂ ತ್ರಿಜಟೆಯಿಂ
ನಾಂಪಡೆದು ಮುಡಿದ ರಘುರಾಮನ ಮಡದಿಯಡಿಯ
ಪಾಪ ನಾಶಕ ದೂಳಿ! ಏನೊ ದಃಸ್ವಪ್ನದೊಳ್
ಪ್ರಾರಬ್ಧ ಕರ್ಮಪರಿಪಾಕದಿಂದಗಲಿದೆವು
ನೀನ್ ನಾನ್. ಆ ಸ್ವಪ್ನವೊಡೆದುದಿನ್! ಅದಕಾಗಿ
ಆದೇವಿ ರಾಮಸತಿಗಿದೊ ಶತ ನಮಸ್ಕಾರಗಳ್!"

[ಶ್ರೀರಾಮಾಯಣದರ್ಶನಂ, ಪು-೭೩೫]

ಇಷ್ಟುದಿನ ರಾವಣನು ಧಾನ್ಯಮಾಲಿನಿ ನನಗೆ ಕಾಲಾಂತರದಲ್ಲಿಸೋತಳು. ಹಾಗೆಯೇ ಸೀತೆ ಕೂಡ ಎಂದು ಭಾವಿಸಿದ್ದವನ ಮನಸ್ಸಿಗೆ ಬಿರುಗಾಳಿ ಬೀಸಿ ಸಿಡಿಲು ಗುಡುಗುಗಳ ಭೀಕರ ಮಳೆಗರೆದವಳು ಧಾನ್ಯಮಾಲಿನಿ. ತನ್ನೊಳಗೇ ಬೇಯುತ್ತಾ ಇದ್ದ ಧಾನ್ಯಮಾಲಿನಿಯು ತನ್ನ ಪಾಪ ಪರಿಹಾರವಂಬಂತೆ ಸಾವಿನ ಕೊನೆಯ ಕ್ಷಣಗಳಲ್ಲಿ ತನ್ನ ಮೊದಲ ಪತಿಯನ್ನು ನೆನೆದು ಹಂಬಲಿಸಿದ್ದು ಹಾಗೂ "ಮೆಯ್ಯನ್ನಲ್ಲದೇಂ ಮನವನಿತ್ತೆನೆ ರಾಕ್ಷಸಂಗೆ?" ಎಂಬ ಮಾತುಗಳು ರಾವಣನನ್ನು ತರಗೆಲೆಯಂತೆ ಮಾಡಿ ಬಿರುಗಾಳಿಗೆ ತೂರುತ್ತವೆ. ಪಶು ರಾಕ್ಷಸನಿಂದಂಟಿದ ಪಾಪ ತೊಳೆಯಲು ಪತಿವ್ರತೆಯ ಅಡಿಯ ಪಾಪನಾಶಕ ದೂಳಿ ಬೇಕಾಗುತ್ತದೆ. ರಾವಣನಿಂದಾದ ನಮ್ಮಿಬ್ಬರ ಅಗಲಿಕೆಯು ಸ್ವಪ್ನವಂದು ಭಾವಿಸಿ ಮತ್ತೆ ಪತಿಯನ್ನು ಸೇರಲು ಕಾರಣಳಾದ ರಾಮಸತಿಗೆ ಧಾನ್ಯಮಾಲಿನಿಯ ಪರಿಶುದ್ಧ ಆತ್ಮ ಶತನಮಸ್ಕಾರಗಳನ್ನು ಹಾಕುತ್ತದೆ. ರಾವಣನಿಗೆ ಕಾಮಾತಿಶಯದಿಂದ ಶವದೊಂದಿಗೆ ಭೋಗಿಸಿದವನ್ನು ತಿಳಿ ಹೇಳಿ ಎಚ್ಚರಿಸುವಂತಾಗಿ ಜುಗುಪ್ಸೆ ಹುಟ್ಟುತ್ತದೆ, ತನ್ನ ಬಗೆಗೆ ಅಸಹ್ಯಗೊಳ್ಳುತ್ತಾನೆ. ತನ್ನ ತಪ್ಪುಗಾಗಿ ತೀವ್ರ ಮರ್ಮಾಘಾತದ ವೇದೆಯಿಂದ ನರಳುತ್ತಾ ಧಾನ್ಯಮಾಲಿನಿಯನ್ನು ಕ್ಷಮೆ ಬೇಡುವವನಂತೆ ಆಕೆಯ ಅಡಿಗಳ ಮೇಲೆ ಕುಸಿಯುತ್ತಾನೆ. ಮೂರು ಲೋಕದ ಗಂಡೆದು ಭೀಗುತ್ತದ್ದವನ ಸೊಕ್ಕು ಒಮ್ಮೆಗೇ ಇಳಿಯುತ್ತದೆ.

ಧಾನ್ಯಮಾಲಿನಿಯ ಮಾತುಗಳು ರಾವಣನ ರಾವಣತ್ವವನ್ನು ಬುಡಮಟ್ಟ ಕೀಳಲು ಸಹಕರಿಸುತ್ತದೆ. ರಾವಣನು ಬಂಧು ಬಾಂಧವರನ್ನು ಕಳೆದುಕೊಂಡು ಒಂಟಿಯಾದವನು ಧಾನ್ಯಮಾಲಿನಿಯ ಮಾತುಗಳಿಂದ ಮನಕುಗ್ಗಿದವನಾಗಿ, ಕುಬ್ಜನಾಗಿ, ಸಾಮಾನ್ಯನಾಗಿ ಮುಕ್ತಿಯನ್ನು ಬಯಸುತ್ತಾನೆ.

**ಆ. ಕೆಲವು ಅಪ್ರಮುಖ ಪಾತ್ರಗಳು :**

ರಾಮಾಯಣದ ಕಥೆಗೆ ಸಮಕಾಲೀನತೆಯ ಮೆರಗು ಕೊಟ್ಟು ಹೊಸತನ, ಚೈತನ್ಯ ತುಂಬಿ ಕುವೆಂಪು ಅವರು 'ಶ್ರೀರಾಮಾಯಣ ದರ್ಶನಂ' ರಚಿಸಿದ್ದಾರೆ. ಪ್ರಮುಖವಾಗಿ ಬರುವ ಪಾತ್ರಗಳ ಹಿರಿಮೆಗರಿಮೆಗೆ ಸಾಮಾನ್ಯ ಪಾತ್ರಗಳು ಕನ್ನಡಿಹಿಡಿಯುತ್ತವೆ. ಪ್ರಮುಖ ಸ್ತ್ರೀ ಪಾತ್ರಗಳಾಗಿ ಸೀತೆ,ಕೌಸಲ್ಯೆ, ಕೈಕೆ, ಮಂಥರೆ, ಊರ್ಮಿಳೆ, ಮಂಡೋದರಿ, ಚಂದ್ರನಖಿ, ಅನಲಾ ಪಾತ್ರಗಳನ್ನು ಸೃಷ್ಠಿಸಿರುವ ಕುವೆಂಪು ತ್ರಿಜಟೆ ಹಾಗೂ ಧಾನ್ಯಮಾಲಿನಿಯರ ಪಾತ್ರಗಳ ಶ್ರೇಷ್ಠತೆ ತಿಳಿಸುತ್ತಾರೆ. ಮೂಲ ವಾಲ್ಮೀಕಿ ರಾಮಾಯಣದಲ್ಲಿ ಮುಚ್ಚಿಹೋಗಿರುವ ಎಷ್ಟೋ ಪಾತ್ರಗಳ ಮೇಲೆ ಬೆಳಕುಚೆಲ್ಲಿರುವ ಕುವೆಂಪು ಮೂಲಕಥಾ ಆವರಣದಲ್ಲಿಯೇ ಪಾತ್ರಗಳಲ್ಲಿ ಹೆಚ್ಚಿನ ಶಕ್ತಿಯನ್ನು ತುಂಬಿ ಉದ್ಧಾರಿಸಿದ್ದಾರೆ. ವಾಲಿಯ ಹೆಂಡತಿಯಾದ ತಾರೆ,ಸುಗ್ರೀವನ ಪತ್ನಿ ರುಮೆ, ಇಂದ್ರಜಿತುವಿನ ಪತ್ನಿ ತಾರಾಕ್ಷಿ,ವಿಭೀಷಣನ ಪತ್ನಿ ಸರಮೆಯ ಪಾತ್ರಗಳು ಅಷ್ಟು ಪ್ರಮುಖವಲ್ಲವೆನಿಸಿದರೂ ಕೂಡ ಅವರ ಪಾತ್ರಗಳ ಹಿರಿಮೆಯನ್ನು ಎತ್ತಿತೋರಿಸುತ್ತದೆ. ಮೂಲಕ್ಕಿಂತ ಭಿನ್ನವಾದ ದರ್ಶನ ಈ ಪಾತ್ರಗಳ ಸನ್ನಿವೇಶದಲ್ಲಿ ಕಾಣಬಹುದಾಗಿದೆ.

ಶಬರಿಯ ಆತಿಥ್ಯ ಸ್ವೀಕರಿಸಿದ ರಾಮನಿಗೆ ದಶಕಂಠನ ಉದ್ಯಾನದಲ್ಲಿ ಸೊರಗಿರುವ ಸೀತೆಯನ್ನು ಕಂಡಂತೆ ಕನಸಾದುದನ್ನು ಬೆಸಸುವ ಶಬರಿಯು ರಾಮನಿಗೆ ಮುಂದಿನ ದಾರಿಯನ್ನು ತೋರುತ್ತಾಳೆ. ದಿನದಿನವೂ ರಾಮನಿಗಾಗಿ ಉಣಿಸನ್ನು ಅಣಿಮಾಡಿ ಕಾತರಿಸುತ್ತಿದ್ದ ಜೀವ ರಾಮನ ಕೃಶಸ್ಥಿತಿಗೆ ಮರುಗಿ ಆತನಿಗೆ ಜೀವದಾನ ಮಾಡಿ ಮುಂದಿನ ಮಾರ್ಗವನ್ನು ತೋರಿಸಿ ಸೀತಾನ್ವೇಷಣೆಗೆ ಸಹಕರಿಸುತ್ತಾಳೆ. ಶಬರಿ ತಪಸ್ವಿನಿ ಎಲ್ಲವನ್ನೂ ಅರಿಯಬಲ್ಲವಳು. ರಾಮನಂತೆಯೇ ಪತ್ನಿಯಿಂದ ಅಗಲಿ ಒಂಟಿಯಾಗಿರುವ ಸುಗ್ರೀವನ ಸಖ್ಯವನ್ನು ಬೆಳೆಸುವಂತೆ ತಿಳಿಸುತ್ತಾಳೆ. ಮುಂದಿನ ಕಾರ್ಯ ಸುಲಭವಾಗಲು ಉಪಾಯಗಳನ್ನು ರಾಮಲಕ್ಷ್ಮಣರಿಗೆ ತಿಳಿಸಿ ಕಳುಹಿಸುವವಳು ಶಬರಿ. ಶಬರಿಯ ಆಣತಿಯಂತೆಯೇ ಸುಗ್ರೀವನ ಸಖ್ಯವನ್ನು ರಾಮನು ಪಡೆಯುತ್ತಾನೆ.

ವಾಲಿ ಸುಗ್ರೀವರ ನಡುವಿನ ದ್ವೇಷಕ್ಕೆ ಕಾರಣವಾದ ಎಲ್ಲ ಸಂಗತಿಗಳೂ ಸುಗ್ರೀವನ ನೆಚ್ಚಿನ ಭಂಟನಾದ ಆಂಜನೇಯನಿಂದ ತಿಳಿಯುವ ರಾಮ ಸುಗ್ರೀವನ ಸ್ನೇಹ ಪಡೆಯುತ್ತಾನೆ. ರಾಮನಿಗೆ ಸೀತೆಯು ಕರೆದೊಯ್ಯುತ್ತಿರುವಾಗ ಕೆಳಗೆಸೆದಿದ್ದ ಒಡವೆಗಳನ್ನು ಸುಗ್ರೀವ ರಾಮನಿಗೆ ತೋರಿಸುತ್ತಾನೆ. ರಾಮನಿಗೆ ಸೀತೆಯ ಒಡವೆಗಳ ಗುರುತುಸಿಕ್ಕಿ ಅಪಹರಣ ಖಾತ್ರಿಯಾಗುತ್ತದೆ. ಸುಗ್ರೀವನ ಅಣ್ಣನಾದ ವಾಲಿಯನ್ನು ಸಂಹರಿಸಿ ರುಮೆಯನ್ನು ಸುಗ್ರೀವನಿಗೆ ಪಡೆದುಕೊಟ್ಟು ತನ್ನ ಪ್ರಿಯಸತಿಯ ಅನ್ವೇಷಣೆಗೆ ಅವರ ಸಹಕಾರವನ್ನು ಪಡೆಯಲು ಮುಂದಾಗುತ್ತಾನೆ. ಸುಗ್ರೀವನ ಪ್ರಿಯಸತಿ ರುಮೆ. ವಾಲಿಯಿಂದ ಹಿಂಸಿತನಾದ ಸುಗ್ರೀವ ನೆಲಕ್ಕೆ ಆಸೆಪಟ್ಟು ಯುದ್ಧ ಮಾಡುವುದಿಲ್ಲ. ರುಮೆಯನ್ನು ಪಡೆಯುವ ಹೆಬ್ಬಯಿಕೆಯಿಂದ ಮಾಡುತ್ತಾನೆ. ರುಮೆ ವಾಲಿಯಿಂದ ಬಂಧನಕ್ಕೊಳಪಟ್ಟಿದ್ದಾಳೆ. ವಾಲಿಯು ವಾಲ್ಮೀಕಿ ರಾಮಾಯಣದಲ್ಲಿ ರುಮೆಯ ಮೇಲೆ ಆಸೆಪಟ್ಟು ಬಂಧನದಲ್ಲಿಟ್ಟಿರುತ್ತಾನೆ. ಆದರೆ ಕುವೆಮಪು ವಾಲಿಯ ಮೇಲಿನ ಆ ಕಳಂಕವನ್ನು ತೊಡೆದುಹಾಕುತ್ತಾರೆ. ವಾಲಿಯು ತಮ್ಮನ ಉಸಿರಾದ ರುಮೆಯನ್ನು ಬಂಧಿಸುವುದು ಸುಗ್ರೀವನ ಶಕ್ತಿಯನ್ನು ಕುಂದಿಸಲು ಎಂಬುದನ್ನು ಸಹೃದಯರಿಗೆ ಅರಿವು ಮೂಢಿಸುತ್ತಾರೆ.

ವಾಲಿಯ ಹೆಂಡತಿಯಾದ 'ತಾರೆ' ಮಹಾಪರತಿವ್ರತೆ, ತಪಸ್ವಿನಿ. ರುಮೆಯನ್ನಯ ತಂಗಿಯಂತೆ ಸಂತೈಸಿ ವಾಲಿ ಸುಗ್ರೀವರ ನಡುವೆ ಉತ್ತಮ ಸಂಬಂಧ ಮರುಕಳಿಸುವಂತೆ ಮಾಡಲು

ಪ್ರಯತ್ನಿಸವಳು. ಸುಗ್ರೀವನೊಂದಿಗೆ ಯುದ್ಧ ಮಾಡುವ ಸಂದಭದಲ್ಲಿ ವಾಲಿಯ ಮಾತುಗಳು ಧ್ವನಿಸುವ ಅರ್ಥ ಮಹತ್ವದ್ದಾಗಿದೆ:

"ಕೇಳಲವೊ ಸುಗ್ರೀವ, ನೀಂ ತಮ್ಮನೆಂಬೊಲವರಕೆ
ನಿನ್ನಾ ಪತಿವ್ರತಾ ಸತಿಯ್ಯೆದೆ ತನಕಾಗಿ
ದೇವಿ ತಾರೆಯ ವಚನಕ್ಕಾಗಿ, ಹುಸಿಗಾಳೆಗಂ
ಗೊಟ್ಟೆಡಲೆಮಲೆತು ಕೊಬ್ಬಿದೆಯೆಲಾ?"

ವಾಲಿಯ ಈ ಮಾತುಗಳುಲ್ಲಿ ತಮ್ಮನ ಮೇಲಿನ ಪ್ರೀತಿಯ ಜೊತೆಗೆ ವಾಲಿಯು ತಾರೆಗೆ ಕೊಟ್ಟಿರುವ ಗೌರವ ಹಾಗೂ ರುಮೆಗಾಗಿ ಪಡುವಂತಹ ಮರುಕಗಳು ವ್ಯಕ್ತವಾಗುತ್ತವೆ. ವಾಲುಯು ತಾರೆಯೊಂದಿಗೆ ನಡೆಸುವ ಸಂಭಾಷಣೆಯು ಅವನ ಹಿರಿಮೆಯನ್ನು ಎತ್ತಿ ತೋರಿಸುತ್ತದೆ. ತಾರೆಯು ವಾಲಿಯು ಯುದ್ಧದಲ್ಲಿ ದಣಿದು ಬಂದಾಗ ಸಂತೈಸಿ ಉಪಚರಿಸಿ ಪತಿಯ ಅಂತರಂಗವನ್ನು ತಿಳಿಯುವ ಸಾಹಸವನ್ನು ಮಾಡುತ್ತಾಳೆ. ತಾರೆ ವಾಲಿಯು ಅಂದಿನ ಸುದ್ದಿಯನ್ನು ತಿಳಿಸುವಾಗ ಆಡುವ ಮಾತುಗಳು:

"ನೀನೆಂದವೊಲೆ
ರುಮೆಯ್ಯೆದೆನಕೆ ಕೇಡಡಸದೋಲಾತನಂ
ಬಡಿದಟ್ಟಿ ಬಂದೆ..... ಮನಮೇಕೊ ಸಂತಪಿಸುತಿದೆ
ಕಾರಣವನರಿಯೆ.....ಮೇಣರಿತ ಕತದಿಂದೆಂತದೇಂ
ತಪಿಸುತಿದ್ದುದೊ?.........."

(ಶ್ರೀರಾಮಾಯಣದರ್ಶನಂ ಪುಟ.೩೧೨)

ಸುಗ್ರೀವನು ವಾಲಿಯ ರೋಷಸಾಗರವನ್ನು ಕೆನಕಿದರೂ ತಾರೆಯು ಬಯಸಿದಂತೆ ರುಮೆಯ್ಯೆದೆನಕ್ಕೆ ಕೇಡಾಗದಂತೆ ಹುಸಿ ಯುದ್ಧ ಮಾಡುವ ವಾಲಿಯಲ್ಲಿ ತಮ್ಮನ ಬಗೆಗೆ ಪ್ರೀತಿ ಮೂಡುತ್ತದೆ. ಸುಗ್ರೀವನ ಆರ್ಭಟಮತ್ತೆ ಕಿಷ್ಕಿಂಧೆಯಲ್ಲಿ ಕೇಳಿದಾಗ ವಾಲಿ ಕದನಮಿಖಿಯಾಗುವ ಮುನ್ನ ತಾರೆಯು ಕಾಲಿಡಿದು ಬೇಡಿ ನುಡಿಯುವ ನುಡಿಗಳು ತಾರೆಯ ವ್ಯಕ್ತಿತ್ವವನ್ನು ತಿಳಿಸುತ್ತದೆ.

" ಮಾಣ್, ಮನದನ್ನ, ಮಾಣ್; ಮಾರದಿರ್ ಚಲಕೆ
ಜೀವನ ಶ್ರೇಯಮಂ. ನೀನೀಗಳೆನ್ನೊಡನೆ
ನುಡಿಯುತಿದ್ದುದನೆ ಪಿಡಿ; ವೀರರೌದಾರ್ಯಮಂ।
ಪತಿವ್ರತಾ ರಮಣಿಯಂ ಆ ರುಮಾದೇವಿಯಂ
ನೆನೆ ಪಡೆದ ತಾಯನಂತೆಯೆ ತಂದೆಯಂ ನೆನೆ;
ಅಂತೆವೋಲ್ ನಿಮ್ಮಿರ್ವರೆಳೆತನದ ಲೀಲೆಯಂ,
ತಾರುಣ್ಯದೋಲಿದುಯ್ಯಾಲೆಯಂ ನೆನೆ. ಪಿಂತೆ
ನಿಮ್ಮೊಳಿರ್ದಳ್ಕರೆಯ ಸಗ್ಗಮಂ ನೆನೆ".

(ಶ್ರೀರಾಮಾಯಣದರ್ಶನಂ ಪುಟ.೩೧೪)

ತಾರೆಯ ಈ ಮಾತುಗಳಲ್ಲಿ ರುಮೆಯ ಬಗೆಗೆ ಆಕೆಗಿದ್ದ ಪ್ರೀತಿ, ಕಾಳಜಿ ಹಾಗೂ ವಾಲಿಯನ್ನು ಅವರ ಬಗ್ಗೆ ಮನವೊಲಿಸುವ ರೀತಿಯನ್ನು ಕಾಣಬಹುದು. ತಾರೆಯ ಮಾತುಗಳು

ವಾಲಿಯನ್ನು ಶಾಂತಗೊಳಿಸುವುದು ಮಾತ್ರವಲ್ಲದೆ ಮನಃಪರಿವರ್ತನೆಗೆ ಕಾರಣವಾಗುತ್ತವೆ. ಮನಪರಿವರ್ತನೆಗೊಂಡ ಶ್ರೇಷ್ಠ ಮನಸ್ಕ ವಾಲಿಯ ನುಡುಗಳಿವು:

"ನೆರಪುವೆನ್, ತಾರೆ ಸುಗ್ರೀವನಂ ತಂದಿಂದು
ರುಮೆಗೊಸಗೆಯಂ, ಸಿಂಗರಿಸುನಡೆನಿನ್ನ ತಂಗಿಯಂ
ಚಿಕ್ಕಂದು ನಾವಾಡಿದುಪ್ಪಾಟಂ ಮತ್ತಿಂದು
ತೋರಿದಪೆನೆನ್ನ ತಮ್ಮಂಗೆ. ನೀನನ್ಯಮಂ
ಚಿಂತಿಸದಿರಾ ಪೋಗಿ, ಕಾಳೆಗದ ನೆವದಿಂದ
ಪೊತ್ತು ತಹೆ ರವಿಸೂನುವಂ!"

(ಶ್ರೀರಾಮಾಯಣದರ್ಶನಂ ಪುಟ.೩೧೪)

ತಾರೆಯ ಮಾತಿಗೆ ಇಷ್ಟೋಂದು ಬೆಲೆಕೊಡುವ ವಾಲಿಯು ಕಾಳಗದ ನೆವದಲ್ಲಿ ಸುಗ್ರೀವನ್ನು ಹೊತ್ತು ತಂದು ರುಮೆಗೆ ನೀಡುವ ಯೋಚನೆ ಮಾಡಿರುತ್ತಾರೆ. ಆದರೆ ವಿಧಿ ಲಿಖಿತ ಬೇರೆಯಾಗುತ್ತದೆ. ರಾಮನಿಂದ ಬಾಣಾಘಾತಕ್ಕೆ ಒಳಗಾದ ವಾಲಿಯು "ಮುದ್ದಾಡಲು ಬಂದ ತೋಗಳನ್ನೇ ಛಿದ್ರಿಸಿದೆಯಲ್ಲ!"[೭೨] ಎಂದು ಪರಿತಪಿಸುತ್ತಾನೆ. ಮರೆಯಲ್ಲಿ ನಿಂತು ಬಾಣಪ್ರಯೋಗಿಸಿದ ರಾಮನ ವಿಷಯ ಅರಿತು ವಾಲಿಯು ಸೀತೆಯನ್ನು ಅಸುರನೊಬ್ಬ ಕದ್ದೊಯ್ದಿರುವುದು ವಿಧಿ! ಎಂಬಂತೆ ಕೊಂಕುನುಡಿಯಾಡಿದ್ದಕ್ಕೆ ರಾಮನ ಕೋಪದ ನುಡಿಗಳು ವಾಲಿಗೆ ಚುಚ್ಚುತ್ತವೆ:

"ನಿನ್ನ ವಿಧಿ
ನಿನಗೆ, ರಾಕ್ಷಸನ ವಿಧಿ ರಾಕ್ಷಸಗೆ, ನಿನ್ನಂತೆ ಕೇಳ್
ಹದಿಬದೆಗಳುಪಿದಸುರನುಂ ಕಡೆಯನೆಯ್ದುವಂ"

(ಶ್ರೀರಾಮಾಯಣದರ್ಶನಂ ಪುಟ.೩೧೭)

ಈ ಮಾತುಗಳಿಗೆ ವಾಲಿಯು ದುಃಖಿಸಿ; ಇದು ಸಳ್ಳೆಂದು ಸಾಬೀತು ಮಾಡಲು ವಾಲಿಕೊಡುವ ಸಾಕ್ಷಿಯು ಎಲ್ಲರ ಮನಕರಗಿಸುವಂತದ್ದು, ವಾಲಿಯ ತತ್‌ಕ್ಷಣದ ಪ್ರತಿಕ್ರಿಯೆ ಈ ರೀತಿಯಿದೆ:

"ಮಗಳೆನಗೆ ರುಮೆ! ತಾರೆ ತಾಂ ಸಾಕ್ಷಿ!
ಹಂದೆತನಕೆ ಪುಸಿಪಳಿಯ ಬೆಸುಗೆಯೊಂದೇಕೆ?"

ಹೇಡಿತನವನ್ನು ಮರೆಸಲು ಈ ರೀತಿ ಸುಳ್ಳು ಅಪವಾದ ಸಲ್ಲದೆಂದು 'ರುಮೆ ತನಗೆ ಮಗಳು' ಎಂದು ತನ್ನ ಪತ್ನಿ ತಾರೆಯೇ ಅದಕ್ಕೆ ಸಾಕ್ಷಿಯೆಂದು ಹೇಳುತ್ತಾನೆ. ಇಲ್ಲಿ ಈತನ ಪಾತ್ರಕ್ಕಿರುವ ಮೂಲದ ಕಳಂಕ ಪರಿಹಾರವಾಗಿದೆ. ರುಮೆಯನ್ನು ಮಗಳೆಂದು ಭಾವಿಸಿದ್ದಕ್ಕಾಗಿಯೇ ಸುಗ್ರೀವನ ಜೊತೆ ಸುಳ್ಳು ಕಾಳಗ ಮಾಡಿ ದೂರಕ್ಕಟ್ಟುತ್ತಿದ್ದದ್ದು; ಆತನ ಪ್ರಾಣ ರಕ್ಷಣೆಯಲ್ಲಿ ತೊಡಗಿದ್ದುದು; ಕೊನೆಯಲ್ಲಿ ಸುಗ್ರೀವನ್ನು ಹೊತ್ತುತಂದು ರುಮೆಗೆ ನೀಡಬೇಕೆಂದು ಕೊಂಡದ್ದು.

-----------

೭೨. ಕುವೆಂಪು, ಶ್ರೀರಾಮಾಯಣದರ್ಶನಂ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು ೨, ಎರಡನೇ ಆವೃತ್ತಿ೨೦೦೪, ಪು.೩೧೭

ತಾರೆಯ ಮಾತುಗಳನ್ನು ಗೌರವಿಸುತ್ತಿದ್ದ ವಾಲಿಯು ತಾರೆಯೊಂದಿಗೆ ರುಮೆಯ ಸೌಭಾಗ್ಯದ ಬಗ್ಗೆ ಮಾತನಾಡುವಾಗ ರುಮೆಯ ಮೇಲಿಟ್ಟಿರುವ ಗೌರವ ವ್ಯಕ್ತವಾಗುತ್ತದೆ. ಇಡೀ ಕಾವ್ಯದಲ್ಲಿಯೇ ಸ್ಮರಣಾರ್ಹವಾದ ಪ್ರಸಂಗವಿದೆಂದು ಹೇಳಬಹುದು. ವಾಲಿರಾವಣನಿಗೆ ಹೋಲಿಸಿದಾಗ ಕೋಪಗೊಂಡು ಸಿಡಿಯುತ್ತಾನೆ. ಇದೇ ಆತನ ಪ್ರಾಮಾಣಿಕ ವರ್ತನೆಗೆ, ಸತ್ವಪೂರ್ಣತೆಗೆ ಸಾಕ್ಷಿಯಾಗಿದೆ.

ವಾಲಿಯು ರಾಮನ ಬಾಣಾಘಾತದಿಂದ ಸಾವಿನಂಚನ್ನು ತಲುಪಿದಾಗ ಪತ್ನಿ ತಾರೆ ಮತ್ತು ಸುತ ಅಂಗದರ ಗೋಳು ಮುಗಿಲು ಮುಟ್ಟುತ್ತದೆ. ಸುಗ್ರೀವನು ಅಣ್ಣನ ಸ್ಥಿಗೆ ತಾನೇ ಕಾರಣನೆಂದು ಮರುಗುತ್ತಾನೆ. ಅಂಗದ ಕುಮಾರನನ್ನು ಸುಗ್ರೀವ ರುಮೆಗೆ ಒಪ್ಪಿಸಿ ತಾರೆ ರಾಮನನ್ನು ಸಂತೈಸಿ ಶಾಂತಗೊಳಿಸಿ, ತಂದೆಯ ಯಶಸ್ಸಿಗೆ ಕುಂದು ಬರದಂತೆ ನಡೆಯಲು ಮಗ ಅಂಗದನಿಗೆ ತಿಳಿಸಿ ಎಲ್ಲರಿಂದ ಬೀಳ್ಕೊಂಡು ಪತಿವ್ರತೆಯಾದ ತಾರೆ ಚಿತೆಯೇರಿ ಪತಿಯಾತ್ಮವನ್ನು ಸೇರಿ ಸದ್ಗತಿಗೆಯನ್ನು ಪಡೆಯುತ್ತಾಳೆ. ಕುವೆಂಪು ಅವರು 'ಶ್ರೀ ರಾಮಾಯಣ ದರ್ಶನಂ' ನಲ್ಲಿ ತಾರೆ, ವಾಲಿಯ ಪಾತ್ರಗಳಿಗೂ ಊರ್ಧ್ವಗಾಮಿತ್ವವನ್ನು ಕಲ್ಪಿಸಿ ಪರಿಪೂರ್ಣತೆಯನ್ನು ಕೊಟ್ಟು ಅವರನ್ನು ಸಹೃದಯರ ಸ್ಮೃತಿಯಲ್ಲಿ ಕ್ಷಣ ಕಾಲವಾದರೂ ನಿಲ್ಲುವಂತೆ ಮಾಡಿದ್ದಾರೆ.

'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ ಗಣನೆಗೆ ತೆಗೆದುಕೊಳ್ಳಲೇಬೇಕಾದ ಎರಡು ಪಾತ್ರಗಳೆಂದರೆ ತಾರಾಕ್ಷಿ ಮತ್ತು ಸರಮೆ ಅವರದು. ಇವರಿಬ್ಬರೂ ಇಬ್ಬರು ಮಹಾಪರಾಕ್ರಮಿಗಳ ಅರ್ಧಾಂಗಿಯರು ಆದರೆ ಹೆಚ್ಚಿನ ಭೂಮಿಕೆ ಇವರಿಗೆ ದೊರೆತಿಲ್ಲ; ಹಾಗೆಂದು ಇವು ತಿರಸ್ಕೃತವಾದ ಪಾತ್ರಗಳೇನೂ ಅಲ್ಲ. ಇವರಿಬ್ಬರಿಗೆ ಅವರದೇ ಆದ ಶ್ರೇಷ್ಠತೆಯ, ಸಾತ್ವಿಕತೆಯ ಪರಿಧಿ ಇದೆ. ತಾರಾಕ್ಷಿ ರಾವಣನ ಮಗನಾದ ಇಂದ್ರಜಿತುವಿನ ಪತ್ನಿ. ಈಕೆಯು ಹಸುಳೆ ವಜ್ರಾರಿಯ ತಾಯಿ. ಆಂಜನೇಯನು ಧೂಪರೂಪದಲ್ಲಿ ಲಂಕಾನಗರಿಯನ್ನು ಸೀತೆಗಾಗಿ ಶೋಧಿಸುವಾಗ ತಾರಾಕ್ಷಿಯ ಅರಮನೆಯನ್ನೂ ಪ್ರವೇಶಿರುತ್ತಾನೆ. ತಾರಾಕ್ಷಿಯ ಶಿಶು ಬೆಚ್ಚಿ ಕೂಗಿದಾಗ ಏನೋ ಅಪಾಯವನ್ನು ಶಂಕಿಸಿ ಸಹಜವಾಗಿಯೇ ತಾಯಿ ಹೃದಯ ಅಳುಕುತ್ತದೆ. ತನ್ನ ರೂಪಸಿಯ ಬೆದರಿಕೆಗೆ ಕಾರಣಗಳೇ ಇಲ್ಲವೆಂದು ಪರಿಹಾಸ್ಯಗೊಳಿಸುವ ಇಂದ್ರಜಿತುವಿಗೆ ತನ್ನಂತರಂಗದ ಅಳಲನ್ನು ತೋಡಿಕೊಳ್ಳುವ ಪರಿ ಇದು:

"ಪೇಳಲಂಜುವೆನಲ್ಪಮಂ,  
ನಾನಬಲೆ, ನಿನ್ನ ಸಬಲ ಮತಿಗೆ ಪ್ರಾಣಪತಿ  
ಭಾವದಿಂದರಿತುದಂ ಬುದ್ಧಿಯಿಂದಳೆಯಲದು  
ಮೌಢ್ಯದೊಲ್ ತೋರ್ಪುದಹುದಾದೊಡಂ, ಲಘುವಲ್ತು  
ದುಶ್ಯಕುನ ಚಿಹ್ನೆ, ಬಿದಿಯೆಳ್ಚರಿಕೆವೆರಳದಂ  
ಕಡೆಗಣಿಸದರಿತು ನಡೆವುದೆ ಬುದ್ಧಿ!"

(ಶ್ರೀರಾಮಾಯಣದರ್ಶನಂ ಪುಟ.೪೪೭)

ನಿನ್ನ ಕುವರನು ತೊಟ್ಟಿಲಲ್ಲಿ ಬೆಚ್ಚುತ್ತಿದ್ದಾನೆ. ಧೂಪರೂಪವೊಂದು ಈ ಅರಮನೆ ಪ್ರವೇಶಿಸಿದೆ ಎಂದು ಸೂಕ್ಷ್ಮವನ್ನು ಅರಿತು ಹೇಳಿದರೂ ನಂಬದ ಪತಿಗೆ ಮತ್ತೊಂದು ಸಂದರ್ಭವಾದ ಅನಲಾ ಕುಮಾರಿಯೊಂದಿಗೆ ಕಂಡ ಉಲ್ಕೆಯು ಲಂಕೆಗಿಳಿದ ಪ್ರಸಂಗವನ್ನು ತಿಳಿಸಿ ಇದೆಲ್ಲಾ ದುಶ್ಯಕುನದ ಸೂಚನೆ ಎಂದು ಎಚ್ಚರಿಕೆಯ ಮಾತುಗಳನ್ನಾಡುತ್ತಾಳೆ. ಆದರೆ ಮೇಘನಾದ ಅದಕ್ಕೆಲ್ಲ ಲಕ್ಷ್ಯ ಕೊಡುವುದಿಲ್ಲ. ಆದರೂ ತಾರಾಕ್ಷಿ ತನ್ನ ತಲ್ಲಣವನ್ನು ಪತಿಯ ಮುಂದೆ ತೋಡಿಕೊಂಡು "ತಿರಸ್ಕರಿಸದಿರ್, ವೀರರವ, ಪೆಣ್ಣೆದೆಯಳಲ್ಕೆಯಂ, ಒಲಿದೊಲವಿನಾಶಂಕೆ

ಅರ್ಥಮಿಲ್ಲದುದಲ್ತು"[೭೩] ಎಂದು ಪರಿಪರಿಯಾಗಿ ಭಿನ್ನಯಿಸುತ್ತಾಳೆ. ಮಂತ್ರಾಲೋಚನೆಯಲ್ಲಿ ತೊಡಗಿರುವ ನಿಮಗೆ ಸಾಮಾನ್ಯರು ಕಾಣುವ ದರ್ಶನದ ಅರಿವಾಗದೆಂದು ಟೀಕಿಸುತ್ತಾಳೆ. ಲಂಕೆಗೆ ಏನು ಕೇಡೊದಗುತ್ತದೋ ಎಂದು ಚಿಂತಿಸುತ್ತಾ ತನ್ನ ಮನಸ್ಸನ್ನು ತೆರೆದಿಡುತ್ತಾಳೆ:

"ರಾಮಸತಿಯಂ ಮಾನವನಪಹರಿಸಿ ತಂದಾ
ಮೊದಲ್ಗೊಂಡು ತೋರುತಿವೆ ದುಶ್ಯಕುನಗಳ್, ನನಗೊ
ದುಃಸ್ವಪ್ನಮಯಮಿರುಳ್. ಆ ಮಹಾತಾಯಿಯನ್
ಹದಿಬದೆಯರಧಿದೇವಿಯಂ ಮಾವನೆಂತಕ್ಕೆ
ತಂದಾಯ್ತು. ವಶವಾಗದವಳನಿನ್ನಾದೊಡಂ
ಹಿಂದಕೊಪ್ಪಿಸುವಂತೆ ತಿದ್ದಬಾರದೆ ನಿಮ್ಮ ಆ
ತಂದೆಯಂ".

(ಶ್ರೀರಾಮಾಯಣದರ್ಶನಂ ಪುಟ.೪೪೯)

ತಾರಾಕ್ಷಿಯ ಈ ಮಾತುಗಳು ಇಂದ್ರಜಿತುವಿನ ಮನಸ್ಸಿಗೆ ಅರಿವು ಮೂಡಿಸುತ್ತವೆ. ಸೀತೆಯ ಬಗೆಗೆ ಅನಲೆಯಿಂದ ಕೇಳಿ ತಿಳಿದ ತಾರಾಕ್ಷಿ ಸೀತೆಯನ್ನು'ಹದಿಬದೆಯರಧಿದೇವಿ' ಎಂದು ಪೂಜನೀಯಭಾವದಿಂದ ಕಂಡಿದ್ದಾಳೆ. ಮಾವನ ತಪ್ಪನ್ನು ಎತ್ತಿತೋರಿಸಿ ಪತಿಗೆ ಅದನ್ನು ತಿದ್ದಲು ಹೇಳುವುದು ಗಮನಿಸಲೇಬೇಕಾದ ಸಂಗತಿ. ಆದರೆ ತನ್ನ ಪ್ರಿಯ ಸತಿಯ ಮಾತಿಗೆ ಲಕ್ಷ್ಯವನ್ನೇ ಕೊಡದ ಇಂದ್ರಜಿತು " ಈ ಲಂಕೆ ದುರ್ಗಂ ದಿಟಂ; ದುಸ್ಸಾಧ್ಯಮಾರ್ಗ್ಗಾದೊಡಂ!"[೭೪] ಎಂದು ಹೇಳಿ ತಾರಾಕ್ಷಿಯನ್ನು ಪ್ರೀತಿಯಿಂದ ಸಂತೈಸುತ್ತಾನೆ. ರಾವಣನ ಆಜ್ಞಾಪಾಲಕನಾದ ಇಂದ್ರಜಿತು ಇಷ್ಟುಬಿಟ್ಟರೆ ಮತ್ತೇನನ್ನು ಮಾಡಲು ಸಾಧ್ಯವಾಗುತ್ತಿತ್ತು?

ಇಂದ್ರಜಿತು ಮಡಿದನೆಂಬ ಸುದ್ದಿ ತಿಳಿದ ತಾರಾಕ್ಷಿಯು ದಿಕ್ಕುಕಾಣದೇ ರೋದಿಸುತ್ತಾಳೆ. ಅನಲೆ ಇವಳನ್ನು ಸಂತೈಸಲೆತ್ನಸಿ ಸೋಲುತ್ತಾಳೆ. ತಾರಾಕ್ಷಿಯು ಮೇಘನಾದ ಸ್ವಾಮಿಯ ಆತ್ಮದಲ್ಲಿ ಸ್ಥಿರವಾಗಲು ನಿಶ್ಚಯಿಸಿ ಆತನ ದೇಹದೊಡನೆ ಚಿತೆಯೇರಲು ಮುಂದಾಗುತ್ತಾಳೆ. ರಾವಣನು ತಾರಾಕ್ಷಯನ್ನು ಸಂತೈಸುವಲ್ಲಿ ಆಡುವ ನುಡಿಗಳು:

ತಡೆ, ಮಗಳೆ
ಕಡಲುಕ್ಕುವೀ ಕಣ್ಣೊಡಲ ಬಡಬನಂ; ಲಂಕೆ
ಕುಂತುವುದು ಕಣ್ಣೀರೊಳಳ್ದು; ಸುಟ್ಟುರಿದನೀ
ಲಂಕಾಧಿಪಂ, ನಿನ್ನ ದುಃಖ ದಾರುಣದವದ
ದಳ್ಳುರಿಗೆ! ನಿನ್ನಿಂದೆ ಮುಂದೆ ರಾಕ್ಷಸ ಕುಲಂ!
ನೀನೇಯಿನ್ ಲಂಕಾಧಿದೇವಿ, ಲಂಕಾಲಕ್ಷ್ಮಿ;
ನೀಂ ಬರ್ದುಕಲುಳಿವುದೆಮ್ಮೀ ವಂಶಮಿಲ್ಲದಿರೆ
ನೀನೆ ಕಾರಣಮಾಗೆ, ಕುಲಕೆ ಕೊನೆ! ತಾಳ್, ಮಗಳೆ;
ತಾಳಿ ಬಾಳ್; ಬಾಳಿ ಬಾಳಿಸು ನಮ್ಮ ಬಳಿಯ;

(ಶ್ರೀರಾಮಾಯಣದರ್ಶನಂ ಪುಟ.೭೩೯)

----------

೭೩. ಕುವೆಂಪು, ಶ್ರೀರಾಮಾಯಣದರ್ಶನಂ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು ೨, ಎರಡನೇ ಆವೃತ್ತಿ೨೦೦೪, ಪು. ೪೪೯
೭೪. ಅದೇ.

ರಾವಣನ ಈ ಮಾತುಗಳು ಲಂಕೆಯಲ್ಲಿ ತಾರಾಕ್ಷಿದೇವಿಗೆ ಸ್ಥಾನಮಾನ ಹಾಗೂ ಆಕೆಯಿಂದಲೇ ಲಂಕೆಯ ಮುಂದಿನ ಜೀವನ ಬೆಳಗಬೇಕೆಂದು ತಿಳಿಯುತ್ತದೆ. ವಜ್ರಾರಿಯನ್ನು ಕಾಪಾಡಿ ಬೆಳೆಸಿ ಲಂಕೆಯ ವಂಶವನ್ನು ಬೆಳಗಿಸಬೇಕಂದು ಲಂಕಾಲಕ್ಷ್ಮಿಯಾದ ತಾರಾಕ್ಷಿಯಲ್ಲಿ ಲಂಕೇಶ್ವರನು ಬೇಡುವುದು ಆತನು ತನ್ನ ವಂಶದ ಬಗ್ಗೆ, ಲಂಕೆಯ ಮುಂದಿನ ಜೀವನದ ಬಗ್ಗೆ ಹೊಂದಿರುವ ಕಾಳಜಿ ವ್ಯಕ್ತವಾಗುತ್ತದೆ. ಮೊಮ್ಮಗ ವಜ್ರಾರಿಯೇ ಲಂಕೆಗೆ ಉಳಿದಿರುವ ಆಶಾಕಿರಣವೆಂಬುದೂ ವೇದ್ಯವಾಗುತ್ತದೆ. ಆದ್ದರಿಂದಲೇ ರಾವಣ ಸೊಸೆಯನ್ನು ಸಮಾಧಾನಿಸಲು, ಆಕೆಯ ಮೇಲೆ ಮಹತ್ತರವಾದ ಜವಾಬ್ದಾರಿಯನ್ನು ಹೊರಿಸಲು ಮುಂದಾಗುತ್ತಾನೆ:

"ಮಗಳೆ ನೋಡಿಲ್ಲಹುದು ಬರ್ದುಕಿಗರ್ಥಂ, ಮತ್ತೆ
ಬಾಳ್ಗೆ ಗುರಿ ನಿನಗೆ, ನಿನ್ನ ಸಾವಿನ ಸುಖವನೀ
ಮೇಘನಾದನ ತೇಜದೇಳ್ಗೆಗೋಸುಗಮಾಗಿ
ಬೇಳ್ ನಿನ್ನ ದುಃಖಮಂ ಮರೆ ಈತ ನೆಳನಗೆಯ
ಸುಖಕೆ ತೊರೆ ನಿನ್ನಸರ್ವಸ್ವಮಂ ಈ ನಿನ್ನ
ಮೇಣೆಮ್ಮ ಸರ್ವಸ್ವಕ್ಕಾಗಿ".

(ಶ್ರೀರಾಮಾಯಣದರ್ಶನಂ ಪುಟ.೭೪೦)

ಲಂಕೆಯ ವಂಶವನ್ನು ಬೆಳಗುವ ಪ್ರಿಯಪುತ್ರನಾದ ವಜ್ರಾರಿಗಾಗಿ ತಾರಾಕ್ಷಿಯ ಬಾಳು ಮುಡುಪಾಗುತ್ತದೆ. ಮಾವನು ಕೊಟ್ಟ ಜವಬ್ದಾರಿಯನ್ನು ಪಾಲಿಸಲು ಲಂಕಾಲಕ್ಷ್ಮಿ ನಿಶ್ಚಯಿಸಿ ಜೀವನವನ್ನು ಮಗನಿಗಾಗಿ ಮುಡುಪಿಡುತ್ತಾಳೆ.

ಯಾವುದೇ ಚಿಂತೆ ಇಲ್ಲದೇ ಸದಾ ಪತಿ ಮತ್ತು ಮಗಳ ಹಿತಕ್ಕಾಗಿ ಜೀವಿಸುತ್ತಾ ತನ್ನ ಬಾಳದೋಣಿಯನ್ನು ದಡ ಸೇರಿಸುವವಳು ಸರಮೆ. ಸಾತ್ವಿಕ ಶಿರೋಮಣಿ, ಧರ್ಮಜ್ಞ, ವಿಭೀಷಣನಿಗೆ ಅನುರೂಪಳಾದ ಸತಿ. ಸರಮೆಯ ಅರಮನೆ ಸಂಸ್ಕೃತಿಯ ತವರು. ಅದರೊಳಗಿನ ಅಪರೂಪದ ಕಲಾರತ್ನ ಅನಲೆ. ಆಂಜನೇಯನು ಧೂಪಧೂಮ ರೂಪದಲ್ಲಿ ಇವರ ಅರಮನೆ ಪ್ರವೇಶಿಸಿದಾಗ ಅನಲಾಕುಮಾರಿ ವೀಣಾನಾದವನ್ನು ತಂದೆ ವಿಭೀಷಣ ಮತ್ತು ತಾಯಿ ಸರಮೆಗೆ ಉಣಬಡಿಸುತ್ತಿರುತ್ತಾಳೆ. ಸಂಯಮ, ಸಾತ್ವಕತೆ, ನಯ ವಿನಯಗಳು ಆ ಸ್ಥಳದಲ್ಲಿ ತುಂಬಿರುತ್ತವೆ. ಸಾತ್ವಿಕತೆ, ಶಾಂತತೆ ದಯಾಪರತೆಗಳೇ ಮೂರ್ತಿವೆತ್ತಂತಿರುವ ಸರಮಾದೇವಿ ಅರಮನೆಯ ಗೃಹಲಕ್ಷ್ಮಿಯಾಗಿರುವಾಗ ಅರಮನೆಯಲ್ಲಿ, ವಿಭೀಷಣನಲ್ಲಿ ಮನದಲ್ಲಿ ಮತ್ತು ಅನಲೆಯಲ್ಲಿ ಸಾತ್ವಿಕತೆ, ಶಾಂತತೆ ತುಂಬಿರಲೇಬೇಕು. ಅನಲೆಯು ವೀಣಾಗಾನವನ್ನು ನಿಲ್ಲಿಸಿ ಮನದ ತಳಮಳವನ್ನು ತಂದೆಯ ಮುಂದೆ ತೋಡಿಕೊಂಡಾಗ, ಸರಮೆಯು ಪತಿಯ ಅನಲೆಯು ಸೀತಾದೇವಿಯನ್ನು ಕಂಡಾಗಿನಿಂದಲೂ ಅನ್ಯಳಂತೆ ವರ್ತಿಸುತ್ತಿರುವುದನ್ನು ಸೂಕ್ಷ್ಮವಾಗಿ ಗಮನಿಸಿ ಹೇಳುತ್ತಾಳೆ. ತಾಯಿ ಸಹಜವಾಗಿ ಆಡುವ ಮಾತುಗಳಿವು. ಆದರೆ ಇದು ಸೀತೆ ಮತ್ತು ಅನಲೆಯಿಬ್ಬರ ಒಡನಾಟದ ದ್ಯೋತಕವಾಗಿ ಸಹೃದಯರ ಮನಕ್ಕೆ ಹೊಸ ಅರ್ಥವನ್ನು ಕೊಡುತ್ತದೆ. ಇಂದ್ರಜಿತುವಿನ ಮರಣದಿಂದ ಬೇಯುತ್ತಿದ್ದ ತಾರಾಕ್ಷಿಯನ್ನು ಸಂತೈಸುವ, ವಜ್ರಾರಿಯನ್ನು ನೋಡಿಕೊಳ್ಳುವ ಕೆಲಸಗಳನ್ನು ಪ್ರೀತಿಯಿಂದಲೇ ಮಾಡುವ ಸರಮೆಯು ವಿಭೀಷಣನು ಲಂಕೆಯನ್ನು ತೊರೆದು ಧರ್ಮಪಾಲನೆಗಾಗಿ ರಾಮನನ್ನು ಸೇರಿದಾಗ ಪತಿಯನ್ನು ಹಿಂಬಾಲಿಸದೇ ರಾವಣನ ಬಳಿಯಿರಲು ಅಪ್ಪಣೆ ಪಡೆದಿರುವ ಅನಲೆಯ ರಕ್ಷಣೆಗಾಗಿ ನಿಲ್ಲುತ್ತಾಳೆ. ಸರಮೆಯಲ್ಲಿ ಯಾವುದೇ ಉದ್ವೇಗಕ್ಕೆ, ಕೋಪತಾಪಕ್ಕೆ ಸ್ಥಾನವಿಲ್ಲ. ಸೀತೆಯನ್ನು ಅಲಂಕರಿಸಿಕೊಂಡು ರಾಮನ ದರ್ಶನಕ್ಕೆ ಕರೆದೊಯ್ಯುವ ಕೆಲಸದಲ್ಲಿ ಅನಲೆ ಮತ್ತು ಸರಮೆಯರ ಪಾತ್ರ ಮುಖ್ಯವಾಗುತ್ತದೆ. ಅನಲೆಯ

ಮಾತೆ ಸರಮೆ ಸಂಯಮ, ಸಾತ್ವಿಕತೆಯ ಪ್ರತಿರೂಪವಾಗಿ ಲಂಕೆಯಲ್ಲಿ ವಿಭೀಷಣ, ಅನಲೆಯ ಹಾಗೂ ಸೊಸೆಮೊಮ್ಮಗನ ಕ್ಷೇಮಕಾತರೆಯಾಗಿ ಜೀವಿಸಿ ಎಲ್ಲರ ಪ್ರೀತಿಯಲ್ಲಿ ಬದುಕಿದವಳು ಸರಮೆ.

ಹೀಗೆ ಕುವೆಂಪು ಅವರು 'ಶ್ರೀ ರಾಮಾಯಣ ದರ್ಶನಂ' ನಲ್ಲಿ ಸೃಜಿಸಿರುವ ಎಲ್ಲ ಸ್ತ್ರೀ ಪಾತ್ರಗಳೂ ಒಂದಲ್ಲಾ ಒಂದು ರೀತಿಯಲ್ಲಿ ಊರ್ಧ್ವಗಾಮಿಯಾಗಿ ಸಂಚರಿಸಿ ಲೋಕಮನ್ನಣೆಯನ್ನು ಪಡೆಯುತ್ತವೆ. ಕಾವ್ಯದಲ್ಲಿ ಅಲ್ಲೊಮ್ಮೆ ಇಲ್ಲೊಮ್ಮೆ ಕಾಣಿಸಿಕೊಳ್ಳುವ ಸ್ತ್ರೀ ಪಾತ್ರಗಳು ಕೂಡ ಹೆಚ್ಚು ಪರಿಣಾಮಕಾರಿಯಾಗಿ ಮೂಡಿಬಂದು, ಕಾವ್ಯಕ್ಕೆ ಹೊಸ ಮೆರುಗು ನೀಡಿರುವುದು ಗಮನಾರ್ಹವಾದ ಅಂಶವೆನ್ನಬಹುದು.

## ೫. ಸಮಾರೋಪ

ಕುವೆಂಪು ಅವರಿಂದ ರಚಿತವಾಗಿರುವ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯ ಒಂದು 'ಅಕ್ಷಯ ಚಿನ್ನದ ಗಣಿ' ಇದರಿಂದ ಮೌಲ್ಯವೆಂಬ ಚಿನ್ನವನ್ನು ಎಷ್ಟು ಮೊಗೆದು ಮೊಗೆದು ತೆಗೆದರೂ ಮುಗಿಯುವುದಿಲ್ಲ. ಯಾವುದೋ ಒಂದು ಚೌಕಟ್ಟಿನಲ್ಲಿ ವಿಮರ್ಶಿಸಿದರೆ ಆ ಮಹಾಕಾವ್ಯಕ್ಕೆ ನ್ಯಾಯ ಒದಗಿಸಿದಂತಾಗುವುದಿಲ್ಲ. ಆದರೂ ಆ ಮಹಾಸಾಗರದ ಕೆಲವು ಹನಿಗಳನ್ನಾದರೂ ಸಹೃದಯರ ಕಣ್ಣಿಗೆ ಕಾಣುವಂತೆ ತೆರೆದಿಡುವುದು ಈ ನಿಬಂಧದ ಉದ್ದೇಶವಾಗಿದೆ.

ಕುವೆಂಪು ಅವರ ಸ್ತ್ರೀ ಪರ ನಿಲುವುಗಳು ಎಲ್ಲರ ಮನ್ನಣೆ ಗೌರವಕ್ಕೆ ಪಾತ್ರವಾಗುವಂಥದ್ದು, ಸಹಸ್ರಾರು ವರ್ಷಗಳಿಂದ ಕಳಂಕಿತೆ ಎಂಬ ಪಟ್ಟ ತೆಗೆದುಕೊಂಡವಳು ಕೂಡಾ ಅವರ ಸೂಕ್ಷ್ಮ ಪ್ರಜ್ಞೆಯ ಕೆತ್ತನೆಯಿಂದ ಪಾವನಳಾಗುತ್ತಾಳೆ. ಇದಕ್ಕೆ ನಿದರ್ಶನವೆಂದರೆ ಮಂಥರೆ ಮತ್ತು ಚಂದ್ರನಖಿ, ರಾಮಾಯಣದ ಮೂಲಪಾತ್ರಗಳನ್ನು ಕಥೆಗೆ ಚ್ಯುತಿಬರದ ರೀತಿಯಲ್ಲಿ ತೆಗೆದುಕೊಂಡು ಉದ್ಧಾರಿಸಿದ್ದಾರೆ. ಎಲ್ಲರ ಮನ್ನಣೆಗೆ ಪಾತ್ರವಾಗುವಂತೆ ಚಿತ್ರಿಸಿದ್ದಾರೆ. ಕುವೆಂಪು ಅವರ ನ್ಯಾಯಪರ ಕರುಣಾದೃಷ್ಟಿಗೆ ಸ್ತ್ರೀ ಪುರುಷ ಎಂಬ ಭೇದವಿಲ್ಲ. ರಾವಣನ ಮನಃ ಪರಿವರ್ತನೆಯು ಎಷ್ಟುಮುಖ್ಯವೋ ಅಷ್ಟೇ ಮುಖ್ಯವಾದದ್ದು ಚಂದ್ರನಖಿಯ ಮನಃ ಪರಿವರ್ತನೆ ಮತ್ತು ಮಂಥರೆಯ ಮನಃ ಪರಿವರ್ತನೆ.

ಸೀತೆಯ ಹದಿಬದೆಯ ಹಿರಿಮೆಯ ಅನಾವರಣವು ಎಷ್ಟು ಮುಖ್ಯವೋ ಅಷ್ಟೇಮುಖ್ಯವಾಗಿ ಊರ್ಮಿಳೆಯ ಹದಿಬದೆಯ ಶ್ರೇಷ್ಟತೆಯನ್ನು ಅನಾವರಣಗೊಳಿಸಿದ್ದಾರೆ. ತಾರೆ ಕೂಡ ಇವರಿಗೆ ಸರಿಸಮಾನವಾದ ಹದಿಬದೆ ಎಂದು ಸೂಕ್ಷ್ಮವಾಗಿ ಸೂಚಿಸಿ ಮುನ್ನಡೆಯುತ್ತಾರೆ. ಎಲ್ಲಕ್ಕಿಂತ ಮುಖ್ಯವಾಗಿ ಕುವೆಂಪು ಅವರು ಋಷಿಮುನಿಗಳು, ಅವರ ಪತ್ನಿಯರು, ಅವರ ಆಶ್ರಮದ ಪ್ರಶಂತ ವಾತಾವರಣ ಹಾಗೂ ಅವರ ಸಾತ್ವಿಕತೆ, ಸಂಯಮ, ಉದಾರತೆಯ ಚಿತ್ರಣವನ್ನು, ವರ್ಣನೆಯಲ್ಲಿ ಹೆಚ್ಚಿನನ ಆಸಕ್ತಿಯನ್ನು ವಹಿಸಿದ್ದಾರೆ.

> "ಕಲೆಯನಲ್ಲದೆ ಶಿಲ್ಪಿ ಶಿಲೆಯನೇಂ ಸೃಷ್ಟಿಪನೆ?
> ತನು ನಿನ್ನದಾದೊಡಂ ಚೈತನ್ಯಮೆನ್ನದೆನೆ
> ಕಥೆ ನಿನ್ನದಾದೊಡಂ, ನೀನೇ ಮೇಣಾಶೀರ್ವಾದಿಸಿ
> ಮತಿಗೆ ಭೋದವತ್ತಿತ್ತೊಡಂ, ಕೃತಿನನ್ನದರ್ಶನಂ
> ಮೂರ್ತಿವೆತ್ತೊಂದಮರ ಕಾವ್ಯದಾಕೃತಿಯಲ್ತೆ?"
>
> (ಶ್ರೀರಾಮಾಯಣದರ್ಶನಂ ಪುಟ.೬.)

ಕುವೆಂಪು ಅವರ ಈ ಮಾತುಗಳು ಸತ್ಯಸ್ಯ ಸತ್ಯವಾದದ್ದು ಎಂಬುದನ್ನು 'ಶ್ರೀ ರಾಮಾಯಣ ದರ್ಶನಂ' ಅಭ್ಯಾಸಿಸಿದ, ಆಸ್ವಾದಿಸಿದ ಪ್ರತಿಯೊಬ್ಬ ಸಹೃದಯನಿಗೂ ವೇದ್ಯವಾಗುತ್ತದೆ. ಧನ್ಯತೆಯ ಭಾವ ಮೂಡುತ್ತದೆ. ಕುವೆಂಪು ಅವರಿಂದ ರೂಪು ತಳೆದಿರುವ ವಾಕ್ ಸ್ವರೂಪಿಯ ಭವ್ಯತೆ ಕಾವ್ಯದ ಅಮರತೆಗೆ ಕಾರಣವಾಗುತ್ತದೆ. 'ರನ್ನ' ಕವಿಯನ್ನು ತಪೋನಂದನದಲ್ಲಿ 'ಶಕ್ತಿಕವಿ' ಎಂದು ಕೊಂಡಾಡಿರುವ ಕುವೆಂಪು ಅವರು 'ಶ್ರೀ ರಾಮಾಯಣ ದರ್ಶನಂ' ನಲ್ಲಿ ಇಷ್ಟೊಂದು ದರ್ಶನವೈಭವ ,ಬರಹದ ಗಟ್ಟಿತನ, ಹಾಗೂ ಧ್ವನಿಶಕ್ತಿಯಿಂದ ತುಂಬಿರುವುದನ್ನು ಕಂಡಾಗ ಅವರು 'ಆಧುನಿಕ ಶಕ್ತಿಕವಿ' ಯಾಗಿ ಸಹೃದಯರಿಗೆ ಗೋಚರಿಸಿದರೆ ಆಶ್ಚರ್ಯವಿಲ್ಲ. ಇದಕ್ಕೆ ನಿದರ್ಶನವಾಗಿ

ಅನೇಕ ಪ್ರಸಂಗಗಳನ್ನು ತೆಗೆದುಕೊಳ್ಳಬಹುದು. ಅದರಲ್ಲಿ ಧಾನ್ಯಮಾಲಿನಿ ಹಾಗೂ ವಾಲಿಯ ಸಾವಿನ ಪ್ರಸಂಗಗಳನ್ನು ಮಾತ್ರ ಉದಾಹರಿಸುತ್ತೇನೆ.

ವಾಲಿಯು ಮನಃ ಪರಿವರ್ತನೆಗೊಂಡು ಸುಗ್ರೀವನನ್ನು ಮುಸಿಕದನದ ನೆಪದಲ್ಲಿ ಹೊತ್ತುತಂದು ರುಮೆಗೆ ಕೊಡುವುದಾಗಿ ಪ್ರಯತ್ನಿಸಿದಾಗ ರಾಮನ ಬಾಣಾಘಾತಕ್ಕೆ ತುತ್ತಾಗಿ ಸಾವಿನಂಚಿಗೆ ಸರಿಯುತ್ತಾರೆ. ಶ್ರೀರಾಮನ ಮೂದಲಿಕೆಗೆ ವಾಲಿ ನೀಡುವ ಪ್ರತಿಕ್ರಿಯೆ:

"ಮಗಳೆನಗೆ ರುಮೆ! ತಾರೆ ತಾಂ ಸಾಕ್ಷಿ!"
(ಶ್ರೀರಾಮಾಯಣದರ್ಶನಂ ಪುಟ.೭೩೫)

ಈ ಮಾತುಗಳು ಎಷ್ಟೆಲ್ಲಾ ಅನುಮಾನಗಳನ್ನು ಪರಿಹರಿಸಿ ಎಲ್ಲರ ಶ್ರೇಯಸ್ಸಿಗೆ, ಉತ್ತಮ ಸಂಬಂಧಕ್ಕೆ ಭದ್ರತೆ ಒದಗಿಸುತ್ತದೆ.

ಧಾನ್ಯಮಾಲಿನಿಯು 'ಸೀತೆ'ಯಂಥ ಶ್ರೇಷ್ಠ ಹದಿಬದೆಯನ್ನು ಕಂಡು ತನ್ನ ತಪ್ಪಿಗಾಗಿ ಪಶ್ಚಾತ್ತಾಪದ ಬೇಗೆಯಲ್ಲಿ ಬೆಂದು ಸಾವಿನ ಕೊನೆಯ ಕ್ಷಣಗಳಲ್ಲಿ ನುಡಿಯುವ ಮಾತುಗಳು ಧ್ವನಿಪೂರ್ಣವಾಗಿವೆ.

"ಮುನಿಯದಿರ್ ಸ್ವಾಮಿ ಮೆಯ್ ಸೋಲ್ತುದು ದಿಟಂ; ಮನಂ
ಸುಡುತಿರ್ದುದನೇಗಳುಂ ಮೆಯ್‌ನಲ್ಲದೇಂ
ಮನವನಿತ್ತೆನೆ ರಾಕ್ಷಸಂಗೆ?"
(ಶ್ರೀರಾಮಾಯಣದರ್ಶನಂ ಪುಟ.೭೩೫)

ಈ ಮಾತುಗಳು ಧಾನ್ಯಮಾಲಿನಿಯ ಬಗ್ಗೆ ಸಹೃದಯರಲ್ಲಿ ಮರುಕ ಹುಟ್ಟಿಸುತ್ತವೆ. ಯಾರನ್ನೂ ಬಲವಂತವಾಗಿ ಕೂಡಲಿಚ್ಚಿಸದ; ತನಗೆ ಸೋಲದ ಹೆಣ್ಣುಗಳಿಲ್ಲವೆಂದು ಗರ್ವಿಸುವವನ ಗರ್ವವನ್ನು ತತ್‌ಕ್ಷಣವೇ ಹುಡಿಯಾಗಿಸುತ್ತದೆ. ರಾವಣನ ಮನದಲ್ಲಿ ತಣ್ಣಗಾಗದ ಅಗ್ನಿಯನ್ನು ಹೊತ್ತಿಸುತ್ತದೆ. ಈ ರೀತಿಯ ಶಕ್ತಿಯುತವಾದ, ಧ್ವನಿಪೂರ್ಣವಾದ ವಾಕ್ಯಗಳು ಪ್ರತಿಯೊಂದು ಪಾತ್ರದ ಬಾಯಲ್ಲೂ ಕಾಣಬಹುದಾಗಿದೆ. ಆದ್ದರಿಂದಲೇ ಕುವೆಂಪು 'ಆಧುನಿಕ ಶಕ್ತಿಕವಿ' ಎನಿಸುತ್ತಾರೆ.

ಕುವೆಂಪು ಅವರು ಕಾವ್ಯದ ಪ್ರತಿಯೊಂದು ಪಾತ್ರಕ್ಕೂ ತಮ್ಮದೇ ಆದ ಹೊಸ ಚೈತನ್ಯ ತುಂಬಿ ಬೃಹದಾಕಾರವಾಗಿ ಬೆಳೆದು ಸಾಹಿತ್ಯ ಲೋಕದಲ್ಲಿ ಹಸುರಾಗಿ ಉಳಿಯುವಂತೆ ಮಾಡಿದ್ದಾರೆ. 'ಸ್ತ್ರೀ ಪಾತ್ರಗಳ' ಅವಲೋಕನದಲ್ಲಿ ತೊಡಗಿ ಎಲ್ಲವನ್ನೂ ತೋರ್ಪಡಿಸಲಾಗಿದೆ. ಕಾಲಮಿತಿಯಲ್ಲಿ ಪ್ರಮುಖ ಸ್ತ್ರೀ ಪಾತ್ರಗಳ ಒಳಾಂತರಂಗವನ್ನು ಶೋಧಿಸಲು ಪ್ರಯತ್ನಿಸಿದ್ದೇನೆ. 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದ ಒಂದೊಂದು ಪಾತ್ರವೂ, ಒಂದೊಂದು ಪ್ರಸಂಗವೂ, ಒಂದೊಂದು ವಾಕ್ಯವೂ, ಒಂದೊಂದು ಪದವೂ ಸಂಶೋಧನೆಯ 'ಮಹಾವೃಕ್ಷ'ದ ವಿಸ್ತಾರಕ್ಕೆ ದಾರಿ ತೋರುತ್ತದೆಂದು ತಿಳಿದು ಈ ಮಹಾಕಾವ್ಯದಲ್ಲಿ ಕೆಲವು ಹನಿಯನ್ನಾದರೂ ಕಾಣಲು ಪ್ರಯತ್ನಿಸಿದೆನೆಂಬ ಸಂತದಿಂದ ಪ್ರಬಂಧಕ್ಕೆ ಮುಕ್ತಾಯ ಬರೆದಿದ್ದೇನೆ.

# ಪರಾಮರ್ಶನ ಗ್ರಂಥಗಳು

೧. ಕನ್ನಡ ವಿಮರ್ಶೆಯ ಮಾರ್ಗ - ಸಂ. ಪ್ರೊ. ಅರವಿಂದ ಮಾಲಗತ್ತಿ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವ ದಿದ್ಯಾನಿಲಯ, ಮಾನಸಗಂಗೋತ್ರಿ ಮೈಸೂರು, ಮೊದಲಮುದ್ರಣ ೨೦೦೪.

೨. ಕನ್ನಡ ವಾಲ್ಮೀಕಿ ರಾಮಾಯಣ : ಭಾಗ ೧, ಭಾಗ ೨ - ಡಾ. ಸಿ.ಎನ್. ಶ್ರೀನಿವಾಸ ಅಯಂಗಾರ್, ಡಿ.ವಿ.ಕೆ ಪ್ರಕಾಶನ, ಮೈಸೂರು, ಐದನೆಯ ಮುದ್ರಣ ೨೦೦೨.

೩. ಕುವೆಂಪು - ಡಾ. ಪ್ರಧಾನ ಗುರುದತ್ತ, ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈವೆಟ್ ಲಿಮಿಟೆಡ್, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಬೆಂಗಳೂರು, ಮೂರನೆ ಮುದ್ರಣ ೨೦೦೬.

೪. ಕುವೆಂಪು ಸಾಹಿತ್ಯಾವಲೋಕನ - ಸಂ. ಎಸ್.ಚನ್ನಪ್ಪ, ಕುವೆಂಪು ವಿಚಾರ ವೇದಿಕೆ, ಕೆ.ಟಿ. ಬಡಾವಣೆ, ಮೈಸೂರು, ಮೊದಲಮುದ್ರಣ ೨೦೦೪.

೫. ಕುವೆಂಪು ಕೃತಿ ವಿಮರ್ಶೆ -ಪ್ರ.ಸಂ. ಪ್ರೊ ಅರವಿಂದ ಮಾಲಗತ್ತಿ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವ ವಿದ್ಯಾಲಯ, ಮೊದಲಮುದ್ರಣ ೨೦೦೬.

೬. ಶ್ರೀ ಕುವೆಂಪು - ಸಂ. ಜಿ.ಎಸ್.ಶಿವರುದ್ರಪ್ಪ, ಪ್ರಸಾರಾಂಗ, ಬೆಂಗಳೂರು ವಿಶ್ವ ವಿದ್ಯಾಲಯ, ಬೆಂಗಳೂರು, ಮೂರನೇ ಮುದ್ರಣ ೨೦೦೩.

೭. ಕುವೆಂಪು ಸಾಹಿತ್ಯ ಸಂವೇಕ್ಷಣೆ -ಸುಧಾಕರ, ಸಹ್ಯಾದ್ರಿ ಪ್ರಕಾಶನ, ಕವಿಶೈಲ, ಶ್ರೀಕುವೆಂಪು ವಿದ್ಯಾಪರಿಷತ್ತು, ಜಯಲಕ್ಷ್ಮಿಪುರಂ, ಮೈಸೂರು ೧೨, ಮೊದಲ ಮುದ್ರಣ ೧೯೮೮.

೮. 'ಗಂಗೋತ್ರಿ' ಅಭಿನಂದನಾ ಗ್ರಂಥ - ಸಂ. ದೇ.ಜ.ಗೌ, ಗೀತಾಬುಕ್‌ಹೌಸ್, ಮೈಸೂರು, ಮೊದಲ ಮುದ್ರಣ ೧೯೬೮.

೯. ಶ್ರೀ ರಾಮಾಯಣ ದರ್ಶನಂ - ಕುವೆಂಪು, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಭವನ, ಬೆಂಗಳೂರು ೨, ಎರಡನೇ ಆವೃತ್ತಿ ೨೦೦೪.

೧೦. ಶ್ರೀ ರಾಮಾಯಣ ದರ್ಶನಂ - ಡಾ.ಸಿ.ಪಿ. ಕೃಷ್ಣಕುಮಾರ್, ಪ್ರಚಾರ ಪುಸ್ತಕ ಮಾಲೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಎರಡನೆ ಮುದ್ರಣ ೧೯೮೯.

೧೧. ಶ್ರೀ ರಾಮಾಯಣ ದರ್ಶನಂ : ಪಾತ್ರಲೋಕ - ಡಾ. ಎಚ್.ಜೆ. ಲಕ್ಕಪ್ಪಗೌಡ, ಪವನಜ ಪ್ರಕಾಶನ, ಸದಾಶಿವನಗರ, ಬೆಂಗಳೂರು, ಮೊದಲ ಆವೃತ್ತಿ ೨೦೦೬.

೧೨. ಶ್ರೀ ರಾಮಾಯಣ ದರ್ಶನಂ ವಚನ ಚಂದ್ರಿಕೆ –ದೇಜಗೌ, ಡಿ.ವಿ.ಕೆ.ಪ್ರಕಾಶನ, ಕೃಷ್ಣಮೂರ್ತಿ ಪುರಂ, ಮೈಸೂರು ೪, ಏಳನೆಯ ಮುದ್ರಣ ೨೦೦೭.

೧೩. ಶ್ರೀ ರಾಮಾಯಣ ದರ್ಶನಂ ವಿಮರ್ಶಾತ್ಮಕ ಅಧ್ಯಯನ – ಡಾ. ಎಚ್.ಜೆ. ಲಕ್ಕಪ್ಪಗೌಡ, ಸಹ್ಯಾದ್ರಿ ಪ್ರಕಾಶನ, ಕವಿಶೈಲ, ಶ್ರೀಕುವೆಂಪು ವಿದ್ಯಾಪರಿಷತ್ತು, ಜಯಲಕ್ಷ್ಮಿಪುರಂ, ಮೈಸೂರು ೧೨, ಮೊದಲ ಮುದ್ರಣ ೧೯೯೭.

೧೪. ವಿಮರ್ಶೆಯ ಮಾರ್ಗ – ಪ್ರ.ಸಂ. ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವ ವಿದ್ಯಾನಿಲಯ, ಎರಡನೆಯ ಮುದ್ರಣ, ೧೯೯೨.

೧೫. ಸಹ್ಯಾದ್ರಿ – ಸಂ. ದೇ.ಜ.ಗೌ, ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಜಯಲಕ್ಷ್ಮಿಪುರಂ, ಮೈಸೂರು, ಮದಲ ಮುದ್ರಣ ೧೯೭೫.

೧೬. ಸಾಲುದೀಪಗಳು – ಸಂ. ಜಿ.ಎಸ್. ಸಿದ್ಧಲಿಂಗಯ್ಯ, ಎಂ. ಎಚ್. ಕೃಷ್ಣಯ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಜೆ.ಸಿ. ರಸ್ತೆ, ಬೆಂಗಳೂರು ೨, ಮೂರನೆಯ ಮುದ್ರಣ ೨೦೦೧.

